# ಜಗ್ಗೋಜಿ

## ಹೆಸರಾಂತ ಕಳ್ಳನ ಅನುಭಾವೀ ಜೀವನದ ಕಥೆ

ರಾ.ಶಿ.



ವಸಂತ ಪ್ರಕಾಶನ
ನಂ. 360, 10 'ಬಿ' ಮೈನ್,
ಕಾಸ್ಮೊಪಾಲಿಟನ್ ಕ್ಲಬ್ ಎದುರು, ಜಯನಗರ 3ನೇ ಬ್ಲಾಕ್
ಬೆಂಗಳೂರು - 560 011. ದೂರವಾಣಿ: 22443996

*JAGGOJI* - A collection of stories of Ra. Shi., Published by Vasantha Prakashana, No. 360, 10 'B' Main, Jayanagar 3rd Block, Bangalore-560 011, Ph: 22443996

ಪುಟಗಳು: 8 + 194 = 192

ಮೊದಲನೆಯ ಮುದ್ರಣ : **1962**
ಎರಡನೆಯ ಮುದ್ರಣ : **2007**



ಬೆಲೆ: ರೂ. **95/-**

ಮುಖಪುಟ : ನಾಗೇಂದ್ರ ಪ್ರಸಾದ್

ISBN: 81-89818-45-7

ವಸಂತ ಪ್ರಕಾಶನ
ನಂ. 360, 10 'ಬಿ' ಮೈನ್,
ಕಾಸ್ಮೊಪಾಲಿಟನ್ ಕ್ಲಬ್ ಎದುರು ರಸ್ತೆ
ಜಯನಗರ 3ನೇ ಬ್ಲಾಕ್,
ಬೆಂಗಳೂರು - 560 011, ದೂರವಾಣಿ: 22443996

ಡಿ.ಟಿ.ಪಿ.: ಲೈಜರ್ ಲೈನ್ ಗ್ರಾಫಿಕ್ಸ್
ಬೆಂಗಳೂರು-27.
ದೂರವಾಣಿ: 22278231.

ಮುದ್ರಕರು : ಸತ್ಯಾನಂದ ಪ್ರಿಂಟರ್ಸ್, ಬೆಂಗಳೂರು

## ಪರಿವಿಡಿ

ಜಗ್ಗೋಜ!

## ಮೊದಲ ನುಡಿ

DOKKALA KONDA or Dongala Konda.

The Robber hills so named from their affording a shelter to the Bandit who used to pluender the neighbouring country.

**–Rice's Gazetter of Mysore.**

ಈ ಕಾಲ್ಪನಿಕ ಕತೆಯು ಕೊಂಡೆನಕ ಪಲ್ಲಿಯಲ್ಲಿ ನಡೆಯಿತು ಎನ್ನುವುದಕ್ಕೆ ಮೇಲಿರುವ ಟಿಪ್ಪಣಿಯೇ ಕಾರಣ. ಮಿಕ್ಕವೆಲ್ಲಾ ಶುದ್ಧ, ಶತಾಂಶ ನೂರರಷ್ಟು ಕಾಲ್ಪನಿಕ!!

ಈಗಿನ ಕಾನೂನು ರಕ್ಷಣೆ ಹೊಂದಿದ, ಸಮಾಜದಲ್ಲಿ ಮಾನವಾಗಿ ಬಾಳುವ - ಆದರೂ ದರೋಡೆಕಾರರಾದ ಕಳ್ಳಕೊರಮರಿಗಿಂತಲೂ ಹಿಂದೆ, ಜೀವವನ್ನು ಮಾನವನ್ನು ಮುಡುಪಿಟ್ಟು ಕಳ್ಳತನ ಮಾಡುತ್ತಿದ್ದವರು, ಉತ್ತಮ ಜೀವಿಗಳು ಎಂದೇ ನನ್ನ ಭಾವನೆ.

ಮುಂದೆ ಕಾಲ ಭೈರವಿಯು ಅಣತಿಯಿತ್ತರೆ, ಈಗಿನ ಸಮಾಜದ ದರೋಡೆಕಾರರ, ಕಳ್ಳಕಾಕರ, ನಿಧಿಯನ್ನು, ಜಗ್ಗೋಜಿಯ ಮಗ ಬುದ್ದೋಜಿಯಿಂದ ಸಂಗ್ರಹಿಸಬೇಕೆಂಬ ಕಿರಿಯಾಸೆ ಉಂಟು. ಮುದುಕರಿಗೆ ಚಪಲ ಸಹಜ!

–ರಾ.ಶಿ.

## ಮುನ್ನುಡಿ

ರಾಶಿಯವರ ಮೊದಲ ಒಲವು ನಗೆಸಾಹಿತ್ಯವಾಗಿದ್ದರೂ, ಅವರಿಗೆ ಕಳ್ಳರ ಹಾಗೂ ದೆವ್ವ ಪಿಶಾಚಿಗಳ ಕುರಿತು ಕಥೆ ಹೆಣೆಯುವುದರಲ್ಲಿ ಬಹಳ ಆಸಕ್ತಿ. 'ಜಗ್ಗೊಜಿ' ಅವರ ಲೇಖನಿಯಿಂದ ಮೂಡಿಬಂದ ಅತ್ಯುತ್ತಮ ಕಳ್ಳನ ಪಾತ್ರ ಅನಿಸುತ್ತದೆ. ಆತ, ಇಂಗ್ಲೆಂಡಿನ ಜಾನಪದದಲ್ಲಿ ಹಾಡಿಹೊಗಳುವ ರಾಬಿನ್‌ಹುಡ್‌ನಂತೆ ಉಳ್ಳವರಿಂದ ಹಣ ದೋಚಿ ಬಡಬಗ್ಗರಿಗೆ ಅದನ್ನು ದಾನಮಾಡುವ ಹವ್ಯಾಸವನ್ನು ರೂಢಿಸಿಕೊಂಡಿಸಿದ್ದನಂತೆ..

ರಾಶಿಯವರ ಅಸಾಧಾರಣ ಕಲ್ಪನಾ ಲಹರಿಯಲ್ಲಿ ಜಗ್ಗೊಜಿಯ ಸಾಹಸಗಳು ನಿಜಕ್ಕೂ ಅತ್ಯಂತ ಆಸಕ್ತಿ ಮೂಡಿಸುವ ಕಥನಗಳಾಗಿ ಮೂಡಿಬಂದಿದೆ. 19ನೇ ಶತಮಾನದ ಆದಿಭಾಗದಲ್ಲಿ ನಮ್ಮ ನಾಡಿನ ಜನ ಜೀವನದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ರಾಶಿಯವರು ಇಲ್ಲಿ ವರ್ಣಿಸಿದ್ದಾರೆ.

ರಾಶಿಯವರ ಮಾತಿನಲ್ಲೇ ಹೇಳುವುದಾದರೆ "ಈಗಿನ ಕಾನೂನು ರಕ್ಷಣೆ ಹೊಂದಿದೆ. ಸಮಾಜದಲ್ಲಿ ಮಾನವಾಗಿ ಬಾಳುವ; ಆದರೂ ದರೋಡೆಕಾರರಾದ ಕಳ್ಳಕೊರಮರಿಗಿಂತಲೂ, ಜೀವವನ್ನೂ, ಮಾನವನ್ನೂ, ಮುಡುಪಿಟ್ಟು ಕಳ್ಳತನ ಮಾಡುತ್ತಿದ್ದ ಹಿಂದಿನ ಕಾಲದ ಕಳ್ಳರೇ ಉತ್ತಮ ಜೀವಿಗಳು" ಎನ್ನುತ್ತಾರೆ ರಾಶಿ.

ಒಟ್ಟಿನಲ್ಲಿ ಇದೊಂದು "ಓದಲು ಪ್ರಾರಂಭ ಮಾಡಿದರೆ ಪೂರ್ತಿ ಮುಗಿಸುವವರೆಗೂ ಕೆಳಗಿಡಲಾಗದ" ವರ್ಣಕ್ಕೆ ಸೇರಿದ ಪುಸ್ತಕ ಎಂದು ಧಾರಾಳವಾಗಿ ಹೇಳಬಹುದು.

*ಅಪರಂಜಿ ಶಿವು*

## "ಹೋಗಬೇಕಾದ ಪ್ರಮೇಯ"

ಮುಖ ಕಂಡಾಗಲೆಲ್ಲಾ "ಯಾವಾಗಪ್ಪ! ಶಿವು; ಹರಕೆ ತೀರಿಸೋದು. ಆದಷ್ಟು ಬೇಗ ಹೋಗಿ ಬರಬೇಕಪ್ಪಾ! ಎಲ್ಲಾ ದೇವತೆಗಳ ಹಾಗಲ್ಲಪ್ಪ, ಕೊಂಡೆನಕ ಭೈರವೀ! ಬಲು ಉಗ್ರ ಅವಳು; ಅವಳೆದುರಿಗೆ ತಿರುಪತಿ ದೇವರೂ ಸೌಮ್ಯ; ಬರೋ ಅಮಾವಾಸ್ಯೆಗೆ ಮುಂಚೇನೇ ಮುಡುಪು ಸಲ್ಲಿಸಿಬಿಟ್ಟು ಬರಬೇಕಪ್ಪಾ," ಎಂದು ಮೂಡಲಗಿರಿ ರಂಗಜ್ಜಿ ಸತಾಯಿಸುವುದಕ್ಕೆ ಶುರುಮಾಡಿದಳು.

"ಮನೆ ಹೆಂಡತಿ ಒತ್ತಿ ಹೇಳದೆ ಇದ್ದರೆ, ಗಂಡಸರಿಗೆ ಹೇಗೆ ತಾನೆ ಅರ್ಥವಾಗುತ್ತದೆ? ಇರೋ ಮಕ್ಕಳುಮರಿ ಚೆನ್ನಾಗಿರಬೇಡವೆ? ನೀನಾದರೂ ಹೇಳಬಾರದೇನೇ! ಮೇಲೆ ಮೂಕಾಂಬಿಕೆ ಬಂದೋರ ಹಾಗೆ ತುಟಿ ಅಲುಗಸ್ದೆ ಇದೀಯಲ್ಲೇ" ಎಂದು ನನ್ನ ಹೆಂಡತಿಯನ್ನೂ ಕುಕ್ಕಕ್ಕೆ ಶುರುಮಾಡಿದಳು.

ನನ್ನ ಸಂಕಟಾನ ಏನೂ ಅಂತ ಹೇಳಿಕೊಳ್ಳಲಿ? ಸತ್ತುಹೋದ ಸಣ್ಣ ತಂಗಿಯ ಮೂರು ದಿನದ ಮಗುವನ್ನು ತಂದಿರಿಸಿಕೊಂಡು ಬಲು ಆದರದಿಂದ ಸಾಕಿದೆ. ಆ ಮಗುವು ಲಕ್ಷಣವಾಗಿ ಬೆಳೆದು, ಸಣ್ಣ ತಂಗಿ ಸತ್ತುಹೋದಳು ಎನ್ನೋದನ್ನೇ ಮರೆಸುತ್ತಿದ್ದಳು. ಆರು ವರ್ಷದ ಸರಸುವೂ ನನ್ನ ದೊಡ್ಡ ಮಗಳು ದಾಳಿಂಬೆಯೂ ಕವಡೆ ಆಟ ಆಡೋದನ್ನ ನೋಡ್ತಾ ಇದ್ದರೆ ಘಳಿಗೆಗಳೆಲ್ಲಾ ಕ್ಷಣದಂತೇ ಸಾಗಿ ಹೋಗುತ್ತಿದ್ದುವು.

ಸೋಮವಾರ ಈಶ್ವರನ ಗುಡೀಗೆ ಪಕ್ಕದ ಮನೆ ಪಾತಕ್ಕನ ಜತೆಗೆ ಹೋಗಿ ಬಂದ ಸರಸು, ರಾತ್ರಿ ಊಟ ಬೇಡ, ಸೇರುಲ್ಲ ಅಂತ ಹೇಳಿ ಮಲಗಿಕೊಂಡಳು. ಬೆಳಿಗ್ಗೆ ಎದ್ದಾಗ ಕೆಂಡಾಮಂಡಲ ಜ್ವರ ಬಂದಿತ್ತು. ನಾಲ್ಕನೆ ದಿನ ಧಡಾರ ಎದ್ದಿತು. ನಂಜುಂಡೇಶ್ವರನಿಗೆ ಮುಡುಪು ಕಟ್ಟಿಟ್ಟು, ಬಾಗಿಲಿಗೆ ಬೇವಿನ ಸೊಪ್ಪು ಕಟ್ಟಿ, ಡಾಕ್ಟರಿಗೆ ಹೇಳಿಕಳಿಸಿದೆವು. ಅವರೂ ತುಂಬಾ ಕಷ್ಟಪಟ್ಟರು. ಆದರೂ ಸನ್ನಿ ಏರುತ್ತ ಹೋಯಿತು. ಸಾಯುವುದಕ್ಕೆ ಮುಂಚಿನ ದಿನ ಬಂದ ಮೂಡಲಗಿರಿ ರಂಗಜ್ಜಿಯ ಗುರ್ತು ಕೂಡ ಸಿಗಲಿಲ್ಲ.

ನನಗೆ ತುಂಬಾ ಸಂಕಟವಾಯಿತು. ಅದೇ ದಿನ ದಾಳಿಂಬಿಗೆ ಜ್ವರ ಬಂತು. ಅವಳಿಗೂ ಧಡಾರ ಎದ್ದಿತು. ಕೆಂಡಾಮಂಡಲ ಜ್ವರವೂ ಬಿಡಲಿಲ್ಲ. ಆಗ ರಂಗಜ್ಜಿ ಕೊಂಡೆನಕ ಭೈರವೀಗೆ ಬಲಿ ಕೊಡ್ತೀವಿ ಅಂತ ಹರಸಿಕೊಳ್ಳೋಣ. ಇಂತಹ ಉಗ್ರ ಕಾಯಿಲೆಗಳಿಗೆ ಆಕೆಯೇ ಗತಿ ಎಂದು ಹೇಳಿ ಒತ್ತಾಯಪಡಿಸಿದಳು. ಅದೇ ರೀತಿ ಹರಕೆ ಹೊತ್ತೆವು. ಹದಿನೈದು ದಿನಗಳಲ್ಲಿ ದಾಳಿಂಬಿ ಎದ್ದು ಕುಳಿತಳು. "ದೇವರಿಗೊಂದು ತುಪ್ಪದ ಹಣತೆ ಹಚ್ಚಿಡಿ ಇಷ್ಟು ಸನ್ನಿ ಬಂದಮೇಲೆ ವಾಸಿಯಾಗೋದು ಮನುಷ್ಯರ ಪ್ರಯತ್ನದಿಂದ ಖಂಡಿತವಾಗಿ ಅಲ್ಲ" ಎಂದು ಡಾಕ್ಟರು ಹೇಳಿದರು.

ಸರಸೂಗೆ ಕೂಡ ಇದೇ ರೀತಿ ಹರಸಿಕೊಂಡಿದ್ದರೆ ಉಳಿದುಕೊಳ್ಳುತ್ತಿದ್ದಳೇನೋ ಎಂಬ ಶಂಕೆಯು ಮೂಡಿ, ಕೈಲಾಗುವುದನ್ನೂ ಮಾಡಲಿಲ್ಲವಲ್ಲ ಎಂದು ಸಂಕಟ ಹೆಚ್ಚಾಗಿತ್ತು. ದಾಳಿಂಬಿ ಹೋಗಿ ಸರಸೂ ಉಳಕೊಂಡಿದ್ದರೆ, ಅಷ್ಟು ಸಂಕಟ ಆಗುತ್ತಿರಲಿಲ್ಲ ಎಂದನ್ನಿಸುತ್ತಿತ್ತು. ಕೂಡಲೇ ಸರಸೂ ಸತ್ತರೆ ಸಂಕಟಪಡುಕ್ಕೆ ತಾಯಿಯಿಲ್ಲವಲ್ಲ, ನಾನೊಬ್ಬನೇ ತಾನೇ; ಗಂಡಸಿಗೆ, ಮಗುವಿನ ಸಾವಿನ ಸಂಕಟ, ಹೆಂಗಸಿಗಾದಂತೆ ಆಗಲು ಸಾಧ್ಯವೇ ಎಂದೂ ತೋಚಿತು.

ಇಂತಹ ಮನಃಸ್ಥಿತಿಯಲ್ಲಿ ಕೊಂಡೆನಕ ಭೈರವೀಗೆ ಬಲಿಕೊಡಲು ಹೋಗಲೇಬೇಕಾಗಿ ಬಂತು.

* * * *

ಕೊಂಡೆನಕಪಲ್ಲಿಗೆ ಹೋಗುವುದೆಂದೂ, ಹರಕೆಯನ್ನೊಪ್ಪಿಸಿ ಬರುವುದೆಂದೂ ತೀರ್ಮಾನಿಸಿದ ಮೇಲೆ, ಎಷ್ಟು ದಿನಗಳು ಅಲ್ಲಿರಬೇಕು, ಯಾರ್ಯಾರು ಹೋಗಬೇಕು, ಎಲ್ಲಿ ಇಳಿದುಕೊಳ್ಳಬೇಕು, ಇವೆಲ್ಲವನ್ನೂ ವಿಚಾರಿಸಿದೆ. ಮೂರು ದಿನಗಳು ಅಲ್ಲಿರಬೇಕು, ಮನೆಯವರೆಲ್ಲರೂ ಹೋಗಲೇಬೇಕು, ರಂಗಜ್ಜಿಯ ತಾತನ ದಾಯಾದಿಗಳ ಕಡೆಯ ಶಾಮಣ್ಣನವರು ಹುಟ್ಟೂರಾದ ಕೊಂಡೆನಕಪಲ್ಲಿಯಲ್ಲೇ ಇದ್ದಾರೆಂದೂ, ಶಾಲಾಮಾಸ್ತರ ಕೆಲಸವನ್ನು ಮಾಡಿಕೊಂಡಿದ್ದಾರೆಂದೂ ಅವರಿಗೆ ಕಾಗದ ಬರೆದು ಅವರಲ್ಲಿಯೇ ಇಳಿದುಕೊಂಡರೆ, ಬಲಿಕೊಡುವುದಕ್ಕೂ ಸಹಾಯ ಸಿಗುತ್ತೆ ಎಂದೂ ತೀರ್ಮಾನವಾಯಿತು. ರಂಗಜ್ಜಿಯ ಸಂಬಂಧವನ್ನು ಜ್ಞಾಪಿಸಿಕೊಟ್ಟು, ಮಾಸ್ತರಿಗೆ ವಿವರಗಳನ್ನು ತಿಳಿಸಿ ಕಾಗದ ಬರೆದೆ. ಐದಾರು ದಿನಗಳಲ್ಲೇ ಬಲು ಆದರದಿಂದ ಬರೆದ ಮಾರುತ್ತರವು ಬಂದಿತು. ವಿದುರಾಶ್ವತ್ಥಕ್ಕೆ ಬಂದು, ಅಲ್ಲಿಂದ ಸುಮಾರು ಮೂರು ಮೈಲಿಗಳ ದೂರ ಗಾಡಿಯಲ್ಲಿ ಬಂದರೆ, ಕೊಂಡೆನಕಪಲ್ಲಿಯು ಸಿಗುತ್ತೆಂದೂ, ವಿದುರಾಶ್ವತ್ಥಕ್ಕೆ ಗಾಡಿಯನ್ನು ಕಳಿಸುವುದಾಗಿಯೂ, ಮಿಕ್ಕೆಲ್ಲಾ ಏರ್ಪಾಡುಗಳನ್ನು ತಾವೇ ಮಾಡಿಸಿರುವುದಾಗಿಯೂ. ಖಂಡಿತವಾಗಿ ರಂಗಜ್ಜಿಯನ್ನೂ ಕರೆತರಬೇಕೆಂದೂ ಶಾಮಣ್ಣನವರು ಬರೆದಿದ್ದರು.

ಮನೆಯಲ್ಲಿ ಹೋವೀಳ್ಯವನ್ನೂ ಏರ್ಪಡಿಸಿ, ಸುವಾಸಿನಿಯರನ್ನು ಕರೆದು ಸತ್ಕರಿಸಿ, ನಮ್ಮೂರಂಚಿನಲ್ಲಿನ ಅಣ್ಣಮ್ಮನ ಗುಡಿಗೆ ಹೋಗಿ ತಂಪೆರೆದು, ಮೂರನೆ ದಿನ ರೈಲು ಹತ್ತಿ ದೊಡ್ಡ ಕುರುಗೋಡನ್ನು ಸೇರಿದೆವು. ಅಲ್ಲಿಂದ ಸಾಮಾನುಗಳೆಲ್ಲವನ್ನೂ ಒಂಟೆತ್ತಿನ ಗಾಡಿಯಲ್ಲಿ ಹಾಕಿ, ನಾವೆಲ್ಲರೂ ಜಟಕಾದಲ್ಲಿ ಕುಳಿತು ವಿದುಗಾಶ್ವತ್ಥಕ್ಕೆ ಹೋದೆವು.

ವಿದುರಾಶ್ವತ್ಥವಲ್ಲಿ ಶಾಮಣ್ಣನವರು ಕಳಿಸಿದ್ದ ಎರಡೆತ್ತಿನ ಗಾಡಿಯು ಸಿದ್ಧವಾಗಿತ್ತು. ಎರಡು ಆಳು ಗಾಡೀನ ಹೊಡೆದುಕೊಂಡು ಬಂದಿದ್ದರು.

ಹೇಗಿದ್ದರೂ ವಿದುರಾಶ್ವತ್ಥಕ್ಕೆ ಬಂದಿದ್ದೀವಿ. ಛತ್ರದಲ್ಲಿ ಇಳಿದುಕೊಂಡು, ಅಶ್ವತ್ಥ ಪ್ರದಕ್ಷಿಣೆ ಹಾಕಿ ಪೂಜೆಮಾಡಿ, ತಂದಿದ್ದ ಹುಳಿಯನ್ನ ಮೊಸರನ್ನವನ್ನು ತಿಂದು ಹೊರಡೋಣವೆಂದು ತೀರ್ಮಾನಿಸಿದೆವು. ಕಣ್ಣ ಬೆಳಕಲ್ಲೇ ಕೊಂಡೆನಕಪಲ್ಲಿಯನ್ನು ಸೇರಬೇಕಾದರೆ, ಮಧ್ಯಾಹ್ನ ಮೂರು ನಾಲ್ಕು ಗಂಟೆಗೆ ಹೊರಟರೆ ಆಗಬಹುದೇ ಎಂದು



ಗಾಡಿಯವನನ್ನು ಕೇಳಿದೆವು. "ಈಗಾಗಲೇ ಹನ್ನೆರಡು ಗಂಟೆ ಆಗಿದೆ. ಅಶ್ವತ್ಥ ಪೂಜೆ ಮುಗಿಸಿ ಒಂದು ಗಂಟೆಗೆ ಹೊರಟರೆ, ವೀರಭದ್ರನ ಕೊಳದ ಬಳಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಸಂಜೆಗೆ ಮುಂಚೇನೇ ಕೊಂಡೆನಕಪಲ್ಲಿಯಲ್ಲಿ ಸೇರಬಹುದು. ಈ ಛತ್ರದಲ್ಲಿ ಬುತ್ತಿ ಬಿಚ್ಚೋಕ್ಕಿಂತ, ಕೊಳದ ಬಳಿ ಉಂಡರೆ ಪಸಂದ್ ಇರುತ್ತೆ," ಎಂದು ಗಾಡಿಯವರಲ್ಲಿ ಮುದಿಯಾಗಿದ್ದವನು ಸಲಹೆ ಮಾಡಿದ. "ಹೌದು ಕಣೋ ಶಿವು, ಮರೆತೇಹೋಗಿದ್ದೆ! ಐವತ್ತು ವರ್ಷದ ಹಿಂದೆ ಕೊಂಡೆನಕಪಲ್ಲಿಯಲ್ಲಿದ್ದೆ. ಮದುವೆಯಾಗಿ ಹಳ್ಳಿ ಬಿಟ್ಟಮೇಲೆ ಈಗಲೇ ತಿರುಗಿ ಹೋಗ್ತಿರೋದು. ಆದರೆ ವೀರಭದ್ರನ ಕೊಳದ ನೆನಪು ಈಗಲೂ ಚೆನ್ನಾಗಿ ಉಳಿದಿದೆ. ಅಲ್ಲೇ ತುತ್ತು ಕಲಸಿ ಹಾಕ್ತೀನಿ," ಎಂದು ರಂಗಜ್ಜಿಯೂ ಹೇಳಿದಳು. ಬೇಗಬೇಗ ಅಶ್ವತ್ಥ ಪೂಜೆ ಮುಗಿಸಿ ಗಾಡಿಯಲ್ಲಿ ಸಾಮಾನುಗಳನ್ನಿರಿಸಿ, ರಂಗಜ್ಜಿಯನ್ನೂ ದಾಳಿಂಬಿಯನ್ನೂ ಕೂರಿಸಿ, ನಾನೂ, ನನ್ನ ಹೆಂಡತಿಯೂ ನಡೆದೇ ಹೋಗುವುದೆಂದು ನಿಶ್ಚಯಿಸಿದೆವು. ಗಾಡಿಯಲ್ಲಿ ಹೆಚ್ಚು ಸ್ಥಳವೂ ಇರಲಿಲ್ಲ. ರಸ್ತೆಯ ಅಡ್ಡ ದಿಡ್ಡಿತನವನ್ನು ಕಂಡಮೇಲೆ ನಡೆಯುವುದೇ ಚೆನ್ನ ಎಂದು ಅನ್ನಿಸಿತು. ಛತ್ರಿ ಬಿಚ್ಚಿ ಹಿಡಿದುಕೊಂಡು ಗಾಡಿಯ ಮುಂದೆಯೇ ನಡೆದೆವು. ಮುದುಕಗಾಡಿಯವನು ಪ್ರಾಯದವನನ್ನು "ಮಗಾ! ನೀ ಗಾಡಿ ಹೊಡಿ. ಅಯ್ನೋರಿಗೆ, ಅವ್ವಾವ್ರಿಗೆ, ನಮ್ಮ ಹಳ್ಳಿ ದಾರೀಲಿ ಕಾಣಸೋದ್ನೆಲ್ಲಾ ತೋರಿಸ್ತಾ ಬರ್ತೀನಿ," ಎಂದು ಹೇಳಿ, ನಮ್ಮ ಜತೆಯೇ ನಡೆದುಬಂದ.

ಐದು ನಿಮಿಷಗಳು ನಡೆದಿರಬಹುದು. ರಸ್ತೆಯ ಎಡಗಡೆಯಲ್ಲಿ, ಹತ್ತು ಹನ್ನೆರಡು ಅಡಿ ಎತ್ತರವಾಗಿದ್ದ ಬಂಡೆಯೊಂದು ಕಾಣಿಸಿತು. ಎಷ್ಟು ಸೋಜಿಗವಾಗಿತ್ತು ಅಂತೀರಿ! ದೊಡ್ಡ ಕೋಳಿ ಮೊಟ್ಟೆಯ ತರಹ ಇದ್ದ ಆ ಬಂಡೆ, ತುದಿಯ ಮೇಲೆ ನಿಂತಿತ್ತು! ಎದುರಿಗೆ ನಿಂತು ಕೆಮ್ಮಿದರೆ, ಬಂಡೆಯೇ ಅಡ್ಡಡ್ಡವಾಗಿ ಬಿದ್ದು ಹೋಗುತ್ತೇನೋ ಅನ್ನುವಂತಿತ್ತು. ನನ್ನ ಹೆಂಡತಿಗೂ ಹಾಗೆಯೇ ಅನ್ನಿಸಿರಬೇಕು. "ಆ ಬಂಡೆಯ ಹತ್ತಿರ ನಡೀಬೇಡ್ರಿ ಅಂದ್ರೆ," ಎಂದು ಎಚ್ಚರಿಕೆ ಕೊಟ್ಟಳು. ಜತೆ ಬರುತ್ತಿದ್ದ ಮುದುಕ ನಕ್ಕು "ಏನ್ರವ್ವಾ! ಭೂಲೋಕ ಹುಟ್ಟಿದಾಗ್ನಿಂದ ಆ ಬಂಡೆ ಹಂಗೇ ನಿಂತ್ಕೈತೆ! ಅದಕ್ಯಾಕೆ ಹೆದರ್ತೀರಿ! ಅದರ ಹಿಂದೇನೇ ಅಂಟಿಕೊಂಡಿರೋ ಹಾಗೆ ಇನ್ನೆರಡು ಮೂರು ಚಪ್ಪಟೆ ಬಂಡೆಗಳು ಬಿದ್ದಿವೆ. ನಾಲ್ಕೆಜ್ಜೆ ಮುಂದಕ್ಕೆ ಹಾಕಿದರೆ, ಆಗ ಅವು ಕಾಣಿಸುತ್ತೆ. ಈ ಬಂಡೇನ 'ಹುಷಾರ್ ಬಂಡೆ' ಅಂತಲೇ ಕರೀತಾರೆ. ಒಂದೊಂದ್ಸಾರಿ ದನಕಾಯೋ ಹುಡುಗರು ಚಪ್ಪಟೆ ಬಂಡೆ ಮೇಲೆ ಹೆಂಗೋ ಬಿದ್ದುಕೊಂಡು ಕೊರಕಲಿಗೆ ಬಾಯಿಕೊಟ್ಟು ಮಾತನಾಡಿದರೆ ನಮ್ಹಳ್ಳೀಗೆ ಚೆಂದಾಗಿ ಕೇಳ್ಸುತ್ತೆ.

ಬಂಡೆತಾವ ಹೋಗ್ಬೇಡಿ, ಅಯ್ನೋರ, ಅಲ್ಲೆಲ್ಲಾ ಭಾರಿ ಮಂಡರಗಪ್ಪೆಗಳಿರ್ತವೆ. ಅವೇನಾದರೂ ದನಾನ ಕುಟುಕಿದರೆ, ದನಾನೇ ಸತ್ತುಹೋಗ್ತದೆ. ಇತ್ತ ಬನ್ನಿ," ಎಂದು ಹೇಳಿದ.

ಇನ್ನೊಂದು ಐದು ನಿಮಿಷ ನಡೆದಿರಬಹುದು. ಹಿಪ್ಪೆ ತೋಪೊಂದು ಸಿಕ್ಕಿತು. ಎಷ್ಟು ಭಾರೀ ಮರಗಳು ಅಂತೀರಿ! ಕಾಡಿನ ಹಾಗೇ ಬೆಳೆದಿತ್ತು.

"ಇದೆಂತಹಾ ಮರಗಳು ಅಂದ್ರೆ? ಹುಣಿಸೆಮರ ಅಲ್ಲ. ಹಲಸಿನ ಮರವೂ ಅಲ್ಲ" ಎಂದು ನನ್ನ ಹೆಂಡತಿಯು ಕೇಳಿದಳು.

"ನಿಮ್ಮಪ್ಪನ ವೇಟೆ ಮನೇಲಿ ನೀ ಕಂಡಿರೋದು ಆವೆರಡೇ ಮರಗಳನ್ನ, ಇದು ಹೇಗೆ ತಿಳೀಬೇಕು ಹೇಳು, ಇದು ಹಿಪ್ಪೆಮರ" ಎಂದು ಹೇಳಿದೆ.

"ಹಿಪ್ಪೇನೋ, ತಿಪ್ಪೇನೋ, ಆದರೆ ದೆವ್ವ ಪಿಶಾಚಿಗಳು ಸೇರಿಕೊಳ್ಳೋವಕ್ಕೆ ಸರಿಯಾಗಿ ಬೆಳದಿವೆ," ಎಂದು ಆ ಕಡೆ ನೋಡಲೊಲ್ಲದೆ ಹೇಳಿದಳು.

"ಬರೀ ಹಿಪ್ಪೆ ಅಲ್ಲ, ಅಯ್ನೋರ, ಬೇರೆ ತರಹಾ ಮರ ಇದು. ಕಾಯಿಗಳೆಲ್ಲಾ ಕೆಂಪಗಿರ್ತವೆ. ಕುಟ್ಟಿ ತೆಗೆದರೆ ತುಪ್ಪ ಬರ್ತದೆ. ಬೆಳೆಯೋ ಮಕ್ಕಳಿಗೆ, ಗರಡಿ ಸಾಮು ಹೊಡೆಯೋರಿಗೆ, ಕಾಯಿಲೆ ಕಸಾಲೆ ಬಿದ್ದೋರಿಗೆ, ಇದರ ತುಪ್ಪಾನೇ ಹಾಕ್ತಾರೆ. ಬರೀ ಹಿಪ್ಪೆ ತುಪ್ಪದ್ಹಾಂಗೆ, ಹಣತೇಗೆ ಹಾಕೋಕಿಲ್ಲ" ಎಂದು ಮುದುಕ ಜಂಭದಿಂದ ಹೇಳಿದ.

ಹಿಪ್ಪೆ ತೋಪಿನ ಬಳಿ ಹಾದಿಯು ಎಡಕ್ಕೆ ಅಡ್ಡಲಾಗಿ ತಿರುಗಿತು. ಒಂದು ಫರ್ಲಾಂಗ್ ನಡೆದಿರಬಹುದು. ಎದುರಿಗೆ ಹೊರವಾಗಿ ಬೆಳೆದ ಪಾಪಾಸ್ ಕಳ್ಳಿಯ ಪೊದೆ ಕಾಣಿಸಿತು.

"ಹಾವು ಹಲ್ಲಿ, ಹಾಗಿರಲಿ, ಈ ಪೊದೇಲಿ ಹುಲಿ ಚಿರತೆ ಇದ್ರೂ ಕಾಣಿಸುಲ್ಲ ಅಂದ್ರೆ," ಎಂದು ನನ್ನ ಹೆಂಡತಿ ಹೇಳಿದಳು.

ಪೊದೆಯ ಬಲಗಡೆ ದಾರಿ ತಿರುಗಿತ್ತು. ಐದಾರು ನಿಮಿಷ ನಡೆದಿರಬಹುದು. ನನ್ನ ಹೆಂಡತಿಯ ನಡಿಗೆ ಸ್ವಲ್ಪ ಮಂದವಾಯಿತು. "ಸುಸ್ತಾಯಿತೇ?" ಎಂದೆ. "ಇಲ್ಲ, ಇಲ್ಲ, ಸ್ವಲ್ಪ ಶಕೆ ಅಷ್ಟೇ!" ಅಂದಳು.

"ಇನ್ನೇನು ವೀರಭದ್ರನ ಕೊಳ ಸಿಕ್ತದೆ. ಸುಧಾರಿಸ್ಕೋಬೋದು" ಎಂದ ಗಾಡಿಯ ಮುದುಕಪ್ಪ.

ಆ ವೇಳೆಗೆ ತಂಗಾಳಿಯು ಹಗೂರಾಗಿ ಬೀಸಿತು. ಬೀಸೋದೇನು ಬಂತು! ನಮ್ಮ ಬೆವರಿದ ಮುಖಗಳ ಮೇಲೆಯೇ ಬೀಸಣಿಗೆ ಹಾಕಿತು.

"ಎಲ್ಲಿಂದ ಬೀಸ್ತಾ ಇದೆ, ಇಷ್ಟು ತಂಪಾಗಿದೆ," ಎಂದು ನನ್ನ ಹೆಂಡತಿ ಆಶ್ಚರ್ಯದ ದನಿಯಲ್ಲಿ ಕೇಳಿದಳು.

"ಯೀರಭದ್ರನ ಕೊಳದ ಮೇಲೆ ಬೀಸೋ ಗಾಳಿಯೆಲ್ಲಾ ಹಿಂಗೇ ತಂಪಾಗಿರ್ತದವ್ವಾ. ನೀವೇ ಕಂಡಿರಾ, ಇನ್ನೊಂದು ಎರಡು ಮಿನೀಟ್ನಾಗೆ!" ಎಂದ ಮುದುಕ.

ರಸ್ತೆಯೂ ಪಾಪಾಸುಕಳ್ಳಿ ಪೊದೆಯನ್ನು ಸುತ್ತಿಕೊಂಡು ಹಿಂದೆ ಇದ್ದ ವೀರಭದ್ರನ ಕೊಳದ ಬಳಿಗೆ ಸಾಗಿತ್ತು. ಕೊಳದ ಮೆಟ್ಟಲುಗಳ ಬಳಿ ಕುಳಿತು ಕಾಲುಗಳನ್ನು ನೀರಿನಲ್ಲಿ ಇಳಿಬಿಟ್ಟೆವು.

ಎಷ್ಟು ತಣ್ಣಗಿತ್ತು ಅಂತೀರಿ! ಎಷ್ಟು ಹಿತವಾಗಿತ್ತು ಅಂತ! ದಣಿವೆಲ್ಲಾ ಆರಿ ಹೋಗುವಷ್ಟು ಚೆನ್ನಾಗಿತ್ತು. ಕೊಳದ ನೀರು ಕೂಡ ಎಷ್ಟು ತಿಳಿಯಾಗಿತ್ತು ಅಂತ. ನಮ್ಮ



ಮುಖಗಳ ಮೇಲಿನ ಸಂತೋಷವನ್ನು ಕಂಡ ಗಾಡಿಯ ಮುದುಕ "ಕೊಳದ ತಳದಲ್ಲಿ ಬರಿ ಬಂಡೆಗಳಿವೆ. ಎತ್ತಲಿಂದಲೋ ಬುಗ್ಗೆನೀರು ಹರಿದು ಬರುತ್ತದೆ. ಆಜೂಬಾಜೂ ಹಳ್ಳಿಯೋರೆಲ್ಲಾ, ರೋಗರುಜಿನ ಬಂದರೆ, ಈ ನೀರ್ನೇ ತಗೊಂಡು ಹೋಗಿ ಕುಡೀತಾರೆ.

ಇನ್ನೇನು ಗಾಡಿ ಬಂದ್ಬಿಡ್ತದೆ! ಈ ರಸ್ತೆಯಾಗ ಎತ್ತುಗಳು ಅಲ್ಲಲ್ಲೇ ಬೆದರ್ತವೆ. ಅದಕ್ಕೇ ಹುಷಾರಾಗಿ ಗಾಡಿ ಹೊಡೀಬೇಕು, ಎರಡಾಳು ಇಲ್ದೇ ಇದ್ರೆ ಗಾಡಿ ಕಟ್ಟೋದೇ ಇಲ್ಲ. ಆದರೆ ನನ್ನ ಹೈದ ಬಲು ಚೂಟಿ. ಒಬ್ಬನೇ ಗಾಡೀನ ಹತೋಟೀಲಿಡ್ತಾನೆ, ಯಾಕಂದರ ಎತ್ತುಗಳು ಅವನ್ಹೇಳ್ದಂಗ ಕೇಳ್ತವೆ" ಎಂದು ಹೇಳಿದ.

ಆ ವೇಳೆಗೆ ಗಾಡಿಯೂ ಬಂತು. ರಂಗಜ್ಜಿಯನ್ನೂ, ದಾಳಿಂಬೀನೂ ಹುಷಾರಾಗಿ ಇಳಿಸಿಕೊಂಡೆವು. ಹುಳಿಯನ್ನ ಮೊಸರನ್ನದ ಪಾತ್ರೆಯನ್ನು ನನ್ನಾಕೆ ಗಾಡಿಯಿಂದ ತೆಗೆದಳು.

"ಅಷ್ಟು ಕುಲುಕ್ತಾ ಇದ್ರು ನೋಡು, ಗಾಡಿ, ಆದರೂ ಈ ಮಗು ಅದೇನು ನಿದ್ರೆ ಮಾಡ್ತು ಅಂತೀ! ಕೃಷ್ಣ ಬಂದು ಆಡಿಸ್ತಾನಂತೆ ಮಕ್ಕಳನ್ನ. ಅದಕ್ಕೇ ಇರಬೇಕು ನಿದ್ದೇಲೂ ಇವಳು ಆಗಾಗ್ಗೆ ನಗೋಳು! ಸರಿಯಾದ ಹೆಸರಿಟ್ಟಿದೀರಿ ಕಣೆ! ಇವಳು ನಕ್ಕರೆ, ಬಿರಿದ ದಾಳಿಂಬಿಹಣ್ಣಿನ ಹಾಗೇ ಕಾಣುತ್ತೆ ಕಣೆ!" ಎಂದು ರಂಗಜ್ಜಿ ಮಗೂನ ಹೊಗಳಿ, ಅದರ ಕೆನ್ನೆ ಚಿವುಟಿ, ನೆಟ್ಟಿಗೆ ಮುರಿದಳು. ಹತ್ತು ಬೆರಳುಗಳಿಂದ ಲಟಲಟಾ ಅಂತ ಇಪ್ಪತ್ತು ನೆಟ್ಟಿಗೆ ಎಷ್ಟು ಲಕ್ಷಣವಾಗಿ ಬಂತು ಅಂತೀರಿ!

ರಂಗಜ್ಜಿಯೇ ತುತ್ತು ಹಾಕಿದಳು. ಕೊಳದ ನೀರನ್ನೇ ಕುಡಿದೆವು. ಮುದುಕನಿಗೂ ಅವನ ಮಗನಿಗೂ ಊಟ ಹಾಕಿದ್ದಾಯ್ತು.

"ಈಗ ಬೇಕಾದರೆ ಹೊರಡಬಹುದು. ಸಂಜೆ ಐದುಗಂಟೆ ಹೊತ್ತಿಗೆ ಹಳ್ಳಿ ಸೇರಬಹುದು" ಎಂದು ಗಾಡಿಯ ಮುದುಕ ಹೇಳಿದನು. "ಅಥವಾ ಇಲ್ಲೇ ಬೇಕಾದರೆ ಒಂದರ್ಧ ಗಂಟೆ ವಿಶ್ರಾಂತಿ ತೊಗೊಂಡು ಆಮೇಲೆ ಹೊರಟರೂ ಆಯಿತು" ಎಂದೂ ಸೇರಿಸಿದ.

"ಹಸಿದ ಹೊಟ್ಟೇಲಿ, ದಣಿದಿದ್ದಾಗ ಅನ್ನ ಉಂಡಿದ್ದೀವಿ. ಸ್ವಲ್ಪ ಹೊತ್ತು ವಿಶ್ರಾಂತಿ ತೊಗೊಂಡೇ ಹೋಗೋಣ. ಅಷ್ಟು ಹೊತ್ತಿಗೆ ನಾನು ಅಲ್ಲಿ ಕಾಣುವ ಕಾಡು ಹೂವುಗಳನ್ನು ಸ್ವಲ್ಪ ಕಿತ್ತು ತರ್ತೀನಿ" ಎಂದು ರಂಗಜ್ಜಿ ಹೇಳಿದಳು.

"ಬೇಡ್ರವ್ವಾ, ಆ ಕಡೆ ಎಲ್ಲಾರೂ ಹೋಗೋದು ಬೇಡ. ನೆಲವೆಲ್ಲಾ ಆ ಕಡೆ ಬಲು ಕೆಸರು. ಕೊಳದಿಂದ ನಮ್ಮೂರು ಆಲದಮರದ ಬುಡದತನಕ ನೆಲದೊಳಗೇ ಒಂದು ಕಾಲುವೆಯಿದೆ ಎಂದು ಎಲ್ಲರೂ ಅನ್ತಾರೆ. ಇದೆಯೋ ಇಲ್ಲವೋ ಯಾರೂ ಕಾಣರು. ಆದರೆ ನೆಲದ ಮೇಲೆ ಕೊಳದಿಂದ, ಆಲದಮರದ ತನಕ, ಕೆಸರು ಕೊಚ್ಚೆ ಇದೆ. ಹೂವಿನ ಗಿಡಗಳೂ ಬೆಳೆದಿವೆ. ಅಲ್ಲೇನಾದರೂ ಜನ ನಡೆದರೆ, ಕೆಸರಿನಲ್ಲಿ ಕಾಲು ಹೂತುಕೊಂಡೇ ಬಿಡ್ತದೆ. ಕೊಳದಲ್ಲಿ ಬಿದ್ದು ಸತ್ತೋರ ಪ್ರೇತಗಳೆಲ್ಲಾ ಇವೆ. ಅವುಗಳೇ ಅಲ್ಲಿ, ನಡೆಯೋರ

ಕಾಲುಗಳನ್ನು ಹಿಡಿದು ಎಳಕೊಂಡು ಬಿಡ್ತದೆ ಎಂದು ಹಿರೇರು ಅಂತಾರೆ" ಎಂದು ಗಾಡಿಯ ಮುದುಕ ಹೇಳಿದ.

"ಹೊರಟುಹೋಗೋಣ ಅಂದ್ರೆ, ವಿಶ್ರಾಂತಿ ಏನೂ ಬೇಡ. ಹಳ್ಳೀಗೆ ಹೋಗಿ ಸೇರಿಕೊಳ್ಳೋಣ" ಎಂದು ನನ್ನ ಹೆಂಡತಿ ಕಾತರದಿಂದ ನುಡಿದಳು.

"ಇಷ್ಟಕ್ಕೇ ಹೆದರಿಕೆ ಆಯ್ತೇನೇ? ಸೆಳೆಯೋ ಜೇಡಿಮಣ್ಣಿದೆ ಅಂತ ಕಾಣುತ್ತೆ. ಅಲ್ಲಿ ಕಾಲು ಹೂತರೆ ಜಾರಿಕೊಂಡು, ಹೂತು ಹೋಗೋದು, ಸ್ವಾಭಾವಿಕ ಕಣೇ! ಅಷ್ಟಕ್ಕೇ ದೆವ್ವ, ಪಿಶಾಚಿ ಇವೆ ಅಂತ ನಂಬಿ ಬಿಡೋದೇ," ಎಂದು ಧೈರ್ಯ ಹೇಳಿದೆ.

ಆದರೂ ಎಲ್ಲರೂ ಮುಂದಕ್ಕೆ ಬೇಗ ಪ್ರಯಾಣ ಬೆಳೆಸಿದೆವು.

ರಂಗಜ್ಜಿಯೊಡನೆ ನನ್ನ ಹೆಂಡತಿಯೂ ಗಾಡಿಯನ್ನು ಹತ್ತಿದಳು. ಮುದುಕನೂ ನಾನೂ ನಡೆಯುತ್ತ ಹೊರಟೆವು.

ಸುಮಾರು ಒಂದು ಒಂದೂವರೆ ಮೈಲಿ ನಡೆದಿರಬಹುದು. ರಸ್ತೆಯ ಎರಡೂ ಕಡೆಗಳಲ್ಲಿ ಪೊದರುಗಳು, ಬಂಡೆಗಳು, ಪುರುಚಲು ಗಿಡಗಳು, ಕಾಡುಮರಗಳು ಕಂಡುವೇ ಹೊರತು. ಸುವ್ಯವಸ್ಥಿತವಾಗಿ ಮಾಡಿಟ್ಟ ಹೊಲ ಗದ್ದೆಗಳ್ಯಾವುದೂ ಕಾಣಲಿಲ್ಲ. "ಇದ್ಯಾಕಯ್ಯ ಹೀಗೆ," ಎಂದು ಮುದುಕನನ್ನು ಕೇಳಿದೆ. "ಇಲ್ಲೆಲ್ಲಾ ನೆಲದ ಗುಣವೇ ಹಾಗೆ ಅಯ್ನೋರ! ನೀರೂ ಸಿಗುಲ್ಲ, ಮಳೆಯೂ ಬಲು ಕಡಿಮೆ. ಕಪಿಲೆ ಹೊಡೆದೇ ರಾಗೀನ ಬೆಳೀಬೇಕು" ಎಂದು ಹೇಳಿದ.

ರಸ್ತೆಯ ಬಲಗಡೆ ಸುಮಾರು ದೂರದಲ್ಲಿ ದೊಡ್ಡ ಗುಡ್ಡವೊಂದು ಕಾಣಿಸಿತು. "ಅರೆ! ಇಷ್ಟು ದೊಡ್ಡ ಗುಡ್ಡ ಇದ್ದರೆ, ಆಚೆಕಡೆ ಕಣಿವೆಯಿರಬೇಕು. ಅಲ್ಲಾದರೂ ಬೆಳೆಯಾಗುತ್ತಿರಬೇಕು" ಎಂದು ಹೇಳಿದೆ.

"ಅದು ಗುಡ್ಡವಲ್ಲ, ಅಯ್ನೋರ! ಬರೀಬಂಡೆ! ಒಂದೇ ಕಲ್ಲಿನ ಬಂಡೆ! ಅಲ್ಲಿ, ಇಲ್ಲಿ ಪುರುಚಲು ಗಿಡಗಳು ಇವೆಯೇ ಹೊರತು, ಗಿಡಮರಗಳು ಬೆಳೆಯೋ ಹಾಂಗಿಲ್ಲ. ಅದರಾಚೆಯೇ ದೊಡ್ಡ ಆಲದಮರ ಇರೋದು. ಭೈರವಿಗುಡಿಯು ಆ ಮರದ ಬುಡದಲ್ಲಿಯೇ ಇರೋದು. ಆಲದಮರದ ಅಂಚಿನಲ್ಲೇ ನಮ್ಮ ಹಳ್ಳಿ ಇರೋದು. ಹಿಂದೆ ಇಲ್ಲೆಲ್ಲಾ ತೆಲುಗಿನವರೇ ಹೆಚ್ಚಾಗಿದ್ದರು. ಕೊಂಡ ಎಂದರೆ ಬಂಡೆ ಅಂತ. ಬಂಡೆ ಹಿಂದಿನ ಹಳ್ಳಿಯನ್ನು ಕೊಂಡೆನಕಪಲ್ಲಿ ಎಂದೇ ಹಳ್ಳಿಗೆ ಹೆಸರಿಟ್ಟರು," ಎಂದು ಮುದುಕಪ್ಪನು ಹೇಳುತ್ತಾ ಹೆಜ್ಜೆ ಹಾಕುತ್ತಿದ್ದ.

ಕೊಂಡದ ಹತ್ತಿರ ಬಂದೆವು. ಬಂಡೆಯನ್ನು ನೋಡಿ ದಿಟವಾಗಲೂ ಬಾಯಿ ಬಿಡುವಂತಾಯ್ತು. ಕಪ್ಪು ಬಡಿದಿದ್ದ ಆ ಬಂಡೆಯ ಮೇಲೆ ಅಲ್ಲಿ, ಇಲ್ಲಿ ಪುರುಚಲು ಗಿಡಗಳಿದ್ದುವು. ಅಲ್ಲಲ್ಲಿ ಹಸಿರು ಪಾಚಿ ಕಟ್ಟಿತ್ತು. 30-40 ಅಡಿ ಎತ್ತರ, 60-70 ಅಡಿ ಅಗಲ ಇದ್ದ ಆ ಬಂಡೆಯು ಸಣ್ಣ ಗುಡ್ಡದಂತೇ ಕಾಣುತ್ತಿತ್ತು. ಕೊಂಡವನ್ನು ಸುತ್ತುಬಳಸಿ ರಸ್ತೆಯು ಸಾಗಿತ್ತು. ಕೊಂಡದ ಆ ಪಕ್ಕದ ಬಳಿಗೆ ನಡೆದಾಗ ದೊಡ್ಡದೊಂದು ತೋಪು ಕಾಣಿಸಿತು.



"ಆಲದಮರ ಇದೆಯಂದೆಯಲ್ಲಪ್ಪಾ, ಅದರ ಹತ್ತಿರವೇ ಹಳ್ಳಿ ಎಂದೆಯಲ್ಲಾ! ಇನ್ನೂ ಎಷ್ಟು ದೂರ ಇದೆ?" ಎಂದು ಮುದುಕನನ್ನು ಕೇಳಿದೆ.

ಮುದುಕಪ್ಪ ನಕ್ಕ. "ಅಯ್ನೋರ! ಇದೇ ದೊಡ್ಡ ಆಲದಮರ. ಅದರ ಬಿಳಲು ನೂರು ಗಜದಗಲ ಎಲ್ಲಾ ಕಡೆಯಲ್ಲೂ ಬಿದ್ದಿದೆ. ಅದಕ್ಕೇ ತೋಪಿನಂತೆ ಕಾಣುತ್ತೆ. ಬಲು ಹಳೇಮರ, ಏನಿಲ್ಲ ಅಂದರೂ ಸಾವಿರ ವರ್ಷ ಆದರೂ ಆಗಿರಬಹುದು. ವಿದುರಾಶ್ವತ್ಥದಷ್ಟು ಹಳೇದಲ್ಲ ಅಂತಾರೆ ಜನ. ಯಾರಿಗೆ ತಾನೇ ಗೊತ್ತು? ಆದರೆ ಇಷ್ಟು ದಿಟ ನೋಡಿ! ಹಳ್ಳಿಯೋರೆಲ್ಲಾ ಈ ಮರದ ಕೆಳಗೆ ನಿಲ್ಲಬಹುದು. ಸಣ್ಣ ಮಳೆ ಬಿದ್ದರೆ, ಯಾರ ತಲೆ ಮೇಲೂ ಒಂದು ಹನಿ ನೀರೂ ಬೀಳುಲ್ಲ," ಎಂದು ಹೇಳಿದ.

ಬಿಳಲು ಬಿದ್ದ, ಯಾವುದೊಂದೇ ತಾಯ್ಮರವು ಇಷ್ಟು ದೊಡ್ಡದಾಗಿರುತ್ತೆ ಎಂದು ಯಾರು ಹೇಳಿದ್ದರೂ ನಾನು ನಂಬುತ್ತಲೇ ಇರಲಿಲ್ಲ. ಈಗ ಕಣ್ಣಿಗೆ ಕಂಡರೂ ಕೂಡ ನಂಬಲು ಸಾಧ್ಯವಾಗಲೇ ಇಲ್ಲ.

"ತಾಯ್ಮರ ಎಲ್ಲಿದೇಪ್ಪಾ, ಭೈರವಿಗುಡಿ ಇಲ್ಲಿಂದ ಕಾಣಿಸುತ್ತಾ" ಎಂದು ಕೇಳಿದೆ. "ರಸ್ತೆಯಿಂದ ಕಾಣಿಸೋದಿಲ್ಲ ಅಯ್ನೋರ! ಸುತ್ತುಸುತ್ತಿ ಕಾಲು ದಾರೀಲಿ ನಡೆದರೆ ಸಿಗ್ತದೆ. ಒಬ್ಬರು ಇಬ್ಬರು ಹೋಗೋದೇ ಇಲ್ಲ, ತರಹೇವಾರಿ ಕೋತಿಗಳ ಹಾವಳಿ ಬೇರೆ. ಪೂಜೆಗೀಜೇಗೆ ಅಂತ ಹತ್ತಿಪ್ಪತ್ತು ಮಂದಿ ಬಂದಾಗ ಹಳ್ಳಿಯೋರು ಸಂಗಡನೇ ಬರೋದು. ಹೆಂಗೂ ಪೂಜೇಗೆ ಬಂದೋರಲ್ವಾ, ನಾಳೀನೋ ನಾಳಿದ್ದೋ ಬಂದೇ ಬರ್ತೀರಲ್ಲಾ," ಎಂದು ಮುದುಕನು ವಿವರಿಸಿದ.

ಮರವನ್ನು ಬಳಸಿಕೊಂಡು ಹಳ್ಳಿಯನ್ನು ಸೇರುವುದಕ್ಕೆ 8-10 ನಿಮಿಷ ನಡೆಯಬೇಕಾಯಿತು.

ಹಳ್ಳಿಯನ್ನು ಮುಟ್ಟಿದಾಗ ಮೊದಲು ಸಿಕ್ಕಿದ್ದೇ ಮಾಸ್ತರ ಶಾಮಣ್ಣನವರ ಶಾಲೆ. ಹಿಂದುಗಡೆಯೇ ಅವರ ಮನೆ. ಶಾಲೆಯ ಮುಂದುಗಡೆಯೇ ಆತ ನಮ್ಮನ್ನು ಎದುರುಗೊಂಡ. ಬಲು ಆದರದಿಂದ ಮಾತನಾಡಿಸಿದ. ಅಷ್ಟು ಹೊತ್ತಿಗೆ ಗಾಡಿಯೂ ಬಂತು. ಶಾಮಣ್ಣನ ಮನೆಯ ಹೆಂಗಸರೂ ಮಕ್ಕಳೂ ಎಲ್ಲರೂ ಹೊರಕ್ಕೆ ಅಷ್ಟುಹೊತ್ತಿಗೆ ಬಂದಿದ್ದರು. ರಂಗಜ್ಜಿಗೆ ಎಷ್ಟು ಮರ್ಯಾದೆಯಿಂದ ಶಾಮಣ್ಣ ಕಾಲುಮುಟ್ಟಿ ನಮಸ್ಕಾರ ಮಾಡಿದ ಅಂತೀರಿ! "ಚಿಕ್ಕಣ್ಣಯ್ಯ ದಿನಕ್ಕೆ ಒಂದು ಸರ್ತೀನಾದರೂ ನಿಮ್ಮನ್ನು ಜ್ಞಾಪಿಸ್ಕೋತಾನೆ ರಂಗಜ್ಜೀ!" ಎಂದು ಶಾಮಣ್ಣ ಹೇಳಿದ. "ಹಾಗೇನಪ್ಪಾ! ಇನ್ನೂ ಅವನ ಜ್ಞಾಪಕಶಕ್ತಿ ಉಳಿದಿದೆಯೇ? ಏನಿಲ್ಲ ಅಂದರೂ 80 ಆಗಿರಬೇಕು ಅವನಿಗೆ. ನನಗೇ ಎಪ್ಪತ್ತು ಆಗಿಹೋಯ್ತು. ಎಷ್ಟು ವರ್ಷಗಳಾಯ್ತಪ್ಪಾ! ಈ ಹಳ್ಳಿ ಬಿಟ್ಟುಹೋಗಿ! ಆದರೂ ಹೆಚ್ಚು ವ್ಯತ್ಯಾಸವೇನೂ ಆಗಿಲ್ಲವಲ್ಲಾ!"

ಶಾಮಣ್ಣನ ಹೆಂಡತಿ ಮೆಲ್ಲಗೆ, "ಮನೆಯೊಳಕ್ಕೆ ಕರಕೊಂಡು ಹೋಗೋದು ಬಿಟ್ಟು
ಇಲ್ಲೇ ನಿಲ್ಲಿಸಿಕೊಂಡೇ ಮಾತಾಡ್ತಿದೀರಲ್ಲಾ ಅಂದ್ರೆ" ಎಂದು ಹೇಳಿದರು.

"ಹೌದಲ್ಲೇ!" ಎಂದು ಶಾಮಣ್ಣ ಉದ್ಗಾರ ತೆಗೆದು ಎಲ್ಲರನ್ನೂ ಕರಕೊಂಡು ಮನೆಯೊಳಕ್ಕೆ ಹೋಗುವಾಗ, "ಶಾಲೆಗೆ ಈಗ ರಜಾ ಬಂದಿದೆ. ಅಲ್ಲೇ ಎರಡು

ಕೊಠಡಿಗಳಲ್ಲಿ ನಿಮಗೆ ಬಿಡಾರ ಏರ್ಪಡಿಸಬಹುದು. ನಮ್ಮದು ಹಳೇಕಾಲದ ಮನೆ. ಏನಾದರೂ ಅನಾನುಕೂಲವಾದರೆ, ಸಂಕೋಚಪಡದೆ ಹೇಳಿ. ಶಾಲೆ ಕೊಠಡಿಗಳಲ್ಲಿ ಇಳಕೊಳ್ಳಬಹುದು" ಎಂದು ಹೇಳಿದ.

"ಇರೋದು ಮೂರುದಿವಸ, ಅಷ್ಟಕ್ಕೇ ಯಾಕೆ ಇಷ್ಟೆಲ್ಲಾ ತೊಂದರೆ? ನಾವು ಬಂದಿದ್ದರಿಂದ ನಿಮಗೆ ಅನಾನುಕೂಲ ಆಗುತ್ತೇನೋ" ಎಂದೆ.

"ನಮ್ಮವರು ಯಾರಾರೂ ನಮ್ಮನೆಗೆ ಬಂದರೆ ಹಬ್ಬ ಆದಂತೆ. ಹಳೇ ಕೊಂಪೆ ಇದು. ನಮ್ಮವರೆಲ್ಲಾ ಹಳ್ಳಿ ಬಿಟ್ಟು ಹೋಗಿ ಪಟ್ಟಣಗಳಲ್ಲಿ ದಿವಿನಾಗಿ ಬಾಳ್ತಾ ಇದಾರೆ. ನಾನೊಬ್ಬನೇ ಇಲ್ಲಿ ಉಳಕೊಂಡಿರೋನು! ಯಾರಾರೂ ಬಂದಾರೇ ಅಂತ ಕಾದಿರ್ತೀವಿ. ಮನೆದೇವರು ಅಂತ ಹರಕೆ ಹೊತ್ತೋರು, ಚಂಡಿಕೆ ಮಾಡಿಸೋರು, ಯಾರಾರೂ ಯಾವಾಗಲೋ ಒಮ್ಮೊಮ್ಮೆ ಬರ್ತಾರ್ಯೇ ವಿನಹಾ, ಇಲ್ಲದಿದ್ದರೆ ಈ ಕಡೇನೂ ಯಾರೂ ನೋಡುಲ್ಲ" ಎಂದು ಶಾಮಣ್ಣ ಹೇಳಿದ.

ಸಾಮಾನೆಲ್ಲವನ್ನೂ ಇಳಿಸಿ ಆಗಿತ್ತು. ಕೈಕಾಲಿಗೆ ನೀರು ಇತ್ತು. ಕುಡಿಯಲು ಬೇಲದ ಪಾನಕ ಕೊಟ್ಟರು. "ಎಂಟು ಗಂಟೆ ಹೊತ್ತಿಗೆ ರಾತ್ರಿಯೂಟ ನಮ್ಮಲ್ಲಿ. ನಿಮಗೆ ಅನುಕೂಲವಾದ ಹೊತ್ತಿಗೆ ಊಟ ಮಾಡಬಹುದು" ಎಂದು ಶಾಮಣ್ಣ ಹೇಳಿದ.

"ದಣುವಾಗಿ ಬಂದಿದ್ದಾರೆ, ಸ್ವಲ್ಪಹೊತ್ತು ಮಲಗಿಕೊಳ್ಳಲಿ. ಎದ್ದಮೇಲೆ ಊಟದ ಏರ್ಪಾಟು ಮಾಡಿದರಾಯ್ತು," "ಗಾಡೀಲಿ ಬಂದರೆ ಮೈ ಜಜ್ಜಿ ಹೋಗಿರುತ್ತೆ" ಎಂಬ ಕಂಚಿನ ದನಿಯ ಮಾತುಗಳು ಹಜಾರದ ಪಕ್ಕದ ಕೊಠಡಿಯಿಂದ ಕೇಳಿಸಿತು.

"ಮಲಗಿದ್ದೀ ಅಂತಿದ್ದೆ ಚಿಕ್ಕಣ್ಣಯ್ಯಾ! ಎಚ್ಚರವಾಗೇ ಇದೀಯಾ? ಮೂಡಲಗಿರಿ ರಂಗಜ್ಜಿ ಬಂದಿದ್ದಾಳೆ. ಮೊಮ್ಮಗಳ್ನ, ಅವಳ ಗಂಡನ್ನ, ಮಗೂನ ಕರ್ಕೊಂಡು ಈಗತಾನೇ ಬಂದಿಳಿದಳು," ಎಂದು ಶಾಮಣ್ಣ ಕೊಠಡಿಯ ಕಡೆಗೆ ನಡೆಯುತ್ತಾ ಹೇಳಿದ. ಕೊಠಡಿಗೆ ಹೋಗಿ ಚಿಕ್ಕಣ್ಣಯ್ಯನನ್ನು ಕೈಹಿಡಿದು ಕರಕೊಂಡು, ಹಜಾರಕ್ಕೆ ಬಂದು ಕಂಭದ ಪಕ್ಕದಲ್ಲಿ ಮಣೆಯ ಮೇಲೆ ಕುಳ್ಳಿರಿಸಿದ.

ಎಂಭತ್ತರ ಮುದುಕ ಅಂತ ಹೇಳಿದ ಹೊರ್ತು ಅವನ ವಯಸ್ಸು ಅಷ್ಟು ಎಂದು ಹೇಳಲು ಬರುತ್ತಿರಲಿಲ್ಲ. ನರೆಗೂದಲಾದರೂ ತಲೆಯನ್ನೆಲ್ಲಾ ತುಂಬಿತ್ತು. ಮೇಲುಕೋಟೆ ಅಂಚಿನ ಪಂಚೆಗಚ್ಚೆ ಪಂಚೆಯನ್ನುಟ್ಟಿದ್ದ. ಅದೇ ಮಾದರಿಯ ಧೋತ್ರವನ್ನು ಹೊದ್ದಿದ್ದ. ಮುಖದ ಮೇಲೆ ಯಾವುದೋ ತೆರನಾದ ಕಳೆ. ಆದರೆ ಕಣ್ಣುಗಳು ಹೇಗೋ ಕಂಡುವು. ದನಿ ಬಂದ ಕಡೆಗೆ ಮುಖ ತಿರುಗಿಸಿ ನೋಡುತ್ತಿದ್ದರೂ, ಕಣ್ಣುಗಳು ಇನ್ನೆಲ್ಲೋ ಇನ್ನೇನನ್ನೋ ನೋಡುತ್ತಿವೆಯೇನೋ ಎನ್ನಿಸುತ್ತಿತ್ತು. ರಂಗಜ್ಜಿ ಹೋಗಿ ನಮಸ್ಕಾರಮಾಡಿ ಮಾತನಾಡಿಸಲು ಶುರು ಮಾಡಿದಳು. ಶಾಮಣ್ಣ ನನ್ನ ಹತ್ತಿರ ಬಂದು ಕುಳಿತುಕೊಂಡ. ಕಣ್ಣು ಯಾಕೆ ಹೀಗಿದೆ ಎಂದು ಪಿಸುಮಾತಿನಲ್ಲಿ ಕೇಳಿದೆ. ಇಪ್ಪತ್ತು ವರ್ಷಗಳಿಂದ ಎರಡು ಕಣ್ಣುಗಳೂ ಕಾಣಿಸುಲ್ಲ. ಹಠಾತ್ತಾಗಿ ಕುರುಡಾಗಿ ಬಿಟ್ಟರು ಎಂದು ಶಾಮಣ್ಣ ಮೆಲ್ಲಗೆ ಉತ್ತರಿಸಿದ. ಎರಡು ನಿಮಿಷ, ಬಂದುಬಿಟ್ಟೆ ಎಂದು ಹೇಳಿ ಶಾಮಣ್ಣ ಅಡಿಗೆ ಮನೆಯತ್ತ ಹೋದ.



ಶಾಮಣ್ಣ ಹಿಂತಿರುಗಿ ಬಂದು ಎಬ್ಬಿಸಿದಾಗಲೇ ಎಚ್ಚರವಾದದ್ದು. ಕೂತಲ್ಲೇ ಝೋಂಪು ಹಿಡಿದು ನಿದ್ದೆ ಹತ್ತಿತ್ತು. ರಂಗಜ್ಜಿ ಇನ್ನೂ ಮಾತನಾಡುತ್ತಲೇ ಇದ್ದಳು. "ಊಟಮಾಡಿ ಮಾತಾಡೋಣ" ಎಂದು ಶಾಮಣ್ಣ ಎರಡು ಮೂರು ಬಾರಿ ಹೇಳಿದ ಮೇಲೇ ಅವರು ಮಾತು ನಿಲ್ಲಿಸಿದ್ದು.

ಊಟ ಆದಮೇಲೆ, ಎಲ್ಲರೂ ಹಜಾರದಲ್ಲೇ ಹಾಸಿಗೆ ಹಾಸಿದೆವು. ಇಪ್ಪತ್ತು ಮೂವತ್ತು ಜನ ಸುಖವಾಗಿ ಮಲಗಬಹುದಾದಂಥ ಎಂಟು ಕಂಭದ ತೊಟ್ಟಿ! "ಒಂದು ಕಾಲದಲ್ಲಿ ಈ ತೊಟ್ಟಿ ಸಾಕಾಗ್ತಿರಲಿಲ್ಲ ನಮ್ಮ ಮನೇಲಿದ್ದವರಿಗೆ" ಎಂದು ಶಾಮಣ್ಣ ಮಲಗುವಾಗ ಹೇಳಿದ.

ಹೊಸ ಸ್ಥಳ, ಹಳೇ ಸಂಬಂಧಿಗಳ ಹೊಸ ಪರಿಚಯ, ಆದರದ ಮಾತುಗಳು, ದಣಿದು ಬಂದಿದ್ದೆ. ಮನೆಯಲ್ಲಿ ಮೂಡಿದ್ದ ಮನಸ್ಸಿನ ಸಂಕಟಗಳೆಲ್ಲಾ ಸ್ವಲ್ಪ ಸ್ವಲ್ಪ ಮುಸುಕಾಗುತ್ತ ಬಂದಿತು. ನಿದ್ದೆ ಹತ್ತಿತು. ಸೊಗಸಾದ ನಿದ್ರೆ.

ಬೆಳಿಗ್ಗೆ ಎದ್ದಾಗ ಉಳಿದವರೆಲ್ಲರೂ ಯಾವಾಗಲೋ ಎದ್ದು, ಮುಖ ತೊಳೆದುಕೊಂಡು ಕಾಫಿ ಕುಡಿದು ಮುಗಿಸಿದ್ದರು. ಬಿಸಿಲಿನ ಕೋಲು ಮುಖಕ್ಕೆ ಬಡಿದಾಗ ಎದ್ದು, ಕಣ್ಣೊರಸಿಕೊಂಡು, ಪ್ರಾತರ್ವಿಧಿಗಳಿಗೆ ತೊಡಗಿದೆ.

ತಿಂಡಿ ತಿಂದು, ಕಾಫಿ ಕುಡಿಯುತ್ತಿದ್ದಾಗ, ಹರಕೆ ಕೊಡಲು ಮಾಡಿದ್ದ ವಿವರಗಳನ್ನು ಶಾಮಣ್ಣ ಹೇಳಲಾರಂಭಿಸಿದ.

ಭೈರವೀಗೆ ಬಲಿ ಕೊಟ್ಟು ಪೂಜೆಮಾಡುವ ಹಕ್ಕು ಒಂದು ಮನೆತನದವರಿಗೇ ಮೀಸಲು. ಈ ಮನೆತನದ ಪೂಜೆ ಹಾಕುವವನು ತನ್ನ ಕಡೆಯವರ ಮದುವೆಯೊಂದಕ್ಕೆ ಹೋಗಿದ್ದಾನೆ. 3-4 ದಿನಗಳಲ್ಲಿ ಹಿಂತಿರುಗುತ್ತಾನೆ. ಅವನಿಗೂ ಪತ್ರವೊಂದನ್ನು ಹಾಕಿಸಿದ್ದೇನೆ. ಅವನು ಬಂದ ಮೇಲೇ ಪೂಜೆ!

ಮೊದಲಿನ ಕಾಲದಲ್ಲಿ ಇದ್ದಹಾಗೆ ಈಗ ದಿಟವಾದ ಬಲಿಯನ್ನು ಕೊಡುವುದಿಲ್ಲ. ಹಿಟ್ಟಿನಲ್ಲಿ ಕುರಿಯ ಗೊಂಬೆಯೊಂದನ್ನು ರಚಿಸಿ, ಅದರ ಕೊರಳಿಗೆ ಕುಂಕುಮದ ಹಾರವನ್ನು ಬಳಿದು, ಮಂತ್ರಿಸಿ, ಪೂಜೆಹಾಕಿ ಅದಕ್ಕೆ, ಜೀವಾವಾಹನೆ ಮಾಡಿ ನೈವೇದ್ಯದ ಹೊತ್ತಿಗೆ ಅದನ್ನೇ ಪೂಜಕನು ಬಲಿ ಕೊಡುತ್ತಾನೆ. ಅಂದ ಮೇಲೆ ಪೂಜೆಯಿಂದ ಯಾವ ರೀತಿಯ ಭೀಭತ್ಸತೆಯೂ ಉಂಟಾಗುವುದಿಲ್ಲ. ಸಾಮಾನ್ಯವಾಗಿ ಬಲಿಕೊಟ್ಟು ಪೂಜೆಮಾಡಲು ಆರಂಭಿಸಿದ ಮೇಲೆ, ಮೂರು ದಿನಗಳು ನಡೆಸಬೇಕು. ಎಲ್ಲದಕ್ಕೂ ಅಣಿ ಮಾಡಿದ್ದೀನಿ. 50-60 ರೂಪಾಯಿಗಳಲ್ಲಿ ಎಲ್ಲ ಖರ್ಚೂ ಮುಗಿಯುತ್ತದೆ. ಆದರೆ ನೀವೆಲ್ಲಾ ಒಂದು ವಾರ ಇಲ್ಲಿರಬೇಕಾಗುತ್ತೆ."

ಎಂದು ಎಲ್ಲಾ ವಿಷಯಗಳನ್ನೂ ತಿಳಿಸಿದ. ತಾಲ್ಲೂಕು ಕಛೇರಿಗೆ ಒಂದೆರಡು ದಿನ ಹೋಗಿ ಬರಬೇಕಾಗುತ್ತೆಂದೂ, ಚಿಕ್ಕಣ್ಣಯ್ಯನ ಹತ್ತಿರ ಮಾತನಾಡುತ್ತಿದ್ದರೆ ಸುಲಭವಾಗಿ ಹೊತ್ತು ಹೋಗುತ್ತದೆಂದೂ ಹೇಳಿದ. ಈ ಕೊಂಪೆಯಲ್ಲಿ ಮೂರು ದಿವಸ ಕೆಲಸವಿಲ್ಲದೆ ಕಾಲವನ್ನು ಹೇಗೆ ಕಳೆಯೋದಪ್ಪಾ ಎಂದು ಅನ್ನಿಸಿದರೂ, ಶಾಮಣ್ಣನ ಮನಸ್ಸನ್ನು ಚಿಕ್ಕದು ಮಾಡಲಾರದೆ, "ಅಯ್ಯೋ! ಕೆಲಸವಿದ್ದರೆ ಹೋಗಿ ಬನ್ನಿ, ಹೊಸ ಸ್ಥಳ. ಅಲ್ಲಿ ಇಲ್ಲಿ

ಓಡಾಡಿ ಬರೋ ಹೊತ್ತಿಗೇ ಸಾಕಾಗಿ ಹೋಗಬಹುದು. ಮನೇಲಿ ಚಿಕ್ಕಣ್ಣಯ್ಯ ಹೇಗ ಇದಾರೆ" ಎಂದು ಸಮಾಧಾನದ ಸುಳ್ಳು ಹೇಳಿದೆ. ಮಧ್ಯಾಹ್ನ ಊಟವಾದ ಮೇಲೆ ಪ್ರಯಾಣ ಬೆಳೆಸಿದ.

ರಂಗಜ್ಜಿ ನನ್ನ ಹೆಂಡತಿಗೆ ಹೇಳಿದಳು, "ಶಾಮಣ್ಣನ ಹೆಂಡತಿ ಹತ್ತಿರ, ಕಾಯಿ ಹುರಿಟ್ಟು, ಮೆಂತ್ಯದ ಗೊಜ್ಜು, ದೊಡ್ಡಪತ್ರೆ ತಂಬುಳಿ, ಇವೆಲ್ಲವನ್ನು ಮಾಡುವುದನ್ನು ಕಲಿತುಕೋಮ್ಮಾ! ನಿನ್ನ ಗಂಡನಿಗೆ ಅವನ್ನು ಕಂಡರೆ ಹುಡುಗತನದಿಂದಲೂ ಇಷ್ಟ" ಎಂದು.

"ಪೇಟೆ ತಿಂಡಿಗಳನ್ನು ಮಾಡಲು ನನಗೆ ಹೇಳಿಕೊಟ್ಟರೆ, ಹಳ್ಳಿ ತಿಂಡಿಗಳನ್ನು ಮಾಡುವ ರೀತೀನ ಸಂತೋಷವಾಗಿ ಕಲಿಸುತ್ತೇನೆ" ಎಂದು ಶಾಮಣ್ಣನ ಹೆಂಡತಿಯು ಹೇಳಿದಳು. ಹಳ್ಳಿ ಹೆಣ್ಣಾದರೂ ಬಲು ಚೂಟಿಯಾಗಿದ್ದಳು. ಮೂರು ಮಕ್ಕಳ ತಾಯಿ ಅಂತ ಹೇಳೋ ಹಾಗಿರಲಿಲ್ಲ. ದೊಡ್ಡಮಗಳ ಜತೆ ಓಡಾಡುತ್ತಿದ್ದರೆ ಅಕ್ಕ ತಂಗಿಯರಂತೇ ಕಾಣುತ್ತಿದ್ದರು. ಮೂರು ದಿನಗಳೂ ಹೆಂಗಸರೆಲ್ಲಾ ಅಡಿಗೆ ಮನೆಯಲ್ಲಿ ಅಖಂಡ ಸಭೆ ಸೇರಿ ಕಾರ್ಯಕಲಾಪಗಳಲ್ಲಿ ಮಗ್ನರಾದರು.

ಶಾಮಣ್ಣ ಹೊರಟ ಸಂಜೆಯೇ ಹಳ್ಳಿಯ ಸುತ್ತಮುತ್ತ ಓಡಾಡಿಕೊಂಡು ಅರ್ಧ ಗಂಟೆಯಲ್ಲೇ ಹಿಂತಿರುಗಿ ಬಂದೆ. ನೋಡಲು ಮನಸೆಳೆಯುವ ಯಾವುದೊಂದು ದೃಶ್ಯವೂ ಇರಲಿಲ್ಲ. ಆಕಾಶದಲ್ಲಿ ಕಪ್ಪುಮೋಡ ನೆರಿಗಟ್ಟಿ ಕೂಡಿತ್ತು. ಮಳೆ ಎಲ್ಲಾದರೂ ಬಂದರೆ ತಾಪತ್ರಯ ಎಂದು ಹಿಂತಿರುಗಿದಾಗ, ಚಿಕ್ಕಣ್ಣಯ್ಯನವರು ಕೈಸಾಲೆಯಲ್ಲೇ ಕೂತಿದ್ದರು. ನನ್ನ ಕಾಲು ಸಪ್ಪಳ ಕೇಳಿ, "ಯಾಕೆ ಬೇಗ ಬಂದುಬಿಟ್ಟೆ ಶಿವು. ಗುಡುಗು ಕೇಳಿಸಿತು. ಮಳೆ ಬರುತ್ತೆ ಅಂತ ಹಿಂತಿರುಗಿದೆಯಾ ಅಥವಾ ನೋಡುಕ್ಕೆಲ್ಲಲ್ಲೂ ಬಂಜರು ನೆಲ, ಬೇಜಾರಾಗಿ ಬಂದೆಯೋ" ಎಂದು ಕೇಳಿದರು.

"ಹೌದು, ಚಿಕ್ಕಣ್ಣಯ್ಯಾ! ಹಳ್ಳಿಯ ಸುತ್ತು ನಡೆದರೆ ಅರ್ಧ ಮೈಲಿ ಆಗಬಹುದು, ಆಲದಮರ ಬಿಟ್ಟರೆ, ಎಲ್ಲೆಲ್ಲೂ ಬಂಜರು ನೆಲ, ಬಂಡೆಗಳೇ ಕಾಣುತ್ತವೆ. ಸ್ವಲ್ಪ ಬೇಜಾರೇ ಅನ್ನಿ, ಒಂದು ಸಂಜೆಗೇ ನನಗೆ ಬೇಜಾರಾದರೆ, ನೀವು ಜೀವಮಾನವನ್ನೆಲ್ಲಾ ಇಲ್ಲಿ ಕಳೆದಿದ್ದೀರಲ್ಲಾ. ನಿಮಗೆಷ್ಟು ಬೇಸರ ಬಂದಿರಬೇಕೋ" ಎಂದು ಹೇಳಿದೆ.

"ಇಲ್ಲಿ ನನಗೆ ಬೇಜಾರೇ! ಚೆನ್ನಾಗಿ ಹೇಳಿದೆ! ಈ ಹಳ್ಳಿ ಸುತ್ತಮುತ್ತ ಇರುವ ಒಂದೊಂದು ಕಲ್ಲೂ ಒಂದೊಂದು ಕತೆ ಹೇಳುತ್ತೆ, ಆಲಮದರದ ಚರಿತ್ರೆ, ಭೈರವಿಗುಡಿಯ ಗತವೈಭವ. ಇಲ್ಲಿದ್ದ ಜನರಸಾಹಸ ಜೀವನ, ಇವೆಲ್ಲಾ ತಿಳಿದವರಿಗೆ, ಇಲ್ಲಿ ಬೇಜಾರಾದರೂ ಹೇಗೆ ಬರುತ್ತಪ್ಪಾ! ನಿನಗೆ ಬೇಜಾರಾದರೆ, ಈ ಹಳ್ಳಿಯಲ್ಲಿ ಸುಮಾರು ನೂರು ವರ್ಷಗಳ ಹಿಂದೆ, ಜನಜೀವನ ಹೇಗಿತ್ತು ಎಂಬುದರ ಕತೆ ಹೇಳುತ್ತೇನೆ" ಎಂದರು.

"ಕತೆ ಕೇಳುಕ್ಕೆ ಬಲು ಇಷ್ಟ ನನಗೆ. ಆದರಲ್ಲೂ ಚಾರಿತ್ರಿಕ ವಿಷಯಗಳಾದರೆ, ಹುಚ್ಚೇ ಹಿಡಿಯುತ್ತೆ ನನಗೆ" ಎಂದು ಉತ್ಸಾಹದಿಂದ ಹೇಳಿದೆ.

"ನಿನ್ನ ದನಿಯಲ್ಲೇ ಗೊತ್ತಾಗುತ್ತೆ, ನಿನ್ನ ಕಾತರತೆ, ಆಗಲಿ ಕೂತುಕೋ ಹೇಳ್ತೀನಿ"



ಎಂದು ಹೇಳಿದರು. "ಮಾಲೀ, ಮಾಲೀ, ಒಂದಿಷ್ಟು ಹುರಿಗಾಳು ತಂದುಕೊಡೆ, ಶಿವೂಗೆ, ಕೊಂಡೆನಕಪಲ್ಲಿ ಕತೆ ಹೇಳ್ತೀನಿ" ಎಂದು ಶಾಮಣ್ಣನ ಮಗಳಿಗೆ ಕೂಗಿ ಹೇಳಿದರು.

ಹುರಿಗಾಳು ತಟ್ಟೆಯನ್ನು ಎದುರಿನಲ್ಲಿಟ್ಟುಕೊಂಡು ಕೇಳಲು ಕುಳಿತೆ. ಚಿಕ್ಕಣ್ಣಯ್ಯನವರು ಹೇಳಲು ಶುರುಮಾಡಿದರು-

ಕೇಳು; ಶಿವೂ;-

# "ಚಿಕ್ಕಣ್ಣಯ್ಯ ಹೇಳಿದ ಕತೆ"

ನಾನು ಹೇಳ್ತಿರೋ ಕಾಲದ ಹೊತ್ತಿಗೆ, ಸುಲ್ತಾನನು ಮರಣ ಹೊಂದಿದ್ದ. ಮಹಾರಾಜರ ಆಡಳಿತ ಶುರುವಾಗಿದ್ದರೂನೂ, ಕುಂಪಣಿಯವರ ಪ್ರಭಾವವೇ ಹೆಚ್ಚಾಗಿತ್ತು. ದೊಡ್ಡ ದೊಡ್ಡ ಷಹರುಗಳ ಮೇಲೆ ಅವರು ನಿಗಾ ಇಟ್ಟರೇ ಹೊರತು, ದೂರದಲ್ಲಿದ್ದ ಬರಡು ಹಳ್ಳಿಗಳ ಮೇಲೆ ಅವರ ದೃಷ್ಟಿ ಬೀಳುತ್ತಿರಲಿಲ್ಲ. ಹೀಗಾಗಿ ದರೋಡೆಕಾರರು ಪಂಜುಗಳ್ಳರು, ಮತ್ತು ಲೂಟಿ ತಂಡದವರು ಬಳ್ಳಾರಿ ಆದವಾನಿ ಕೋಲಾರದ ಪ್ರವೇಶಗಳಲ್ಲೆಲ್ಲಾ ಹರಡಿದ್ದರು. ಇವರೆಲ್ಲಾ ತಲೆ ತಪ್ಪಿಸಿಕೊಳ್ಳಬೇಕಾದರೆ ಕೊಂಡೆನಕಪಲ್ಲಿಯ ಹತ್ತಿರ ಬಂದು ಬಂಡೆಗಳ ಮಧ್ಯೆ ಅವಿತುಕೊಳ್ಳುತ್ತಿದ್ದರು. ಗುಡ್ಡಗಾಡಿನ ಈ ಪ್ರದೇಶದಲ್ಲಿ ಕುಂಪಣಿ ಸರ್ಕಾರವು ಇವರನ್ನು ಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ಕೊಂಡೆನಕಪಲ್ಲಿಯ ಹತ್ತಿಪ್ಪತ್ತು ಮನೆಯವರು ಇಂತಹ ತಲೆ ಮರೆಸಿಕೊಂಡು ಬಂದಿದ್ದ ದರೋಡೆಕಾರರಿಗೆ ಊಟ ತಿಂಡಿ ಒದಗಿಸಿ, ಅವರ ಸೇವೆ ಮಾಡಿ, ಜೀವನ ಸಾಗಿಸುತ್ತಿದ್ದರು. ಕುಂಪಣಿಯ ಸರ್ಕಾರದ ಆಡಳಿತವು ಬಿಗಿಯಾಗ ಹತ್ತಿದಾಗ ದರೋಡೆಕಾರರು ಕೊಂಡೆನಕಪಲ್ಲಿಯ ಕಡೆಗೆ ಬರುತ್ತಿರಲಿಲ್ಲ. ಹಾಗಾಗಿ, ಹಕ್ಕಿಗಳನ್ನು ಕವಣೆಯಿಂದ ಹೊಡೆದು, ಮೊಲಗಳನ್ನು ಬಲೆ ಬೀಸಿ ಹಿಡಿದು ಹಳ್ಳಿಯವರು ಹೊಟ್ಟೆಹೊರೆದುಕೊಳ್ಳುತ್ತಿದ್ದರು. ಕಗ್ಗಲ್ಲಿನ ಭೂಮಿ, ಮಳೆ ಬೀಳದ ನೆಲ, ಅಂದಮೇಲೆ ಹಳ್ಳಿಯವರು ಕಾಡುಜನರ ಜೀವನವನ್ನೇ ನಡೆಸಬೇಕಾಗಿತ್ತು.

ವೈಶಾಖ ಶುದ್ಧ ಹುಣ್ಣಿಮೆಯ ಬೆಳಗಿನ ಝಾವದ ಹೊತ್ತಿಗೆ, ಐವತ್ತು ಐವತ್ತೈದರ ಪ್ರಾಯದವನೊಬ್ಬ ಕೊಂಡೆನಕಪಲ್ಲಿಗೆ ಬಂದನು. ಹಳ್ಳಿಯ ಸೀಳು ನಾಯಿಗಳೆಲ್ಲಾ ಬೊಗಳುತ್ತಾ ಅವನನ್ನು ಸುತ್ತುಗಟ್ಟಿದುವು. ಕೈಯಲ್ಲಿ ಹಿಡಿದಿದ್ದ ಉದ್ದಾನೆ ದೊಣ್ಣೆಯನ್ನು ಥರಪರ ತಿರುಗಿಸುತ್ತಾ, ನಾಯಿಗಳು ಹತ್ತಿರ ಬಾರದಂತೆ ಮಾಡಿಕೊಂಡು ಆತ ಕೊಂಡೆನಕಪಲ್ಲಿಯ ದೊಡ್ಡ ರಸ್ತೆಯ ಬಳಿಗೆ ಬಂದನು. ನಾಯಿಗಳ ಬೊಬ್ಬೆಯ ಬೊಗಳನ್ನು ಕೇಳಿ ಹಳ್ಳಿಯ ಮುಖ್ಯಸ್ಥನಾದ ಅಚ್ಚೋಜಿಯು ತನ್ನ ಮನೆಯಿಂದ ಎದ್ದು ಓಡಿ ಬಂದು ನೋಡಿದಾಗ ದೊಣ್ಣೆ ವರಸೆ ಹಾಕುತ್ತ, ಸಮಾಧಾನದಿಂದ ನಿಂತಿದ್ದವನನ್ನೂ ಸುತ್ತಲು ರೋಷದಿಂದ ಬೊಗಳುತ್ತ ಹಾಗೂ ಬೆದರಿ ದೂರದಲ್ಲೇ ಎಗರಾಡುತ್ತಿದ್ದ ಏಳು ಸೀಳುನಾಯಿಗಳನ್ನೂ ಕಂಡ.

ಹಳ್ಳಿಗೆ ಬಂದಿದ್ದ ಈ ಆಗಂತುಕನ ಮುಖವನ್ನು ನೋಡಿ ಕವಣೆ ಅಚ್ಚೋಜಿಯು, ನಾಯಿಗಳ ಹೆಸರನ್ನು ಒಂದೊಂದಾಗಿ, ಕಾಳ, ನೀಲ, ಬೂದಿ, ಕೆಂಪ, ಬಿಳಿಯ, ಪಚ್ಚೆ,



ಹಳ್ದಿ, ಎಂದು ಕೂಗಿದಾಗ, ಅವೆಲ್ಲವೂ ಅವನ ಕಾಲಬಳಿ ಬೊಗಳುತ್ತಲೇ ಬಂದು, ಬಾಲಗಳನ್ನು ಅಳ್ಳಾಡಿಸುತ್ತ ನಿಂತವು.

"ಯಾರು ನೀವು ಅಯ್ನೋರ? ನಮ್ಮ ಹಾಳು ಕೊಂಪೆಗೆ ಈ ಹೊತ್ತಿನಾಗೆ ಯಾಕಾರ ಬಂದ್ರಿ?" ಎಂದು ಕೈಮುಗಿಯುತ್ತಾ ಅಚ್ಚೋಜಿಯು ಕೇಳಿದ.

ತಿರುಗಿಸುತ್ತಿದ್ದ ದೊಣ್ಣೆಯನ್ನು ಊರಿ ಅದರ ಮೇಲೆ ಬಲಗೈ ಭಾರವನ್ನಿಟ್ಟು ಆಗಂತುಕನು ನಿಂತು, ಮರುವಂದನೆಮಾಡಿ, "ಹಟ್ಟಿ ನಾಯ್ಕರ ಅಯ್ನೋರ ಮೊಮ್ಮಗ ನಾನು. 'ಅಮ್ಮ'ನ ಪೂಜೆ ಮಾಡೋ ಗೀಳು ನನಗೆ. ಏನೇನು ಮಾಡಿದರೂ ಮನಸ್ಸಿಗೆ ಶಾಂತಿ ಬರಲಿಲ್ಲ. ಕಡೆಗೊಮ್ಮೆ 'ಅಮ್ಮ' ಕನಸಿನಲ್ಲಿ ಕಾಣಿಸಿಕೊಂಡು ಹೇಳಿದಳು. 'ಬಂಡೆಗಳು ತುಂಬಿರುವ ಹಳ್ಳಿಗೆ ಹೋಗು. ಅಲ್ಲಿ ನನ್ನ ಗುಡಿ ಇದೆ. ಈಗ ಯಾರೂ ಅಲ್ಲಿ ನನ್ನ ನಂಬುಲ್ಲ. ಯಾರಿಗೂ ನನ್ನ ನೆನಪಿಲ್ಲ. ಅಲ್ಲಿಗೆ ಹೋಗಿ ನನ್ನ ಪೂಜೆ ಮಾಡು. ನಿನಗೆ ಶಾಂತಿ ದೊರಕುತ್ತೆ' ಎಂದು. ಕನಸಿನಲ್ಲಿ ಕಂಡ ಹಾದಿಯನ್ನೇ ಹಿಡಿದು ಬಂದೆ. ಈ ಹಳ್ಳಿಯ ಬಳಿ ಎಲ್ಲಾದರೂ 'ಅಮ್ಮನ' ಗುಡಿಯು ಇದೆಯೇ? ಇದ್ದರೆ ಹೇಳಿ, ತೋರಿಸಿ," ಎಂದು ಹೇಳಿದ.

"ಅಯ್ನೋರ! ನೀವು ಈ ಕಡೆ ಬಂದಾಗ, ದೊಡ್ಡ ಬಂಡೆಯೊಂದರ ಪಕ್ಕದಲ್ಲೇ ಬರ್ಲಿಲ್ವಾ! ಆ ಬಂಡೆ ಹಿಂದೇನೇ ಆಲದಮರ ಒಂದಿತ್ತಿಲ್ವಾ?"

ಎಂದು ಅಚ್ಚೋಜಿಯು ಹೇಳಲು ಶುರುಮಾಡಿದಾಗ, ಆಗಂತುಕನು ಮಧ್ಯೆ ಬಾಯಿ ಹಾಕಿ "ದೊಡ್ಡ ಬಂಡೆ ಪಕ್ಕದಲ್ಲೇ ಬಂದೆ. ಅದರ ಹಿಂದೆ ತೋಪು ಒಂದಿತ್ತು. ಆಲದಮರ ಇತ್ತಿಲ್ಲವಲ್ಲಾ! ರಾತ್ರಿಯಾಗಿದ್ದರೂ ಬೆಳದಿಂಗಳು ಬಿದ್ದಿತ್ತು, ಕಾಣಿಸಲಿಲ್ವಲ್ಲಾ ಆಲದ ಮರ" ಎಂದು ಹೇಳಿದ.

"ತೋಪಿನ ಹಾಗೆ ನಿಮಗೆ ಕಂಡಿದ್ದು, ನಮ್ಮೂರ ಆಲದಮರವೇ, ಅಯ್ನೋರ! ತುಂಬಾ ಭಾರಿಮರ ಅದು, ಭಾಳ ಹಿಂದಿನಕಾಲದ್ದು, ಬೀಳಲುಗಳೆಲ್ಲಾ ಬೇರೆ ಬೇರೆ ಮರದಂತೆ ಕಂಡುಬರುತ್ತೆ. ಅದಕ್ಕೇ ತೋಪು ಇದು ಎಂದನ್ನಿಸುತ್ತೆ.

ಆ ಮರದ ಬುಡದ ಹತ್ತಿರ ಭೈರವಿಗುಡಿಯೊಂದಿದೆ ಎಂದು ನಮ್ಮಪ್ಪ ಹೇಳ್ತಿದ್ದರು. ಮಗುವಾಗಿದ್ದಾಗ ಅಪ್ಪನ ತೋಳ್ಮೇಲೆ ಕೂತ್ಕೊಂಡು ಅಲ್ಲಿಗೆ ಹೋಗಿದ್ದ ಜ್ಞಾಪ್ತಿ ಇದೆ. ಹಂಗಾರೂ 30 ವರ್ಷಗಳಿಂದ ಆ ಕಡೆ ಹಳ್ಳಿಯೋರಾರೂ ಹೋಗಿಲ್ಲ. ಕಾಳಿಂಗನ ಹಾವಳಿ ಹೆಚ್ಚಾಗೈತೆ, ಅಲ್ಲಿ ಹೋಗ್ಬೇಡಿ ಅಂತ ಅಪ್ಪ ಕೂಡ ಹೇಳ್ತಿದ್ದರು. ಈಗೇನಾಗೈತೋ ಆ ಗುಡಿ! ಮೊದಲಿಗಿತ್ತು ಅಲ್ಲಿ, ಅದನ್ನ ಬಿಟ್ಟರೆ ನಮ್ಮ ಹಳ್ಳಿತಾವ ಇನ್ನಾವ ಅಮ್ಮನ ಗುಡಿಯೂ ಇಲ್ಲ." ಎಂದು ಅಚ್ಚೋಜಿಯು ಹೇಳಿದನು.

"ಅಲ್ಲಿಗೆ ನನ್ನ ಕರ್ಕೊಂಡು ಹೋಗಪ್ಪಾ! ನನ್ನೆದೆ ಮೇಲೆ ಗರುಡಮಚ್ಚೆ ಇದೆ. ಗರುಡಪಚ್ಚೆಮಣಿ ಇದೆ ನನ್ನ ಹತ್ತಿರ. ನನಗೇ ಆಗಲಿ, ನನ್ನ ಜತೆ ಬಂದವರಿಗೇ ಆಗಲಿ ಯಾವ ಕಾಳಿಂಗನ ಭಯವೂ ಇರಬೇಕಿಲ್ಲ. ಹಾಗೂ ನಿನಗೆ ಧೈರ್ಯ ಇಲ್ಲದೆ ಇದ್ದರೆ ಎಲ್ಲಿದೆ ಭೈರವಿಗುಡಿ ಹೇಳಪ್ಪಾ! ನಾನು ಒಂಟಿಯಾಗೇ ಹುಡುಕುತ್ತಾ ಹೋಗ್ತೀನಿ" ಎಂದು ಆಗಂತುಕನು ಹೇಳಿದ.

“ಗರುಡಮಚ್ಚಿ ಐತಾ ನಿಮ್ಮತ್ರೆಮ್ಯಾಗ! ಹಂಗಾರ ಕರ್ಕೊಂಡು ಹೋಗ್ತೀನಿ, ಅದಕ್ಕೆ ಮುಂಚೆ, ನಮ್ಮನೆಗೆ ಹೋಗೋಣು. ಅಲ್ಲಿ ಕೈಕಾಲಿಗೆ ನೀರು ಕೊಡ್ತೀನಿ. ಆಮ್ಯಾಗ ನಮ್ಮಮ್ಮ ಕೊಟ್ಟ ಅಂಬಲಿ ಕುಡಿಯೋಣು, ಆಮ್ಯಾಗ ಗುಡಿತಾವಕ್ಕೆ ಹೋಗೋಣು” ಎಂದು ಅಚ್ಲೋಜಿಯು ಹೇಳಿ, ಆಗಂತುಕನನ್ನು ಮನೆಗೆ ಕರೆದುಕೊಂಡು ಹೋದ. ಸೀಳುನಾಯಿಗಳೇಳೂ ಇವರಿಬ್ಬರ ಹಿಂದೆ, ಬಾಯಿ ಬಿಚ್ಚದೆ, ಬಾಲ ಆಡಿಸಿಕೊಂಡು ನಡೆಯುತ್ತ ಹೊರಟವು.

ಅಚ್ಲೋಜಿಯ ಮನೆಯಲ್ಲಿ ಕುರುಡ ತಾಯಿಯು ಕೊಟ್ಟ ಅಂಬಲಿಯನ್ನು ಇಬ್ಬರೂ ಕುಡಿದರು. ಆಗಂತುಕನು ಗಟರು ತೇಗುಹಾಕಿದಾಗ, “ಇಷ್ಟಕ್ಕೇ ನಿಮ್ಮ ಹೊಟ್ಟೆಯು ತುಂಬಿತಾ?” ಎಂದು ಅಚ್ಲೋಜಿಯು ಕೇಳಿದನು.

“ನಾಲಿಗೆ ಮೇಲೆ ಆಡಿ, ಗಂಟಲತುಂಬಿ ಸರಿದುಹೋಗಿ, ಹೊಟ್ಟೆಗೆ ತಂಪು ಮಾಡಿದ ಇಂತ ಉಪ್ಪಿನ ಅಂಬಲಿಯನ್ನ ನಾನೀತನಕ ಕುಡಿದ ನೆನಪಿಲ್ಲ. ಅಮ್ಮ ಕೊಟ್ಟ ಅಂಬಲಿ ಅಲ್ಲವೇ,” ಎಂದು ತುಟಿಗಳಮೇಲೆ ನಾಲಿಗೆಯನ್ನು ಕುಣಿಸುತ್ತಾ ಆಗಂತುಕನು ಹೇಳಿದ. ಕವಣೆ ಅಚ್ಲೋಜಿಯು ಒಂದು ಚಣ ಆಗಂತುಕನನ್ನೇ ಎವೆಯಿಕ್ಕದೆ ನೋಡಿದ. ಜಟ್ಪಂತ ಎದ್ದು ಅಚ್ಲೋಜಿ, ಸೂರಿಗೆ ಸಿಕ್ಕಿಸಿದ್ದ ಎರಡು ಮಚ್ಚು ಕತ್ತಿಗಳನ್ನು ಎಳೆದ. ಒಂದನ್ನು ತನ್ನ ಸೊಂಟಕ್ಕೆ ಸಿಕ್ಕಿಸಿಕೊಂಡ. ಇನ್ನೊಂದನ್ನು ಆಗಂತುಕನಿಗೆ ಕೊಡುತ್ತಾ “ಇದನ್ನು ಕೈಲಿ ಹಿಡಕೊಂಡಿರಿ, ಮುಂದೆ ಬೇಕಾದೀತು” ಎಂದು ಹೇಳಿದ.

ಆಗ ಸೊಂಟದಿಂದ ಕಿರು ಕಠಾರಿಯನ್ನು ಆಗಂತುಕನು ಹೊರಸೆಳೆದು ತೋರಿಸಿ, “ಇದನ್ನೆಸೆದು ಚಿರತೆಯೊಂದನ್ನು ಒಂದೇ ಏಟಿಗೆ ಕೊಂದಿದ್ದೇನೆ, ಇದು ಇರುವ ತನಕ ಬೇರೆ ಆಯುಧ ನನಗೇಕೆ ಬೇಕು?” ಎಂದು ಹೇಳಿದ.

ಆಗಂತುಕನು ಕಿರು ಕಠಾರಿಯನ್ನು ಎಳೆದ ಜೋರನ್ನು ಕಂಡ ಅಚ್ಲೋಜಿಯು ಚಣಕಾಲ ಭೌಳಿ ಬಡೆದವನಂತೆ ತೆಪ್ಪಗಾದ.

“ಹಂಗಾರ ಹೊರಡೋಣು,” ಎಂದು ಮರುಕ್ಷಣ ಹೇಳುತ್ತಾ ಮುಂದ್ಹೆಜ್ಜೆ ಹಾಕಿದ. ಆಗಂತುಕನು ಎಡಗೈಯ್ಯಲ್ಲಿ ದೊಣ್ಣೆಯನ್ನು ಆಡಿಸುತ್ತಾ, ಕಿರು ಕಠಾರಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಹಿಂಬಾಲಿಸಿದ.

ಇಬ್ಬರೂ ಆಲದಮರದ ತೋಪಿನ ಬಳಿಗೆ ಹೋದರು. ಕಾಡಿನ ಸಿಂಡು ತುಂಬಿದ್ದ ಆ ತೋಪಿನಲ್ಲಿ ಅಚ್ಲೋಜಿಗೆ ನಡು ಹಗಲಲ್ಲೇ ಹಾದಿ ಕಾಣಿಸುವುದು ತುಸು ಕಷ್ಟವಾಯಿತು. ಕಾಲಿನಮೇಲೆ ಕಣ್ಣುಗಳನ್ನು ನೆಟ್ಟ, ಎದುರುತೊಡಕಿದ ಬೀಳಲುಗಳನ್ನು ಮಚ್ಚು ಕತ್ತಿಯಿಂದ ಕತ್ತರಿಸುತ್ತ, ಹಾದಿ ಬಿಡಿಸಿಕೊಂಡು ಅಚ್ಲೋಜಿಯು ಆಲದಮರದ ಬುಡದ ಬಳಿಗೆ ನಡೆದುಹೋದ. ಹಿಂದೆ ಆಗಂತುಕ.

ಆ ಮರದ ಬುಡದ ಸುತ್ತಳತೆ ಹದಿನೆಂಟು ಮೊಳವಿದ್ದಿರಬಹುದು. ಬಳಿಯಲ್ಲಿ ಸಣ್ಣ ಗುಡಿಯೊಂದಿತ್ತು. ಸುತ್ತಲೂ ಮೂರು ಮಾರುದೂರ ಬೀಳಲುಗಳು ಯಾವುದೂ ಬಿದ್ದಿರಲಿಲ್ಲ. ಬಯಲೇ ಹರಡಿತ್ತು.

ಇಬ್ಬರೂ ಅಲ್ಲಿ ಒಂದರೆಕ್ಷಣ ನಿಂತರು.



ಒಮ್ಮಿಂದೊಮ್ಮೆ ಆಗಂತುಕನು “ಬಾಳ್ ಭೈರವೀ”, ಎಂದು ಉದ್ವೇಗದಿಂದ ಚೀರಿದನು. ಆಲದ ಬುಡದ ಬಳಿಯಿದ್ದ, ಗೆಜ್ಜೆಗು ಹತ್ತಿದ್ದ, ಸಣ್ಣ ಗುಡಿಗೆ ಸಾಷ್ಟಾಂಗ ಅಡ್ಡಬಿದ್ದನು.

ಇದನ್ನೆಲ್ಲಾ ಕೇಳಿ ನೋಡಿದ ಅಚ್ಲೋಜಿಗೆ ಭಯವು ತುಂಬಿ ಬಂದಿತ್ತು. ಮೈ ಬೆವರುತ್ತಿತ್ತು. ಆದರೂ ಬಲಗೈಯಲ್ಲಿ ಕವಣೆಯನ್ನು ಹಿಡಿದು, ಎಡಗೈಯ್ಯಲ್ಲಿ ಮಚ್ಚಿನ ಹಿಡಿಯನ್ನು ಅದುಮುತ್ತ, ಕಡೆದ ಕಲ್ಲು ಬೊಂಬೆಯಂತೆ ನಿಂತಿದ್ದನು.

ಭೈರವಿಯ ಕಾಲಬಳಿ ತಲೆಯಿಟ್ಟು ಚಚ್ಚಿದೆನು.
ಕಾಲ ಭೈರವನೀಗ ದಾರಿ ತೋರಿಹನು.

* * * *

ಎಷ್ಟೆಲ್ಲ ಸಿರಿಯಿತ್ತು! ಏನೆಲ್ಲ ಸೊಬಗಿತ್ತು!
ಕಷ್ಟಗಳ ಮೆಟ್ಟುತ್ತ; ಬೇನೆಯನೆ ಬಯಸುತ್ತ;
ಭೃಷ್ಟಧೈರ್ಯದಿ ನಾನು, ಮುನ್ನುಗ್ಗುತ್ತಿದ್ದೆ.
ಸ್ಪಷ್ಟ ಗುರಿಯಿಲ್ಲದೆಲೆ ಅಲೆದಾಡುತಿದ್ದೆ.

ಬೆಳಕು ತುಂಬಿದ ಹಿರಿ ಹಾದಿಯಲಿ ಎಡವಿ
ಥಳುಕುಸಿರಿಯಿದ್ದ ಹಾದಿಯಲ್ಲಿ ನಡೆದು
ಉಸಿರನೆಲ್ಲವ ಕಳೆದ ಪ್ರಾಯದಾ ಭ್ರಮೆಯಲ್ಲಿ
ಕಸವನೆಲ್ಲವ ಹಿಡಿದೆ ಮಾಯೆಯಾ ಮೋಜಿನಲಿ

ಇಂದು ಕಂಡೆನು ಬೆಳಕ! ಮುಂದಾರಿ ಹಸನೀಗ
ಹಿಂದು ಹಿಂದಿನದೆಲ್ಲ ಮರೆತು ಅಡಿಯಿಡುವೆ
ಸಂದೇಹವನೆನ್ನೀಗ ಕಾಡಲಾರದು, ಸತ್ಯ!
ನನ್ದೇಹವಿನ್ಮೇಲೆ ತೊಡಕಲಾರದು, ನಿತ್ಯ!

ಇನ್ಮುಂದೆ ನಾನೇನ ಬಯಸುವುದುಮಿಲ್ಲ
ಇನ್ಮುಂದೆ ಒಂದುಚಣ ಸುಮನಿರುವುದೂ ಇಲ್ಲ
ಕಣ್ಮುಂದೆ ಕಂಡುದನು ಮನತುಂಬಿ ಮಾಡುವೆನು
ನನ್ಮುಂದೆ ಬಾರೆನುವ ತಾಯ್‌ಕರೆಗೆ ಕಾಯುವೆನು

ಉದ್ವೇಗದಿಂದ ಇದನ್ನು ನುಡಿದ ಆಗಂತುಕನು, ಭೌಳಿ ಬಡೆದವನಂತೆ ಒಂದೆರಡು ಕ್ಷಣ ಬಿದ್ದಿದ್ದನು, ನಂತರ ಬೆವರೊರೆಸಿಕೊಂಡು ಎದ್ದನು. ಆಗ ದೃಷ್ಟಿ ಹಾಯಿಸಿ ಅಚ್ಲೋಜಿಯನ್ನು ಕಂಡು,

“ನಾನು ನಿಮಗೆ ಹುಚ್ಚನಂತೆ ಕಾಣಿಸಿರಬಹುದು! ಆದರೆ ಈಗ ಮಾತ್ರ ನನ್ನ ಮನಸ್ಸಿಗೆ ಶಾಂತಿ ದೊರಕಿರುವುದು. ಅದಕ್ಕೇ ಬಿರಿದ ಎದೆಯಿಂದ ಭೈರವಿತಾಯಿಗೆ ತೊದಲು ಹಾಡು ಹಾಡಿದೆ. ನಿಮ್ಮ ಮುಖ ನೋಡಿದರೆ ಬೆದರಿದಂತೆ ಕಾಣುತ್ತಿದ್ದೀರಿ!

ಓಹೋ! ಅರ್ಥವಾಯಿತು. ನಾನು ಕಾಪಾಲಿಕರ ಗುಂಪಿನವನಿರಬಹುದೆಂದೂ,

ನರಬಲಿ ಕೊಟ್ಟು ಸ್ವಾರ್ಥಸಾಧನೆ ಮಾಡುತ್ತೇನೆಂದೂ ನಿಮಗೆ ತೋರಿರಬಹುದು ಭಯವಾಗಿರಬಹುದು. ಆದರೆ ನಾನು ಹಟ್ಟಿನಾಯಕನ ಆಸ್ಥಾನದಲ್ಲಿ ಬೆಳೆದವನು ದನಕರುಗಳೆಲ್ಲಾ ನಮ್ಮ ಜತೆ ಜೀವಿಗಳು, ಗುಡ್ಡಬೆಟ್ಟಗಳೆಲ್ಲಾ ಯಾವುದೋ ಜನುಮ ಸೋದರರು, ಎಂದು ನಂಬಿರುವ ಪ್ರಕೃತಿಯ ಮಗ ನಾನು. ಯಾವುದೊಂದು ಜೀವಿಯ ಯಾವ ನಿರ್ಜೀವಿಯ ಅಂತರ್ಜೀವವನ್ನು ಕೂಡ ನೋಯಿಸಲು ನನಗೆ ಎಳ್ಳಷ್ಟು ಇಷ್ಟವಿಲ್ಲ. ಆದರೂ ಅಕಾಲಿಕವಾಗಿ, ಅದೃಷ್ಟದಿಂದಾಗಿ ದೊರೆತ ನಿಧಿಯನ್ನೇ ನಂಬಿ ಕುಳಿತವರ, ಅದನ್ನೇ ಒರಗಿಕೊಂಡು ಮೆರೆಯುವವರ ಉದ್ಧಾರಕ್ಕಾಗಿ, ಅವರ ನಿಧಿಯನ್ನು ಕಸಿದು ಅವರ ಅದೃಷ್ಟವನ್ನು ಅವರ ಕಣ್ಣಿಗೆ ಕಾಣುವಂತೆ ಮಾಡಿಸುವುದೇ ನನ್ನನ್ನು ಕೊರೆಯುತ್ತಿರುವ ಹಂಬಲ, ನನ್ನ ಹಿರಿಯಾಸೆ.

ಆ ಹಿರಿಯಾಸೆಯು ಈಗ ಸಫಲಗೊಳ್ಳುವ ಸೂಚನೆಗಳು ಕಂಡುಬಂದಿವೆ. ಅದಕ್ಕೇ ನಿಮ್ಮಲ್ಲಿ ಕೇಳಿಕೊಳ್ಳುತ್ತೇನೆ. ಈ ಗುಡಿಯು ನಿಮ್ಮದು, ನಿಮ್ಮ ಹಳ್ಳಿಯದು. ನೀವು ಒಪ್ಪಿದರೆ ಇಲ್ಲೇ ಪೂಜಾರಿಯಾಗಿರುತ್ತೇನೆ" ಎಂದು ಆಗಂತುಕನು ಹೇಳಿದನು.

ಹೇಳಿದವನ ಮುಖವನ್ನೇ ಅಚ್ಚೋಜಿಯು ದಿಟ್ಟಿಸಿ ನೋಡುತ್ತಿದ್ದನು. ನಿಧಾನವಾಗಿ ಮಚ್ಚುಕತ್ತಿಯ ಹಿಡಿಯನ್ನು ಸಡಿಲಗೊಳಿಸಿದನು. ಅವನ ಮನಸ್ಸಿನ ಮೇಲೆ ಏನೋ ಪರಿಣಾಮ ಆಯಿತು. ಆದರೂ ಕಾಡುಬಾಳು ನಡೆಸುತ್ತಿದ್ದ ಅವನಿಗೆ ಹುಷಾರುತನ ಸಹಜವಾಗಿತ್ತು ಅದಕ್ಕೇ,

"ಅದು ಸಾಧ್ಯವಿಲ್ಲ, ಅಯ್ನೋರ! ನಮ್ಮ ಗುಡಿಯ ಪೂಜಾರಿಯಾದರೆ, ನಿಮ್ಮ ಹೊಟ್ಟೆಗೆ ನಾವೆಲ್ಲಾ ದುಡಿದು ಹಾಕಬೇಕಾಗ್ತದೆ. ನಮ್ಮ ಹೊಟ್ಟೆ ಹೊರೆಯುವುದೇ ಕಷ್ಟವಾಗೈತೆ. ಮನೇಲಿ ಮಕ್ಕಳು ಸತ್ತರೆ, ಅಷ್ಟು ಊಟ ಮಿಗಿತು, ಅಮ್ಮ ಕೊಂಡೊಯ್ದಳು ಎಂದು ಸಂತೋಷಪಡೋ ಸ್ಥಿತೀಲಿದೀವಿ. ನಮ್ಮೇಲೆ ನೀವೂ ಹೇರಿಕೊಂಡರೆ ಭಾಳ ಕಷ್ಟವಾಗ್ತದೆ" ಎಂದು ಹೇಳಿದನು.

"ನಿಮ್ಮ ಗುಡಿಯ ಪೂಜಾರಿಯಾದರೆ ನೀವ್ಯಾರೂ ದೇವರಿಗಾಗಲಿ, ನನಗಾಗಲೀ ಕಾಣಿಕೆ ಕೊಡಬೇಕಾಗಿಲ್ಲ. ದವಸ ಧಾನ್ಯ ನೀಡಬೇಕಾಗಿಲ್ಲ. ಹಿರಿಯರು ಕೊಟ್ಟ ಹಣ ಸಾಕಷ್ಟು ನನ್ನ ಹತ್ತಿರ ಇದೆ. ಇಲ್ಲಿ ನಾನು ಪೂಜಾರಿಯಾದರೆ, ನಿಮ್ಮ ಹಳ್ಳಿಯಿಂದ ಪ್ರತಿ ಅಮಾವಾಸ್ಯೆ ಪೂಜೆಗೆ ಯಾವ ಯಾವ ಮನೆಯವರು ಬರುತ್ತಾರೋ ಅವರಿಗೆಲ್ಲಾ ಎರಡು ಸುಲ್ತಾನ್ ವರಹಾಗಳನ್ನು ಪ್ರಸಾದವಾಗಿ ಕೊಡುತ್ತೇನೆ. ನನ್ನ ಸಾಕುವ ಭಾರ ನಿಮ್ಮ ಮೇಲೆ ಬೀಳುವುದಿಲ್ಲ" ಎಂದು ಆಗಂತುಕನು ಹೇಳಿದ.

ಇದನ್ನು ಕೇಳಿದ ಮೇಲೆ ಅಚ್ಚೋಜಿಗೆ ಅನುಮಾನ ಹೆಚ್ಚಾಯ್ತು. "ಸುಮ್‌ಸುಮ್‌ಕೆ ನಮಗೆಲ್ಲಾ ಯಾಕೆ ಹಣ ಕೊಟ್ಟೀರಾ? ಎಷ್ಟು ದಿನ ಅಂತ ಕೊಡಕ್ಕಾಗುತ್ತೆ? ಇದರಿಂದ ನಿಮಗಾಗೋ ಲಾಭತಾನೆ ಏನು?" ಎಂದು ಕೇಳಿದ.

"ಸುಮ್ಮಸುಮ್ಮಗೆ ಕೊಡುಲ್ಲ. ಭೈರವಿ ಸೇವೆಗೆ ಮನೆಗೊಬ್ಬ ಮಗನಂತೆ ಹಳ್ಳಿಯವರು ನನಗೆ ದತ್ತು ಕೊಡಬೇಕು. ನಿಮ್ಮ ಹಳ್ಳಿಯ ಜೀವನದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡುತ್ತೇನೆ. ಅವನ್ನು ನೀವೆಲ್ಲಾ ಒಪ್ಪಿಕೋಬೇಕು. ನಾನು ಬದುಕಿರೋತನಕ ಈ ಹಣದ



ಪ್ರಸಾದವನ್ನು ಕೊಡ್ತೀನಿ. ಇದರಿಂದ ನನಗೆ ಆಗೋ ಲಾಭ ಈಗ ನಿಮಗೆ ತಿಳಿಯುಲ್ಲ, ಮುಂದಕ್ಕೆ ಗೊತ್ತಾಗುತ್ತದೆ" ಎಂದು ಆಗಂತುಕನು ಹೇಳಿದ.

"ನೀವು ಹೇಳೋದನ್ನು ನಂಬೋದು ಸ್ವಲ್ಪ ಕಷ್ಟ! ಅಷ್ಟು ಹಣ ಎಲ್ಲಿಂದ ತತ್ತೀರಿ?" ಎಂದು ಅಚ್ಚೋಜಿಯು ಕೇಳಿದ.

ಆಗ ಸೊಂಟದ ಪಟ್ಟಿಯನ್ನು ಸಡಿಲಮಾಡಿ, ಉದ್ದಾನೆ ಚೀಲವನ್ನು ಆಗಂತುಕನು ಹೊರಕ್ಕೆ ತೆಗೆದ. ಚೀಲದ ಬಾಯಿ ಬಿಚ್ಚಿ, ಭೈರವಿಯ ಗುಡಿಯ ಬಾಗಿಲಬಳಿ ಸುರಿದ. ಮೊರ ತುಂಬುವಷ್ಟು ಥಳಥಳಿಸುವ ವರಹಾಗಳು ರಾಶಿಬಿದ್ದುವು.

ಅಚ್ಚೋಜಿಯು ಕಣ್ಣುಗಳನ್ನು ಉಜ್ಜಿಕೊಂಡು ನೋಡಿದ. ಸರಸರ ಶಬ್ದವಾಯಿತು. ಗೆಜ್ಜಲು ಹಿಡಿದಿದ್ದ ಗುಡಿಯ ಬಾಗಿಲ ಕಂಡಿಯಿಂದ ಕಾಳಿಂದ ಘಟ ಸರ್ಪವೊಂದು ಹರಿದುಬಂದು ಆ ವರಹಾಗಳ ರಾಶಿಯನ್ನು ಸುತ್ತಿಕೊಂಡು, ಅದರ ಮೇಲೆ ಹೆಡೆಯನ್ನಿರಿಸಿಕೊಂಡು ಮಲಗಿಕೊಂಡಿತು.

"ಬಾಳ್ ಭೈರವೀ!" ಎಂದು ಕೂಗುತ್ತಾ ಆಗಂತುಕನು ಗುಡಿಗೆ ಮತ್ತೊಮ್ಮೆ ಸಾಷ್ಟಾಂಗ ಅಡ್ಡಬಿದ್ದ. ಆಮೇಲೆ ಎದ್ದು,

"ಈಗ ನಂಬಿಕೆ ಬಂತೇ?" ಎಂದು ಕೇಳಿದ. ಅಚ್ಚೋಜಿಯು ಆಗಂತುಕನ ಮುಖವನ್ನೇ ನೋಡುತ್ತಿದ್ದ. ಆ ಮುಖದ ಮೇಲೆ ಮಿಂಚು ಆಡ್ತಾ ಇದ್ದಹಾಗೆ ಅಚ್ಚೋಜಿಗೆ ಕಾಣಿಸಿತು.

"ಅಯ್ನೋರ! ಹಳ್ಳಿಗೆ ಹೋಗಿ ಐದೂ ಜನ ದೊಡ್ಡೋರ್ನ ಕಳಿಸಿ ಪಂಚಾಯ್ತಿ ಮಾಡಿ, ನಿಮಗೆ ಉತ್ತರ ಹೇಳ್ತೀನಿ" ಎಂದು ಹೇಳುತ್ತಾ ಅಚ್ಚೋಜಿಯು "ಈಗ ಹಳ್ಳಿಗೆ ಹಿಂತಿರುಗೋಣ" ಎಂದ.

"ಧ್ಯಾನಮಾಡ್ತಾ ನಾನಿಲ್ಲೇ ಉಳುಕೋತೀನಿ. ನೀವು ಹೋಗಿ ದೊಡ್ಡೋರ್ನ ಕೇಳಿ, ಮಧ್ಯಾಹ್ನದ ಹೊತ್ತಿಗೆ ಬಂದು ಉತ್ತರ ಹೇಳಿದರೆ ನಿಮ್ಮ ಉಪಕಾರ ನಾನು ಮರೆಯುಲ್ಲ," ಎಂದು ಆಗಂತುಕನು ಹೇಳಿ, ಅಲ್ಲೇ ವೀರಮಂಡಿ ಹಾಕಿ ಕೂತುಕೊಂಡ. ಅಚ್ಚೋಜಿಯು ಹಳ್ಳಿಯ ಕಡೆಗೆ ಬೇಗಬೇಗ ನಡೆದುಹೋದ. ಹಳ್ಳಿಯ ಐದೂ ದೊಡ್ಡವರನ್ನು ಕರೆಸಿ ಪಂಚಾಯ್ತಿ ಕೂಡಿಸಿ, ತಾನು ನೋಡಿದ್ದನ್ನೂ, ಆಗಂತುಕನು ಹೇಳಿದ್ದನ್ನೂ ವಿವರಿಸಿದ.

"ಕಾಳಿಂಗ ನಾಗರವೇ ನಿಧಿ ಕಾಯೋವಾಗ, ಕಾಲಭೈರವನೇ ಅಲ್ಲಿರಬೇಕು, ಭೈರವಿಗೆ ನಿದ್ದೆ ಮುಗಿದಿರಬೇಕು. ಈಗಲೇ ಎಲ್ಲರೂ ಹೋಗೋಣ, ಅಡ್ಡಬಿದ್ದು ನೀವು ಹೇಳಿದ ಹಾಗೆ ನಡಕೋತೀವಿ ಎಂದು ಪೂಜಾರಪ್ಪನಿಗೆ ಹೇಳೋಣ" ಎಂದು ಹಳ್ಳಿಯ ಹಿರಿಯರಲ್ಲಿ ಹಿರಿಯನಾಗಿದ್ದ ಖಂಡೋಜಿರಾಯನು ಹೇಳಿದ. ಹಳ್ಳಿಯ ಹಿರಿಯರೆಲ್ಲ ತಲೆಯಾಡಿಸಿ ಸಮ್ಮತಿ ಕೊಟ್ಟರು. ಎಲ್ಲರೂ ಊಟವನ್ನು ಕೂಡ ಮಾಡದೆ ಆಲದಮರದ ಭೈರವಿ ಗುಡಿಯ ಬಳಿಗೆ ಹೊರಟರು.

ಧ್ಯಾನಮಾಡುತ್ತಾ ವೀರಮಂಡಿ ಹಾಕಿ ಕುಳಿತಿದ್ದ ಆಗಂತುಕನಿಗೆ ಎಲ್ಲರೂ ಅಡ್ಡಬಿದ್ದರು.

"ಪೂಜಾರಪ್ಪನೋರೇ! ಏನು ಮಾಡು ಅಂತ ನೀವು ಹೇಳ್ತೀರೋ ಅದನ್ನು ಜಟ್ಟಂಪ ಮಾಡ್ತೀವಿ," ಎಂದು ಅವರು ಪ್ರಮಾಣ ಮಾಡಿದರು.

ಮಾರನೆ ದಿನವೇ ಆಲದಮರದ ಅಂಚಿನಲ್ಲಿ ಹಳ್ಳಿಯವರೆಲ್ಲಾ ಸೇರಿ ಆರು ಗುಡಿಸಲುಗಳನ್ನು ಕಟ್ಟಲು ಪ್ರಾರಂಭ ಮಾಡಿದರು. ಅವತ್ತಿನಿಂದಲೇ ಹಳ್ಳಿಯ ಹದಿನಾರು ಹುಡುಗರು ಪೂಜಾರಪ್ಪನ ಬಳಿಗೆ ಬಂದು ಭೈರವಿ ಸೇವೆಗೆ ಮೀಸಲಾಗಿ ನಿಂತರು.

ಕೊಂಡೆನಕವಲ್ಲಿಯ ಜೀವನದಲ್ಲಿ ಹೊಸ ಯುಗವೇ ಪ್ರಾರಂಭವಾಯಿತು. ಪೂಜಾರಪ್ಪನ ಅನುಮತಿಯಿಲ್ಲದೆ ಹಳ್ಳಿಯವರಾರೂ ಎಲ್ಲಿಗೂ ಹೋಗುತ್ತಿರಲಿಲ್ಲ. ಭೈರವಿ ಸೇವೆಗೆ ಮೀಸಲಾಗಿದ್ದ ಹುಡುಗರು ಮನೆಗಳಿಗೆ ವಾರಕ್ಕೊಮ್ಮೆ ಹೋದಾಗ ಕೂಡ, ಪೂಜಾರಪ್ಪನು ಏನೇನು ಮಾಡಿಸಿದ, ಏನೇನು ಮಾಡಿಸಿದ, ಏನೇನು ಕಲಿಸಿದ, ಏನೊಂದರ ವಿಷಯವನ್ನು ಹೇಳುತ್ತಲೂ ಇರಲಿಲ್ಲ. ಮನೆಯವರೂ ಕೇಳುತ್ತಿರಲಿಲ್ಲ. ಅಷ್ಟು ಹೆದರಿಕೆ, ಪೂಜಾರಪ್ಪನನ್ನು ಕಂಡರೆ. ಕಾಳಿಂಗ ಒಲಿದಿತ್ತಿಲ್ಲವೇ ಅವನಿಗೆ!

ಅಜ್ಜೋಜಿಯೇ ಪೂಜಾರಪ್ಪನ ಆಣತಿಯ ಮೇರೆಗೆ ಸಂತೆಗಳಿಗೆ ಹಳ್ಳಿಯ ಮುಖಂಡರನ್ನು ಕರೆದುಕೊಂಡು ಹೋಗಿ, ವರ್ಷಕ್ಕೆ ಬೇಕಾಗುವ ದವಸ ಧಾನ್ಯಗಳನ್ನೂ ಅರಿವೆ, ಬಟ್ಟೆಗಳನ್ನೂ ಕೊಂಡುತರುತ್ತಿದ್ದ. ಮನೆಮನೆಗೂ ಸರಬರಾಜು ಮಾಡುತ್ತಿದ್ದ.

ಹಳ್ಳಿಯವರೆಲ್ಲ ಸೇರಿ ಎಂಟುರಾಟೆ ಭಾವಿಯನ್ನು ತೋಡಿಸಿ ರಾಗಿ, ತರಕಾರಿಗಳನ್ನು ಬೆಳೆಯಲು ಅನುಕೂಲ ಮಾಡಿಕೊಂಡಿದ್ದರು.

ಹಳ್ಳಿಯ ಮಕ್ಕಳ ವಿದ್ಯಾಭ್ಯಾಸಕ್ಕೆ ಶಾಲೆಯನ್ನು ತೆರೆಯಬೇಕೆಂದು ಏರ್ಪಾಡು ಮಾಡಿದರು. ಪೂಜಾರಪ್ಪನೇ ಒಬ್ಬ ಮಾಸ್ತರನ್ನು ಕರೆಸಿಕೊಂಡ. ಬಂದ ಮಾಸ್ತರಿಗೆ ಮನೆ ಕಟ್ಟಿಸಿಕೊಟ್ಟು, ಎಲ್ಲಾ ಅನುಕೂಲಗಳನ್ನು ಮಾಡಿಕೊಟ್ಟರು. ಆತನೇ ರಂಗಜ್ಜಿಯ ಮುತ್ತಾತ. ದೇವರಯ್ಯ ಅಂತ ಹೆಸರು. ಅವರಿದ್ದ ಮನೆಯೇ ಇದು.

ಮೂರು ವರ್ಷಗಳು ಹೀಗೇ ಕಳೆದುವು. ನೆಮ್ಮದಿಯಿಂದಲೇ ನಡೆದುವು. ಒಂದುದಿನ ಪೂಜಾರಪ್ಪನು ಶಿಷ್ಯರೊಂದಿಗೆ ಹಳ್ಳಿಗೆ ಬಂದ. ಶಾಲೆಯ ಮುಂದುಗಡೆ ಜಗುಲಿಯ ಮೇಲೆ ಕುಳಿತು ಹಳ್ಳಿಯವರನ್ನೆಲ್ಲಾ ಕರೆಸಿದ.

"ಬಲು ಒಳ್ಳೆಯ ಚೂಟಿ ಹುಡುಗರನ್ನೇ ಭೈರವಿ ಸೇವೆಗೆಂದು ನನ್ನ ಬಳಿಗೆ ಕಳಿಸಿದಿರಿ. ನನಗೆ ತಿಳಿದದ್ದನ್ನೆಲ್ಲಾ ಕಲಿಸಿದೆ. ನನಗಿಂತ ಹೆಚ್ಚು ಉತ್ಸಾಹದಿಂದ ಅವರೂ ಕಲಿತರು. ಕಲಿತ ವಿದ್ಯೆಯನ್ನು ಹಿತದ ಕೆಲಸಕ್ಕೆ ಇನ್ನು ಮೇಲೆ ಮೀಸಲಾಗಿರಿಸಬೇಕು, ಅದಕ್ಕೋಸ್ಕರ ಆಶೀರ್ವಾದ ಪಡೆಯಲು ನಾನು ಹದಿನೈದು ದಿನಗಳು ಯಾತ್ರೆ ಹೋಗುತ್ತೇನೆ. ದೈವಭಕ್ತರನ್ನು ನಮ್ಮೂರಿಗೆ ನವರಾತ್ರಿಗೆ ಬರಹೇಳುತ್ತೇನೆ.

ಬರುವ ಅಮಾವಾಸ್ಯೆಯ ದಿನ ಹಿಂತಿರುಗುತ್ತೇನೆ. ಅವತ್ತೇ ಮಹಾಲಯ ಅಮಾವಾಸ್ಯೆ. ಶರನ್ನವರಾತ್ರಿಯ ಪ್ರಾರಂಭ. ಒಂದೊಂದು ದಿನವೂ ಹುಡುಗರು ಕಲಿತ



ವಿದ್ಯೆಯನ್ನು ನಿಮ್ಮೆಲ್ಲರ ಎದುರಿಗೆ, ಶಾಲೆಯ ಮುಂದಿನ ಈ ಬಯಲಿನಲ್ಲಿ ಪ್ರದರ್ಶಿಸುತ್ತಾರೆ. ನಾನು, ಅಜ್ಜೋಜಿ ಮತ್ತು ಖಂಡೋಜಿ ಮೂವರೂ ಪರೀಕ್ಷಕರಾಗಿ, ಹುಡುಗರಲ್ಲಿ ಯಾರು ಮೊದಲು, ಯಾರು ಎರಡನೆಯವರು ಎಂಬುದನ್ನು ತೀರ್ಮಾನಿಸುತ್ತೇವೆ.

ಸಂಜೆ ಪೂಜೆಗೆ ಬಂದ ದೇವರ ಭಕ್ತರಿಗೆ ಕಾಣಿಕೆ ಕೊಡುತ್ತೇನೆ. ಅವರುಗಳು ಹುಡುಗರನ್ನು ಆಶೀರ್ವದಿಸಿದರೆ ಹುಡುಗರ ಜೀವನ ಹಸನಾಗುತ್ತೆ" ಎಂದು ಹೇಳಿ, ತಾನು ಬರುವ ಹೊತ್ತಿಗೆ ಶಾಲೆಯ ಮುಂದಿನ ಬಯಲನ್ನು ಆಟಗಳಿಗೆ ಸರಿ ಮಾಡಬೇಕೆಂದು ಸಲಹೆಯನ್ನಿತ್ತು, ಹೊರಟುಹೋದ.

ಮಹಾಲಯ ಅಮಾವಾಸ್ಯೆಯ ದಿನ ಪೂಜಾರಪ್ಪನು ಯಾವಾಗ ಭೈರವಿ ಗುಡಿಗೆ ಹಿಂತಿರುಗಿದನೋ ಯಾರಿಗೂ ಗೊತ್ತಿಲ್ಲ. ಆದರೆ ಬೆಳಿಗ್ಗೆ ಏಳು ಗಂಟೆಯ ಹೊತ್ತಿಗೆ ಶಾಲೆಯ ಮುಂದಿನ ಬಯಲಿಗೆ ಬಂದು, ಶಂಖವನ್ನು ಊದಿದ. ಶಿಷ್ಯರೆಲ್ಲರೂ ಮನೆಗಳಿಂದ ಧೌಡೋಡಿ ಬಂದರು. ಬಂದು ಪೂಜಾರಪ್ಪನ ಕಾಲಿಗೆ ನಮಸ್ಕಾರಮಾಡಿ ಸುತ್ತಲೂ ನಿಂತರು.

ಪೂಜಾರಪ್ಪನು ಎರಡನೆಯ ಬಾರಿ ಶಂಖವನ್ನು ಊದಿದ. ಬೇರೆ ತರಹ ದನಿಯು ಹೊರಬಿತ್ತು.

ಆನೆಯ ಘೀತ್ಕಾರ, ಗೂಬೆಯ ಗುಗ್ಗೂ, ಹಾವಿನ ಬುಸ್‌ಬುಸ್, ಬೆಕ್ಕಿನ ಮಿಂಯ್ಯಾವ್, ನಾಯಿಯ ಬೊಗಳು, ಹುಲಿಯ ಘರ್ಜನೆ, ನವಿಲಿನ ಕೇಕೆ, ಪ್ರೇತದ ಕೂಗು ಎಲ್ಲವೂ ಒಂದೊಂದಾಗಿ ಕೇಳಿಸಿತು. ಹಳ್ಳಿಯವರೆಲ್ಲರೂ ಓಡೋಡಿ ಬಯಲ ಬಳಿಗೆ ಬಂದರು. ಶಿಷ್ಯರು, ಒಬ್ಬೊಬ್ಬರಾಗಿ, ಒಂದೊಂದು ಪ್ರಾಣಿಯ ಕೂಗನ್ನೂ, ಪ್ರೇತದ ಕರ್ಕಶ ದನಿಯನ್ನೂ ಅನುಕರಿಸಿ, ಕೂಗು ಹಾಕಿದ್ದರು. ಬೆರಳುಗಳನ್ನು ಬಾಯಿಗಿಟ್ಟುಕೊಂಡು ಈ ರೀತಿ ಶಬ್ದ ಬರುವಂತೆ ಮಾಡಿದ್ದನ್ನು ಹಳ್ಳಿಯವರು ನೋಡಿ ಎಲ ಎಲಾ ಎಂದಚ್ಚರಿಪಟ್ಟರು.

ಅಜ್ಜೋಜಿಯೂ, ಖಂಡೋಜಿಯೂ, ಪೂಜಾರಪ್ಪನ ಎರಡೂ ಪಕ್ಕಗಳಲ್ಲಿ ನಿಂತರು.

ಶಿಷ್ಯರು ಒಬ್ಬೊಬ್ಬರಾಗಿ ಪ್ರದರ್ಶನವನ್ನೀಯಲು ಆರಂಭಿಸಿದರು. ಉದ್ದಾನೆ ಕೋಲನ್ನು ಹಿಡಿದುಕೊಂಡು ಓಡೋಡಿ ಬಂದ ಮೊದಲನೆಯವನು ಶಾಲೆಯ ಹತ್ತಡಿ ಎತ್ತರದ ಗೋಡೆಯ ಬಳಿ ಕೋಲನ್ನು ಊರೆ ಕೊಟ್ಟುಕೊಂಡು ಝೋಕು ಹೊಡೆದು, ಛಂಗಿ, ಶಾಲೆಯ ಸೂರನ್ನು ಸೇರಿ ಕೈಜೋಡಿಸಿದ.

ಎರಡನೆಯವನು ಶಾಲೆಯ ಪಕ್ಕಕ್ಕೆ ಹೋಗಿ, ಎರಡೂ ಕೊಂಕುಳಲ್ಲಿ ಎರಡು ಹೋತಗಳನ್ನು ಸಿಕ್ಕಿಸಿಕೊಂಡು ಒಂದು ಸುತ್ತು ಧೌಡೋಡಿ ಬಂದು ಹೋತಗಳೆರಡನ್ನೂ ಪೂಜಾರಪ್ಪನ ಬಳಿ ಇರಿಸಿದ. ಖಂಡೋಜಿಯು ಅವುಗಳನ್ನೆತ್ತಿ "ಎಲಎಲಾ ಒಂದೊಂದು ಹೋತವೂ ಸುಮಾರು ಮೂರು ಮಣ ತೂಕವಿದೆಯಲ್ಲಾ" ಎಂದು ಉದ್ಗಾರ ತೆಗೆದ.

ಮೂರನೆಯವನು ಎರಡೂ ಅಂಗೈಗಳ ಮೇಲೆಯೇ ತಲೆಕೆಳಕಾಗಿ ನಿಂತು ಒಂದು ಸುತ್ತು ಓಡಿದ.

ಎರಡೂ ಕಾಲುಗಳನ್ನೂ ಕಟ್ಟಿಕೊಂಡೇ ಬೇಗಬೇಗ ಚಂಗುತ್ತಾ ಮತ್ತೊಬ್ಬ ಒಂದು ಸುತ್ತು ಹೊಡೆದ.

ಊರೆಗೋಲು ಹಿಡಿದು ಓಡಿದವನಿಗೆ ಮೊದಲ ಬಹುಮಾನ ದೊರಕಿತು.

ಪ್ರೇತದ ಕೂಗು ಹಾಕಿದವನಿಗೆ ಎರಡನೆಯ ಬಹುಮಾನ ದೊರಕಿತು.

ಸಂಜೆ ಪೂಜೆಯ ಹೊತ್ತಿಗೆ ಶಾಲೆಯ ಎದುರಿನ ಬಯಲಿನಲ್ಲಿ ಜನರೆಲ್ಲರೂ ಸೇರಿದ್ದಾರೆ. ಬೈರಾಗಿಯ ತಂಡವೊಂದು ಆಲದಮರದ ಕಡೆಯಿಂದ ಬಂದು ಬಯಲಿನಲ್ಲಿ ನಿಂತಿತು.

ಪೂಜಾರಪ್ಪನು ಅವರನ್ನು ಜಗುಲಿಯ ಮೇಲೆ ಕುಳ್ಳಿರಿಸಿ, ತಿನ್ನಲು ಹಣ್ಣುಗಳನ್ನಿತ್ತು, ಹಳ್ಳಿಯವರು ತಂದಿದ್ದ ತಿಂಡಿ ಪದಾರ್ಥಗಳನ್ನು ಅವರಿಗೆ ಕೊಟ್ಟ ಮೇಲೆ, ಅವರಿಗೆಲ್ಲಾ ಕೈಮುಗಿದು, "ಎಲ್ಲವನ್ನೂ ಬಿಟ್ಟು ವಿರಾಗಿಗಳಾಗಿದ್ದೀರಿ. ಆದರೆ ನಾಡಿನಲ್ಲೆಲ್ಲಾ ಅಧರ್ಮ, ಸ್ವಾರ್ಥತೆ ಹೆಚ್ಚಾಗಿದೆ. ನೀವು ಹೋದಲ್ಲೆಲ್ಲಾ ಧರ್ಮಬೋಧನೆಯನ್ನು ಆದಷ್ಟು ಜನರಿಗೆ ಮಾಡಿದರೆ ಚೆನ್ನ ಎಂದು ನಮ್ಮ ಹಳ್ಳಿಯವರಿಗನ್ನಿಸಿದೆ. ಹಾಗೆ ಮಾಡುವಿರೆಂದೂ ನಂಬಿಕೆ ಇದೆ. ಆ ಮಹಾಕಾರ್ಯದಲ್ಲಿ ನಮ್ಮ ಅಳಿಲ ಸೇವೆಯೂ ಇರಲಿ ಎಂದು ಈ ಕಾಣಿಕೆಯನ್ನು ನಿಮಗೆ ಅರ್ಪಿಸುತ್ತೇವೆ. ಸ್ವೀಕರಿಸಿ, ನಮ್ಮನ್ನೂ ಹುಡುಗರನ್ನೂ ಹರಸಬೇಕು" ಎಂದು ಕೇಳಿಕೊಂಡನು. ಬೈರಾಗಿಯ ಮುಖಂಡನಿಗೆ ತನ್ನ ಬಲಗೈಯಲ್ಲಿದ್ದ ಸಂಚಿಯನ್ನೂ ಅರ್ಪಿಸಿದನು. ಎತ್ತಿದ ಕೈಗಳಿಂದ ಬೈರಾಗಿಗಳು ಹಳ್ಳಿಯವರನ್ನೂ, ಹುಡುಗರನ್ನೂ, ಆಶೀರ್ವದಿಸಿ, "ಜಯ್ ಶಂಕರ!" ಎಂದು ಒಕ್ಕೊರಲಿನ ಕೂಗುಹಾಕಿ, ನಡೆದರು.

ಎಲ್ಲರೂ ತಂತಮ್ಮ ಮನೆಗಳಿಗೆ ಹೋದರು. ಶಿಷ್ಯರೊಂದಿಗೆ ಪೂಜಾರಪ್ಪನೂ ಆಲದಮರದೆಡೆಗೆ ಹೋದನು.

* * * *

ಆಶ್ವಯುಜ ಶುದ್ಧಪಾಡ್ಯದ ಬೆಳಿಗ್ಗೆ, ಶಿಷ್ಯರೊಂದಿಗೆ ಪೂಜಾರಪ್ಪನು ಶಾಲೆಯೆದುರಿನ ಬಯಲಿನಲ್ಲಿ ನಿಂತು ಶಂಖವನ್ನೂದಿದನು.

ಬುಡುಬುಡುಕೆ, ತಮಟೆ, ಜಾಗಟೆ. ಮದ್ದಲೆ, ತಾಳ, ಮೊದಲಾದ ವಾದ್ಯಗಳೊಂದೊಂದನ್ನೂ ಒಬ್ಬೊಬ್ಬ ಶಿಷ್ಯನು ಬಾರಿಸಿದನು.

ಹಳ್ಳಿಯವರೆಲ್ಲಾ ಬಯಲಿನ ಬಳಿಗೆ ಬಂದು ಸೇರಿದರು.

ಶಿಷ್ಯರೆಲ್ಲರೂ ಶಾಲೆಯ ಹಿಂದುಗಡೆಗೆ ಹೋದರು. ಅಲ್ಲಿ ವೇಷ ಬದಲಾಯಿಸಿಕೊಂಡು, ಒಬ್ಬೊಬ್ಬರಾಗಿ ಬಯಲಿಗೆ ಬಂದು, ತಮ್ಮ ಪ್ರದರ್ಶನಕ್ಕೆ ಆರಂಭಿಸಿದರು. ಅಚ್ಚೋಜಿಯೂ, ಖಂಡೋಜಿಯೂ, ಪೂಜಾರಪ್ಪನ ಬಳಿ ನಿಂತರು.

ಮೊದಲು ಬಂದು ಪ್ರದರ್ಶಿಸಿದವನು ಕಲಾಯಿ ಮಾಡುವ ರೀತಿಯನ್ನು



ಪ್ರದರ್ಶಿಸಿದನು. ಎಷ್ಟು ಲಕ್ಷಣವಾಗಿ, ಅದೆಷ್ಟು ಬೇಗ ಮೂರು ಕೊಳದಪ್ಪಲೆಗಳಿಗೆ ಕಲಾಯಿ ಹಚ್ಚಿದ ಅಂತೀರಿ? ನೆರೆದಿದ್ದ ಹೆಂಗಸರು, ಮನೆಯಿಂದ ನಾವೂ ಪಾತ್ರೆಗಳನ್ನು ತಂದಿದ್ದರೆ ಚೆನ್ನಾಗಿತ್ತು ಅಂತ ಅನ್ನೋಹಾಗೆ ಆಯಿತು.

ಎರಡನೆಯ ಪ್ರದರ್ಶನವಿತ್ತವನು ಎತ್ತು, ಕುದುರೆಗಳಿಗೆ ಲಾಳ ಕಟ್ಟುವ ಕಸುಬನ್ನು ಕಲಿತಿದ್ದನು. ಎಷ್ಟು ಸುಲಭವಾಗಿ ತಾನು ಕಲಿತಿದ್ದ ಕಸುಬನ್ನು ಪ್ರದರ್ಶಿಸಿದ ಅಂತೀರಿ! ಕಡೆಗೆ ಏನು ಮಾಡಿದ ಅಂತೀರಿ? ದವಸ ಧಾನ್ಯಗಳನ್ನು ಊರಿಂದ ಊರಿಗೆ ಸಾಗಿಸುವ ಬೈಂಜಾರಿಗಳು ಹೇಸರಕತ್ತೆಗಳನ್ನಿಟ್ಟುಕೊಂಡಿರ್ತಾರೆ ನೋಡಿ, ಅಂತಹ ಹೇಸರಕತ್ತೆಯೊಂದನ್ನು ಬಯಲಿಗೆ ತಂದ. ವೀರಮಂಡಿ ಹಾಕಿ ಕುಳಿತು, ಹೇಸರಕತ್ತೆಯ (ಕಾಲನ್ನು ಕಟ್ಟಿಹಾಕದೇ) ಹಿಂಗಾಲನ್ನು ಮೆಲ್ಲಗೆ ಬಗ್ಗಿಸಿ ತನ್ನ ಮಂಡಿಯ ಮೇಲೇರಿಸಿಕೊಂಡು ಲಾಳ ಕಟ್ಟಿದ.

ಮೂರನೆಯ ಶಿಷ್ಯನು ಬಂದ. ಬೀಗ, ಕೊಡೆ, ರಿಪೇರಿಮಾಡುವ ಕಸುಬನ್ನು ಅವ ಪ್ರದರ್ಶಿಸಲು ತೊಡಗಿದ. "ಶಾಲೆಯ ಬಾಗಿಲಿಗೆ ಬೀಗ ಹಾಕಿದೆ. ಸುಲ್ತಾನರ ಕಾಲದಲ್ಲಿ ಖಜಾನೆಗೆ ಹಾಕುವ ಬೀಗವನ್ನೇ ಹಾಕಿದೆ. ಅದನ್ನು ತೆಗಿ ನೋಡೋಣ" ಎಂದು ಪೂಜಾರಪ್ಪನು ಆ ಶಿಷ್ಯನಿಗೆ ಹೇಳಿದ. ಛತ್ರಿ ಕಡ್ಡಿಯನ್ನು ಹಿಡಿದುಕೊಂಡು "ಜಯ ಭೈರವಿ" ಎನ್ನುವಷ್ಟು ಹೊತ್ತಿನಲ್ಲಿ ಅವ ಬೀಗವನ್ನು ಬಿಡಿಸಿಟ್ಟ.

ಆ ವೇಳೆಗೆ ನಾಲ್ಕನೆಯ ಶಿಷ್ಯ ಬಂದ. ಸೊಟ್ಟ ಅಲುಗಿನ ಕತ್ತರಿಯೊಂದನ್ನು ಹಿಡಿದು ಬಂದಿದ್ದ. "ಇಷ್ಟು ದೊಡ್ಡದಾದ ವಕ್ರವಾದ ಕತ್ತರೀಲಿ ಅದೇನುತಾನೆ ಕತ್ತರಿಸುಕ್ಕೆ ಆಗುತ್ತೆ?" ಎಂದು ಖಂಡೋಜಿ ಕೇಳಿದ.

"ಗೋಡೇನೇ ಬೇಕಾರೂ ಕತ್ತರಿಸ್ತೀನಿ" ಎಂದ ಆ ಯುವಕ. ತೆರೆದ ಬಾಗಿಲ ಶಾಲೆಯ ಕೊಠಡಿಯೊಂದಕ್ಕೆ ಅವನನ್ನು ಕರೆದುಕೊಂಡು ಪೂಜಾರಪ್ಪನೂ ಅಚ್ಚೋಜಿಯೂ ಹೋದರು. ಅಲ್ಲಿ ಅವನನ್ನು ಕೂಡಿಟ್ಟು, ಗೋಡೆ ಕತ್ತರಿಸಿಕೊಂಡು ಹೊರಕ್ಕೆ ಬಾ ಎಂದು ಹೇಳಿ, ಹೊರಗೆ ಬಂದರು.

ತುಸು ಹೊತ್ತಿನಲ್ಲಿ ಗೋಡೆಯಲ್ಲಿ ಕನ್ನ ಬಿತ್ತು. ಮಣ್ಣಿನ ಹಂಟೆಗಳೂ, ಇಟ್ಟಿಗೆಗಳೂ ಅದೆಷ್ಟು ವಾರಣವಾಗಿ ಕೊಠಡಿಯೊಳಕ್ಕೇ ಬಿತ್ತು ಅಂತೀರಿ? ಸದ್ದೇ ಕೇಳಿಸಲಿಲ್ಲ. ಕನ್ನದೊಳಗಿಂದ ಹೊರಕ್ಕೆ ಬಂದು, ಪೂಜಾರಪ್ಪನಿಗೆ ಅಡ್ಡಬಿದ್ದ ಆ ಶಿಷ್ಯ.

ಐದನೆಯವ ಬಂದು ಚಿನ್ನ ಬೆಳ್ಳಿ ಕೆಲಸದ ಪ್ರದರ್ಶನವನ್ನಿತ್ತ. ಬೆಳ್ಳಿಯ ಕಾಲುಬಳೆಗೆ ಎಲ್ಲರೆದುರಿನಲ್ಲೂ ಬಲುಬೇಗ ಚಿನ್ನದ ಮುಲಾಮು ಹಚ್ಚಿ ಥಳಥಳ ಹೊಳೆಯುವಂತೆ ಮಾಡಿಟ್ಟ.

ಇದೇರೀತಿ ಇನ್ನೂ ಹಲವಾರು ಕಸುಬುಗಳನ್ನು ಕಲಿತವರು ಪ್ರದರ್ಶನಗಳನ್ನಿತ್ತರು.

ಅಚ್ಚೋಜಿರಾಯ ಲಾಳ ಕಟ್ಟಿದವನಿಗೆ ಮೊದಲ ಬಹುಮಾನವನ್ನೂ, ಕನ್ನಗತ್ತರಿಯವನಿಗೆ, ಎರಡನೆಯ ಬಹುಮಾನವನ್ನೂ ಕೊಡಬಹುದೆಂದು ಸೂಚಿಸಿದಾಗ, ಉಳಿದವರು ಒಪ್ಪಿದರು.

ಆ ದಿನ ಸಂಜೆಯ ಹೊತ್ತಿಗೆ ಗೊಂದಲ ಹಾಕುವವರ ತಂಡವೊಂದು ಬಂದಿತ್ತು. "ಮಹಾಸಾಧ್ವಿ ಮುಕ್ತಾಬಾಯಿಯವರ ಜಯಂತಿಯ ಸಲುವಾಗಿ ಗೊಂದಲ ಹಾಕುವವರು ಬಂದಿದ್ದಾರೆ" ಎಂದು ಪೂಜಾರಪ್ಪನು ಅವರುಗಳನ್ನು ಹಳ್ಳಿಯವರಿಗೆ ಪರಿಚಯ ಮಾಡಿಕೊಟ್ಟನು.

ಗೊಂದಲ ಹಾಕಿದ ಮೇಲೆ, ಪೂಜಾರಪ್ಪನು ಕಾಣಿಕೆಯನ್ನು ಅವರಿಗಿತ್ತು "ನೀವು ಹೋದ ಹೋದಲೆಲ್ಲಾ ಜನರಲ್ಲಿ ದೈವಭಕ್ತಿ ಬರುವಂತೆ, ಧರ್ಮಜೀವನ ನಡೆಸುವಂತೆ, ಸ್ವಾರ್ಥದ ಅಮಲು ಕಳೆಯುವಂತೆ, ಬೋಧಪ್ರಚಾರ ಮಾಡುತ್ತಿದ್ದೀರಿ. ನಿಮ್ಮ ಕಾರ್ಯದಲ್ಲಿ ನಮ್ಮದೊಂದು ಪಾತ್ರವೂ ಇರಲೆಂದು ಈ ಕಾಣಿಕೆಯನ್ನು ಹಳ್ಳಿಯವರ ಪರವಾಗಿ ಅರ್ಪಿಸುತ್ತಿದ್ದೇನೆ. ಸ್ವೀಕರಿಸಿ; ನಮ್ಮ ಹುಡುಗರನ್ನು ಹರಸಿ" ಎಂದು ಬೇಡಿಕೊಂಡನು. ಮಂಡಿಯೂರಿ ಶಿಷ್ಯರೆಲ್ಲರೂ ಗೊಂದಲ ಹಾಕಿದವರ ಬಳಿ ತಲೆತಗ್ಗಿಸಿ ಆಶೀರ್ವಾದ ಪಡೆದರು.

* * * *

ಬಿದಿಗೆಯ ದಿನ ಬೆಳಿಗ್ಗೆ ಪೂಜಾರಪ್ಪನು ಶಂಖವನ್ನು ಬಾರಿಸಿದ ಕೂಡಲೆ ಹಳ್ಳಿಯವರೆಲ್ಲಾ ಬಂದುಬಿಟ್ಟರು.

ಖಂಡೋಜಿಯ ಎದುರಿಗೆ ಶಿಷ್ಯರೆಲ್ಲರೂ ಬಂದು ವಂದಿಸಿದರು. "ಈ ದಿನ ಏನು ಪ್ರದರ್ಶನ ಮಾಡ್ತೀರಿ?" ಎಂದು ಖಂಡೋಜಿ ಕೇಳಿದ.

"ಈ ದಿನ ನಾವೇನೂ ಮಾಡುವುದಿಲ್ಲ. ನೀವೇನು ಮಾಡಿದರೂ ತಡಕೋತೀವಿ" ಎಂದು ಶಿಷ್ಯರು ಹೇಳಿದರು.

"ಅದೆಷ್ಟು ಧೈರ್ಯ! ನಿಮಗೆ. ಏನು ಮಾಡಿದರೂ ತಡಕೋತೀರಾ?" ಎಂದ ಅಚ್ಚೋಜಿ.

"ಹ್ಞೂ" ಅಂದರು ಶಿಷ್ಯರೆಲ್ಲಾ.

"ಹಾಗಾದ್ರೆ ಕೋದಂಡ ಹಾಕ್ತೀನಿ. ಒಂದೊಂದಾಗಿ ಕೂದಲುಗಳನ್ನು ಚಿಮಟದಿಂದ ಕೀಳ್ತೀನಿ-ಅರ್ಧಗಂಟೆ ಕಚಗುಳಿ ಇಡ್ತೀನಿ. ಪಾಪಾಸ್‌ಕಳ್ಳಿಯ ಮೇಲೆ ನಡೀ ಅಂತೀನಿ, ಸುಟ್ಟ ನೆಲದ ಮೇಲೆ ಕಾಲಿಡಿ ಅಂತೀನಿ" ಎಂದ.

"ಅಚ್ಚೋಜಿ, ಏನು ಬೇಕಾರೂ ಮಾಡ್ಸಿ-ಬರೀ ಮಾತ್ಯಾಕೆ" ಎಂದ ಪೂಜಾರಪ್ಪ.

ತಾನು ಹೇಳಿದ್ದುದೆಲ್ಲವನ್ನೂ ಅಚ್ಚೋಜಿಯು ಮಾಡಿಸಿಯೇಬಿಟ್ಟ. ಒಂದೊಂದನ್ನೂ ಒಬ್ಬಿಬ್ಬರ ಕೈಲಿ ಮಾಡಿಸಿದಾಗ, ಸುತ್ತ ನಿಂತಿದ್ದ ಹಳ್ಳಿಯ ಹೆಂಗಸರು, ಮಕ್ಕಳು, ಅಯ್ಯಯ್ಯೋ ಎಂದು ಕೊರಗಿದರು. ಕಣ್ಣೀರಿಟ್ಟರು. ಗಂಡಸರೂ ಕೂಡ ತಾವೇ ನೋವು ತಿಂದವರಂತೆ, ಮುಖಗಳನ್ನು ವಕ್ರವಾಗಿ ಶಿಂಡರಿಸಿಕೊಂಡರು.

ಆದರೆ ಶಿಷ್ಯರೊಬ್ಬರಾದರೂ 'ಕಮಕ್ ಕಿಮಕ್' ಅನ್ನಬೇಕಲ್ಲ! ಅವರ ಮುಖಗಳ ಮೇಲೆ ನೋವಿನ ಛಾಯೆ ಕಾಣಿಸಬೇಕಲ್ಲ! ಅಂಗಾಲಿಗೆ ಯಾವುದೋ ಸೊಪ್ಪಿನ ರಸವನ್ನು



ಬಳಿದುಕೊಂಡು ಪಾಪಾಸ್‌ಕಳ್ಳಿಯ ಮೇಲೆ ನಡೆದವನು, ತೀರ್ಪುಗಾರರೆದುರಿಗೆ ನಿಂತು ಒಂದು ವರಸೆ ಮಾರಿ ಕುಣಿತವನ್ನು ಕುಣಿದ.

ಕಣ್ಣುಮುಚ್ಚಿ ಯಾವುದೋ ಪ್ರಾರ್ಥನೆಯನ್ನು ಮಾಡಿ, ನಂತರ ಸುಟ್ಟ ನೆಲದ ಮೇಲೆ ನಡೆದವನು, ಎರಡನೆ ವರಸೆ ಮಾರೀಕುಣಿತವನ್ನು ಕುಣಿದ. ಖಂಡೋಜಿಯು ಸ್ವಲ್ಪ ನೀರನ್ನು ತರಿಸಿ ಸುಟ್ಟ ನೆಲದ ಮೇಲೆ ಚೆಲ್ಲಿದಾಗ, ಛುಂಯ್ ಎಂದು ನೀರು ಆವಿಯಾಗುವ ಶಬ್ದ ಎಲ್ಲರಿಗೂ ಕೇಳಿಸಿತು. ನೆಲದ ಮೇಲಿಂದ ಆವಿ ಅಲೆಯಲೆಯಾಗಿ ಎದ್ದಿತು.

ಕೋದಂಡ ಹಾಕಿಸಿಕೊಂಡವನು, ಇಳಿಸಿದ ನಂತರ, ನಾಲ್ಕು ಸೂರ್ಯ ನಮಸ್ಕಾರಗಳನ್ನು ಸಾಷ್ಟಾಂಗವಾಗಿ ಹಾಕಿದ.

ತೀರ್ಪನ್ನು ಕೊಡಿ ಎಂದು ಅಚ್ಚೋಜಿಯ ಕಡೆಗೆ ಪೂಜಾರಪ್ಪನು ತಿರುಗಿದಾಗ, ಅವನು ಕಟ್ಟುಬೆವರು ಸುರಿಸುತ್ತಿದ್ದ. ಖಂಡೋಜಿಯ ಕಡೆ ತಿರುಗಿದಾಗ ಅವ ಬಿಳುಪೇರಿ ಛೌಳಿ ಬಂದು ಬೀಳುವವನಂತಿದ್ದ.

ಮೊದಲ ಬಹುಮಾನವು ಕೋದಂಡ ಹಾಕಿಸಿಕೊಂಡವನಿಗೂ, ಪಾಪಾಸ್‌ಕಳ್ಳಿಯ ಮೇಲೆ ನಡೆದವನಿಗೆ ಎರಡನೆಯ ಬಹುಮಾನವೂ ದೊರಕಿತು.

ಆ ಸಂಜೆಯ ಪೂಜೆಗೆ, ಮೂವರು ಜೋಗಿಗಳು ಬಂದಿದ್ದರು. ಹಳ್ಳಿಯವರ ಪರವಾಗಿ ಪೂಜಾರಪ್ಪನು ಕಾಣಿಕೆಯನ್ನರ್ಪಿಸಿದನು. ಮಂಡಿಯೂರಿ ತಲೆ ಬಾಗಿಸಿದ್ದ ಹದಿನಾರೂ ಶಿಷ್ಯರನ್ನು ಹರಸಿದ ಮೇಲೆ ಜೋಗಿಯ ಮುಖಂಡನು, "ನಾವು ಹೋದಲ್ಲೆಲ್ಲಾ ಧರ್ಮಜೀವನದ ಸುಖಸಂತೃಪ್ತಿಗಳನ್ನೇ ವಿವರಿಸುತ್ತೇವೆ. ನಿಸ್ವಾರ್ಥತೆಯಿಂದ ಉಂಟಾಗುವ ಆನಂದವನ್ನೂ ತಿಳಿಸುತ್ತೇವೆ. ಇದನ್ನೇ ಮಾಡಿ ಎಂದು ನೀವು ಕೈತುಂಬಾ ಕಾಣಿಕೆಯನ್ನಿತ್ತಿದ್ದೀರಿ! ಎಲ್ಲವನ್ನೂ ಬಿಟ್ಟ ನಮಗೆ ಕಾಣಿಕೆಯಿಂದ ಏನಾಗಬೇಕು? ಆದರೂ ನರಳುವವರಿಗೆ ಅದನ್ನು ವಿನಿಯೋಗಿಸಿ. ಯಾರು ಕೈಬಿಟ್ಟರೂ ಭಗವಂತ ನೆರವಾಗುತ್ತಾನೆ ಎಂದು ನಿದರ್ಶಿಸುತ್ತೇವೆ" ಎಂದು ಹೇಳಿ ಹೊರಟುಹೋದರು.

* * * *

ನವರಾತ್ರಿಯ ತದಿಗೆಯ ದಿನ. ಶಾಲೆಯ ಎದುರಿನ ಬಯಲಲ್ಲಿ ಪೂಜಾರಪ್ಪನು ಏಳುಗಂಟೆಯ ಹೊತ್ತಿಗೆ ಸಿದ್ಧವಾಗಿದ್ದ. ಹಳ್ಳಿಯ ಜನರೆಲ್ಲರೂ ಬಂದು ನೆರೆದಿದ್ದರು.

ಶಿಷ್ಯನೊಬ್ಬನು ಬಂದು, ಹಾವನ್ನು ಹಿಡಿಯುವ ಬಗೆ, ನಾಗರಹಾವಿನ ವಿಷದ ಹಲ್ಲನ್ನು ಕೀಳುವ ರೀತಿ, ಅವನ್ನು ಒಲಿಸಿಕೊಳ್ಳುವ ವಿಧಾನ, ಆಕಸ್ಮಿಕವಾದರೆ ಯಾವ ಸೊಪ್ಪಿನ ರಸವನ್ನು ಉಪಯೋಗಿಸುವುದು, ಯಾವ ಮಣಿಯನ್ನಿಟ್ಟು ನಾಗದಾಳಿ ರಸವನ್ನು ಹಚ್ಚುವುದು ಎಲ್ಲವನ್ನೂ ಪ್ರದರ್ಶಿಸಿದ.

ಮತ್ತೊಬ್ಬ ಶಿಷ್ಯನು ಬಂದು, ಗಡವಾ ಕೋತಿಯನ್ನು ಯಾವ ರೀತಿ ಒಲಿಸಿಕೊಂಡಿದ್ದಾನೆಂಬುದನ್ನು ಪ್ರದರ್ಶಿಸಿದ. ಕಿಚಿಕಿಚಿ ಭಾಷೆಯಲ್ಲಿ ಅದಕ್ಕೆ ಏನನ್ನೋ

ಹೇಳಿದ. ನೇರನೆ ಅಚ್ಯೋಜಿಯ ಬಳಿಗೆ ಗಡವಾ ಕೋತಿಯು ಹೋಗಿ ಅವರ ಕಾಲ್ಗೆ ತಲೆತಾಕಿಸಿ ಹಿಂದಿರುಗಿ ಬಂತು. ತಿರುಗಿ ಇನ್ನೇನನ್ನೋ ಹೇಳಿದ. ಖಂಡೋಜಿಯ ಬಳಿಗೆ ಹೋಗಿ ಎರಡು ಸಾರಿ ಲಾಗಹಾಕಿ ಹಿಂದಿರುಗಿತು. ಮೂರನೆಯಸಾರಿ ಇನ್ನೇನನ್ನೋ ಹೇಳಿದ. ಪೂಜಾರಪ್ಪನ ಬಳಿ ಹೋಗಿ, ಮೂರು ಪ್ರದಕ್ಷಿಣೆ ಮಾಡಿ, ಕಾಲಬಳಿ ಮಲಗಿತು.

ನಾಯಿ ಆಡಿಸಿದ ಶಿಷ್ಯನನಕ, ಎಲ್ಲರ ಕಣ್ಣುಗಳನ್ನೂ ಸೆಳೆದ. ಪೂಜಾರಪ್ಪನ ಬಳಿ ಹೋಗಿ ಕರವಸ್ತ್ರವನ್ನು ತೆಗೆದುಕೊಂಡು, ಶಿಷ್ಯನು ಸುತ್ತು ನಿಂತಿದ್ದ ಹಳ್ಳಿಯವರಲ್ಲೊಬ್ಬನ ಕೈಗೆ ಕೊಟ್ಟು ಸೊಂಟಕ್ಕೆ ಸಿಕ್ಕಿಸಿಕೊಳ್ಳಲು ಹೇಳಿದ. ನಂತರ ಶಾಲೆಯಿಂದ ನಾಯೊಂದನ್ನು ಶಿಲ್ಲುಹಾಕಿ ಬರಮಾಡಿಕೊಂಡ. ನಾಯನ್ನು ಪೂಜಾರಪ್ಪನ ಬಳಿಗೆ ಕರೆದುಕೊಂಡು ಹೋಗಿ, ಅದರ ಕಿವಿಯ ಹಿಂದೆ ಬೆರಳಾಡಿಸುತ್ತಾ ಏನನ್ನೋ ಹೇಳಿದ. ನಾಯಿಯು ಅಂಬು ಹೊಡೆದಂತೆ ಹಳ್ಳಿಯವನ ಬಳಿಗೆ ಓಡಿ ಅಲ್ಲಿ ಒಮ್ಮೆ ಬೊಗಳಿತು. ಹಳ್ಳಿಯವ ಬೆದರಿ ಕರವಸ್ತ್ರವನ್ನು ಸೊಂಟದಿಂದ ತೆಗೆದು ಎಸೆದ. ಅದನ್ನು ಕಚ್ಚಿಕೊಂಡು ನಾಯಿಯು ಶಿಷ್ಯನ ಬಳಿ ಬಂದು ಬಾಲವನ್ನಲ್ಲಾಡಿಸುತ್ತ ನಿಂತಿತು.

ಅನಂತರ ಅವನು ಬಟ್ಟೆಯೊಂದನ್ನು ಹಾಸಿದ. ಆ ಸಾಮಾನು ಈ ಸಾಮಾನುಗಳನ್ನು ಅದರ ಮೇಲಿಟ್ಟ. "ಗಂಟು ಕಟ್ಟು ಲಿಂಗಾ! ಬೇಗ ಹೋಗ್ಬೇಕು" ಅಂದ ಶಿಷ್ಯ. ಆ ನಾಯಿ ಏನು ಮಾಡಿತು ಗೊತ್ತೆ. ಬಾಯಿ ಮುಂಗಾಲುಗಳಿಂದ ಬಟ್ಟೆಯ ತುದಿಯನ್ನು ಸಾಮಾನುಗಳ ಮೇಲಕ್ಕೆಳೆದು ಗಂಟು ಕಟ್ಟಿತು. ಗಂಟನ್ನು ಬಾಯಿಯಲ್ಲಿ ಕಚ್ಚಿಕೊಂಡು ಶಿಷ್ಯನ ಬಳಿ ನಿಂತಿತು.

ಕರಡಿ ಕುಣಿಸುವವನೂ, ಕುದುರೆ ಪಳಗಿಸಿದವನೂ, ಗಿಡಗನನ್ನು ತಂದವನೂ, ಹೀಗೆ ಇತರ ಪ್ರಾಣಿಗಳನ್ನು ಹತೋಟಿಗೆ ತಂದಿದ್ದ ಶಿಷ್ಯರು ತಮ್ಮ ಪ್ರದರ್ಶನಗಳನ್ನು ತೋರಿಸಿದರು.

ಕೋತಿಯವನಿಗೆ ಮೊದಲ ಬಹುಮಾನವೂ, ಹಾವಿನವನಿಗೆ ಎರಡನೆಯದೂ ಕೊಡಲ್ಪಟ್ಟಿತು.

ಆ ಸಂಜೆ ಪೂಜೆಯ ವೇಳೆಗೆ ವೈಷ್ಣವ ಪಂಥದ ಸಾಧುಗಳ ತಂಡವೊಂದು ಬಂದಿತು. ಅವರುಗಳಿಗೆ ಶಿಷ್ಯರೆಲ್ಲರೂ ನಮಸ್ಕಾರ ಮಾಡಿ ಆಶೀರ್ವಾದವನ್ನು ಪಡೆದರು. ಪೂಜಾರಪ್ಪನು ಕಾಣಿಕೆಯನ್ನಿತ್ತು ವಂದಿಸಿದಾಗ, "ಶಠಗೋಪ ಮಹಾದೇಶಿಕರ ತಿರುನಕ್ಷತ್ರದ ದಿನವೇ ಇಂತಹ ಭಾರೀ ಕಾಣಿಕೆಯನ್ನು ನೀವು ಕೊಟ್ಟಿದ್ದೀರಿ. ನಮ್ಮ ಧರ್ಮಪ್ರಚಾರ ಕಾರ್ಯದಲ್ಲಿ ಯಶಸ್ಸನ್ನು ಪಡೆಯಬಹುದೆಂದು ನಂಬಿಕೆ ಹುಟ್ಟಿದೆ. ನಿಮ್ಮ ಕೆಲಸದಲ್ಲಿ ಶ್ರೀಮನ್ನಾರಾಯಣನು ಬೆನ್ನ ಹಿಂದೆ ಇರುತ್ತಾನೆ" ಎಂದು ಪಂಥದ ನಾಯಕರು ಹೇಳಿದರು.

* * * *

ಚೌತಿಯ ದಿನ ವೀರಭದ್ರನ ಕೊಳದ ಹತ್ತಿರ ಪೂಜಾರಪ್ಪನು ಬೆಳಿಗ್ಗೆ ಶಂಖವನ್ನು



ಊದಿದನು. ಹಳ್ಳಿಯವರೆಲ್ಲಾ ಆ ವೇಳೆಗೆ ಅಲ್ಲಿ ಸೇರಿದ್ದರು. ಸುಮಾರು ಜನರು ಹಿಂದಿನ ದಿನವೇ ಸುದ್ದಿ ತಿಳಿದಾಗ, ಕೊಳದ ಬಳಿಯಲ್ಲೇ ಮಧ್ಯಾಹ್ನ ಊಟ ಮಾಡೋಣವೆಂದು ಯೋಚಿಸಿ ಬುತ್ತಿಯನ್ನು ಕಟ್ಟಿಕೊಂಡು ಬಂದಿದ್ದರು.

ಮೊದಲು ಕೊಳಕ್ಕೆ ಇಳಿದ ಶಿಷ್ಯನು ಈಜುವ ವಿವಿಧ ರೀತಿಗಳನ್ನು ಪ್ರದರ್ಶಿಸಿದನು. ಎರಡನೆಯವನು ಕೈಕಾಲು ಕಟ್ಟಿಸಿಕೊಂಡು ನೀರಿಗಿಳಿದು ಈಜಿದನು. ಮತ್ತೊಬ್ಬನು ನೀರಿನ ಮೇಲೆ ತೇಲುವುದನ್ನು ಪ್ರದರ್ಶಿಸಿದನು. ನಾಲ್ಕನೆಯವನು ಕೊಳದ ಈ ಕಡೆ ಮುಳುಗಿ, ಮೂರು ನಾಲ್ಕು ನಿಮಿಷಗಳಾದ ಮೇಲೆ ಆ ಅಂಚಿನಲ್ಲಿ ಎದ್ದನು. ನೀರಿನಲ್ಲಿ ಮುಳುಗುತ್ತಿರುವವನನ್ನು ಸಂರಕ್ಷಿಸಿ ದಡಕ್ಕೆ ತಂದು ಬಿಡುವ ವಿಧಾನವನ್ನು ಪ್ರದರ್ಶಿಸಿದರು.

ಬಹುಮಾನ ವಿನಿಯೋಗವಾದ ಮೇಲೆ, ಕೊಳದ ಅಧಿದೇವತೆಗೆ ಪೂಜೆ ಮಾಡಿದರು. ಕಡಲೆ ಉಸಲಿ, ತಂಬಿಟ್ಟಿನ ನೈವೇದ್ಯವನ್ನು ಕೈತುಂಬಾ ಹಂಚಲಾಯಿತು. ಬುತ್ತಿ ತಂದವರೆಲ್ಲಾ ಊಟ ಮಾಡಿ, ಸ್ವಲ್ಪ ಕಾಲ ವಿರಾಮವಾಗಿ ಹರಟೆ ಹೊಡೆಯುತ್ತಿದ್ದರು.

ಆ ಸಂಜೆ ಶಾಲೆಯ ಮುಂದಿನ ಬಯಲಿನ ಸಭೆಗೆ ಸಾತಾನಿ ಸಾಧುಗಳ ತಂಡವೊಂದು ಬಂದಿತ್ತು. ಕಾಣಿಕೆಯಿತ್ತು ಪೂಜಾರಪ್ಪನು ಅವರನ್ನು ಸನ್ಮಾನಿಸಿದನು. ಶಿಷ್ಯರನ್ನೆಲ್ಲಾ ಅವರುಗಳ ಕೈಲಿ ಹರಸಿಸಿದನು.

* * * *

ಪಂಚಮೀ ದಿನದಂದು ಬೆಳಿಗ್ಗೆ ಆರು ಗಂಟೆಯ ಹೊತ್ತಿಗೆ ಸಭೆ ಸೇರಬೇಕೆಂದು ಗೊತ್ತಾಗಿತ್ತು. ಹಳ್ಳಿಯವರೆಲ್ಲ ಬೇಗಬೇಗನೆ ಬಂದಿದ್ದರು.

ಹಾಲಕ್ಕಿಯನ್ನು ಪಂಜರದಲ್ಲಿ ಹಿಡಿದು ಬುಡುಬುಡುಕೆಯವನು ಬಂದು "ನುಡಿಯತ್ತೈತಿ" ಹೇಳುತ್ತಾ ಒಂದು ಸುತ್ತು ತಿರುಗಿದನು.

ದೊಂಬರ ಗುಂಪೊಂದು ಬಂದಿತು. ಒಬ್ಬ ಗಣೆಮರವನ್ನು ಹತ್ತಿ ಹೊಕ್ಕಳ ಮೇಲೆ ತುದಿಯಲ್ಲಿ ಅಡ್ಡಲಾಗಿ ಮಲಗಿ ಚಕ್ರ ತಿರುಗಿದಾಗ, ಸುತ್ತ ನಿಂತಿದ್ದ ಹೆಂಗಸರು ಹೆದರಿಕೆಯಿಂದ ಕಣ್ಣು ಮುಚ್ಚಿಕೊಂಡರು.

ಲಾಗವನ್ನು ಸರಸರ ಹಾಕಿದವನನ್ನು ಕಂಡು, "ಎಲಾ ಇವನಿಗೇನು ಮೂಳೆಗಳೇ ಇಲ್ಲವೊ" ಎಂದು ಜನ ಆಶ್ಚರ್ಯಪಟ್ಟರು.

ಹೆಗಲ ಮೇಲೆ ಅಡ್ಡೆಯನ್ನು ಹೊತ್ತು, ಅಡ್ಡೆಯ ತಟ್ಟೆಗಳಲ್ಲಿ ಬತ್ತಾಸ್ ಕಲ್ಯಾಣಸೇವೆಗಳನ್ನು ಇಟ್ಟುಕೊಂಡು ಮಾರಲು ಬಂದಿದ್ದ ಒಬ್ಬಾತ ಮಕ್ಕಳು ಹೆಂಗಸರಿಗೆ ಸಾಕಷ್ಟು ಮಾರಾಟಮಾಡಿ ಕಿಸೆಯನ್ನು ತುಂಬಿಕೊಂಡನು. ಉತ್ತರ ಹಿಂದೂಸ್ಥಾನದ ಮಿಠಾಯಿವಾಲನ ಮಾತನ್ನು ಬಲು ಚೆನ್ನಾಗಿ ಆಡುತ್ತಿದ್ದನು.

ಪೂಜಾರಪ್ಪನು ಮೂರು ಬಾರಿ ಥಟ್ ಥಟ್ ಅಂತ ಶಬ್ದವನ್ನು ಊದಿದನು.

ಎಲ್ಲರೂ ಬಂದು ಪೂಜಾರಪ್ಪನ ಎದುರಿನಲ್ಲಿ ನಿಂತು ತಮ್ಮ ಉಡುಪುಗಳನ್ನು ಬಿಚ್ಚಿ ಕಾಚಾಧಾರಿಗಳಾಗಿ ನಿಂತರು.

ಎಲ್ಲರೂ ತಮ್ಮೂರ ಹುಡುಗರು ಅಂತ ತಿಳಿದಾಗ, ಪೂಜಾರಪ್ಪನ ಶಿಷ್ಯರೇ ಎಂದು ಗೊತ್ತಾದಾಗ, ಹಳ್ಳಿಯವರೆಲ್ಲರೂ ಚಕಿತರಾದರು.

ದೊಂಬರ ನಾಯಕನಿಗೆ ಮೊದಲ ಬಹುಮಾನವನ್ನು, ಮಿಠಾಯಿವಾಲನಿಗೆ ಎರಡನೆಯ ಬಹುಮಾನವನ್ನೂ ಕೊಡಲಾಯಿತು.

ಆ ದಿನ ಸಂಜೆಯ ಸಭೆಗೆ ವಿಭೂತಿ ಕುಂಕುಮಧಾರಿಯಾದ, ರುದ್ರಾಕ್ಷಿ ಮಾಲಾಂಕಿತರಾದ, ಹಿರಿಯರೊಬ್ಬರು ಬಂದರು.

"ಆಗಮೀಕರೇ ಬಂದಿದ್ದಾರೆ. ನಮ್ಮ ಪುಣ್ಯ!" ಎಂದು ಪೂಜಾರಪ್ಪನು ಶಿಷ್ಯರೆಲ್ಲರೂ ಅವರಿಗೆ ಸಾಷ್ಟಾಂಗ ಬೀಳುವಂತೆ ಹೇಳಿದನು. "ಉಪಾಂಗ ಲಲಿತಾ ಉಪಾಸಕರು! ನಿಮ್ಮ ಹರಕೆಗಳೇನಿದ್ದರೂ ಇವರಿಗೇ ಸಲ್ಲಿಸಬಹುದು" ಎಂದು ಹಳ್ಳಿಯವರಿಗೆ ಹೇಳಿದನು.

ಬಲು ಭಕ್ತಿಯಿಂದ ಪೂಜಾರಪ್ಪನು ಅವರಿಗೆ ಕಾಣಿಕೆ ಇತ್ತು, ತಾನೂ ನಮಸ್ಕಾರ ಮಾಡಿದನು.

"ದೇವಿಯ ಉಪಾಸನೆಯನ್ನು ನಾನು ಮಾಡುವಂತೆ, ನೀನೂ ಮಾಡುತ್ತಿರುವಿ! ನನಗೆ ನಮಸ್ಕಾರ ಮಾಡುಬಹುದೇ?" ಎಂದು ಪೂಜಾರಪ್ಪನನ್ನು ಎಬ್ಬಿಸಿದಾಗ, ಪೂಜಾರಪ್ಪನು "ಹಿರಿಯರು ನೀವು! ನಿಮಗಲ್ಲದೆ ಇನ್ನಾರಿಗೆ ನಮಸ್ಕಾರ ಮಾಡಬೇಕು" ಎಂದನು.

* * * *

ಷಷ್ಠಿಯ ದಿನ ಬೆಳಿಗ್ಗೆ ಪೂಜಾರಪ್ಪನು ಶಂಖವನ್ನು ಊದುವ ಹೊತ್ತಿಗೆ ಸುಮಾರು ಜನರು ಸೇರಿದ್ದರು. ಅಚ್ಚೋಜಿಯು "ಈ ದಿನ ಯಾವ ವಿದ್ಯೆಯನ್ನು ಪ್ರದರ್ಶಿಸುತ್ತಾರೆ" ಎಂದು "ಕಷ್ಟಕಾಲಕ್ಕೆ ಕೈನೆರವಾಗುವ ವಿದ್ಯೆಯನ್ನು ಪ್ರದರ್ಶಿಸುತ್ತಾರೆ" ಎಂದು ನುಡಿದ ಪೂಜಾರಪ್ಪ.

ಮೊದಲು ಬಂದ ಶಿಷ್ಯ ಯಾವುದೋ ಸೊಪ್ಪನ್ನು ಹಿಡಿದು ತಂದಿದ್ದ. ಅಚ್ಚೋಜಿಯ ಹತ್ತಿರ ಬಂದು, "ಈ ಸೊಪ್ಪನ್ನು ಚೆನ್ನಾಗಿ ಅಗಿದು ಉಗಿದುಬಿಡಿ. ಆಮೇಲೆ ಮಾತನಾಡಿ" ಎಂದ. "ವಿಷಗಿಷ ಇರುಲ್ವಲ್ಲಾ! ಕಹಿಯಾಗಿರ್ತದಾ"? ಎಂದು ಕೇಳಿ ಅಚ್ಚೋಜಿಯು ಹತ್ತಾರು ಬಾರಿ ಆ ಸೊಪ್ಪನ್ನು ಅಗಿದು ಉಗಿದ. "ಹೇಗಿದೆ ರುಚಿ?" ಎಂದು ಖಂಡೋಜಿಯು ಕೇಳಿದಾಗ, "ವವವ ವಗಚು ಅಅಅ ಅಷ್ಟೇ! ಆಅ ಆದ್ರೆ ನಾಲಿಗೆ ಯಾಯಾ ಯಾಕೋ ತೊದ್ಲುತ್ತಲ್ಲಾ" ಎಂದುತ್ತರಿಸಿದ. "ಈ ಧೂಳೀನ ಬಾಯಲ್ಲಿಟ್ಟುಕೊಳ್ಳಿ. ಎಲ್ಲಾ ಸರಿಹೋಗುತ್ತೆ" ಎಂದು ಶಿಷ್ಯನು ಹೇಳಿದ.

ಆಮೇಲೆ ಬಂದ ಶಿಷ್ಯ, ಇನ್ನೊಬ್ಬನನ್ನು ಅನಾಮತ್ತು ಬೆನ್ನಮೇಲೆ ಮಲಗಿಸಿಕೊಂಡು



ಬಯಲ ಸುತ್ತಾ ಒಂದು ಪ್ರದಕ್ಷಿಣೆ ಓಡಿದ. "ಜತೆಯವನು ಕಾಲು ಮುರಿದುಕೊಂಡರೆ ಹೀಗೆ ಒಬ್ಬನೇ ನಿಭಾಯಿಸಬಹುದು" ಎಂದು ವಿವರಿಸಿದ, ಖಂಡೋಜಿಗೆ.

ಉಳುಕಿದ ಕಣಕಾಲಿಗೆ ಮಂತ್ರಹಾಕಿ, ಸರಿಮಾಡುವುದು; ಗಾಯವಾದಾಗ ಯಾವ ಹಸಿರು ಕಟ್ಟಿದರೆ ರಕ್ತವು ಬೇಗ ಹೆಪ್ಪುಗಟ್ಟಿ, ಗಾಯ ಮಾಯುತ್ತದೆಂಬುದನ್ನು ಸೀನು ಬಾರದೆ ಇರೋಹಾಗೆ ಸಾಧಿಸುವ ರೀತಿಗಳು ಎಲ್ಲವನ್ನೂ ಒಬ್ಬೊಬ್ಬರಾಗಿ ಪ್ರದರ್ಶಿಸಿದರು.

"ಎಲ್ಲರೂ ಸಮ ಪ್ರದರ್ಶನ ಮಾಡಿದ್ದೀರಿ. ಬಹುಮಾನ ಎಲ್ಲರಿಗೂನೂ" ಎಂದ ಪೂಜಾರಪ್ಪ.

ಆ ಸಂಜೆಯ ಸಭೆಗೆ ದಂಡ, ಕಮಂಡಲು ಹಿಡಿದ ಪುಟ್ಟ ಸನ್ಯಾಸಿಯೊಬ್ಬನು ಆಗಮಿಸಿದ್ದನು. ಪೂಜಾರಪ್ಪನೇ ಆತನ ಪಾದಪೂಜೆ ಮಾಡಿ, ಕಾಣಿಕೆಯನ್ನರ್ಪಿಸಿದನು. ಯುವಕರನ್ನು ಹರಸಿದ ಮೇಲೆ ಸನ್ಯಾಸಿಯು ಮುಂದೆ ನಡೆದನು.

ಸಪ್ತಮಿಯ ಬೆಳಿಗ್ಗೆ ಸಭೆ ಸೇರಿದಾಗ, ಪೂಜಾರಪ್ಪನು ಶಾಲೆಯ ಜಗುಲಿಯ ಮೇಲೆ ಇಟ್ಟಿದ್ದ ಪುಸ್ತಕಗಳ ಬಳಿ ನಿಂತಿದ್ದನು. ಪುಸ್ತಕಗಳ ಮುಂದೆ ಏಕನಾದ, ಕಿನ್ನರಿಗಳನ್ನಿರಿಸಿದ್ದರು. ಎರಡೂ ಪಕ್ಕಗಳಲ್ಲಿ ಹಣತೆ ಹಚ್ಚಿಟ್ಟಿದ್ದರು.

ಶಾಲೆಯ ಬಲಗಡೆಯಿಂದ ಒಬ್ಬ ಬ್ರಾಹ್ಮಣನು ಬಂದನು. ಪೂಜಾರಪ್ಪನ ಬಳಿ ನಿಂದು ಸುಶ್ರಾವ್ಯವಾಗಿ ವೇದಘೋಷವನ್ನು ಮಾಡಿ, ಎರಡು ಹೂಗಳನ್ನು ಪೂಜೆಮಾಡಿ ನಡೆದನು.

ನಂತರ ಬಂದ ಜಂಗಮಯ್ಯನು ಭಾವನಾ ಪರವಶನಾಗಿ, ಅಣ್ಣನವರ ವಚನಗಳನ್ನು ನುಡಿದು, ತಾನೂ ಎರಡು ಹೂವು ಹಾಕಿ ಹೋದನು.

ತಂಬೂರಿ ಹಿಡಿದು ತಾಳವನ್ನು ಹಾಕುತ್ತಾ ದಾಸರು ನಂತರ ಬಂದರು. ಪುರಂದರದಾಸರ ಹಾಡುಗಳೆರಡನ್ನು ತುಂಬಿದೆದೆಯಿಂದ ಹಾಡಿ, ಹೂವುಗಳಿಂದ ಹೊತ್ತಿಗೆಗಳನ್ನು ಪೂಜಿಸಿ ಹೋದರು.

ಇಬ್ಬರು ಹಳ್ಳಿಯ ಮುದುಕರು ಬಂದು, ದನಿಗೂಡಿಸಿ ಹಳ್ಳಿಯ ಹಾಡುಗಳನ್ನು ಮನನೆಟ್ಟುವಂತೆ ಹಾಡಿದರು. ರಾಗಿ ಬೀಸುವ ಹಾಡನ್ನು ಹೇಳಿದಾಗ ಬಯಲ ಸುತ್ತ ನಿಂತಿದ್ದ ಹೆಂಗಸರೂ ದನಿಗೂಡಿಸಿದರು.

ಪೂಜಾರಪ್ಪನು ಮೂರುಭಾರಿ ಥಟ್ ಥಟ್ ಶಂಖವನ್ನು ಊದಿದಾಗ ಶಾಲಾ ಮಾಸ್ತರು ಬಂದು, ಹಳ್ಳಿಯ ಮಕ್ಕಳ ಕೈಲಿ ಸರಸ್ವತೀ ಪೂಜೆಯನ್ನು ಮಾಡಿಸಿದರು. ಪೂಜಾರಪ್ಪನು ಮಾಸ್ತರಿಗೆ ಉಡುಗೊರೆಯನ್ನಿತ್ತನು.

ನಂತರ ಬ್ರಾಹ್ಮಣ, ಜಂಗಮಯ್ಯ, ದಾಸರು, ಹಳ್ಳಿಯ ಮುದುಕರು ಬಂದು ನಿಂತರು. ಜಂಗಮಯ್ಯನಿಗೆ ಮೊದಲ ಬಹುಮಾನವನ್ನೂ, ಹಳ್ಳಿಯ ಮುದುಕರಿಗೆ ಎರಡನೆಯ ಬಹುಮಾನವನ್ನೂ ಹಂಚಿಕೊಟ್ಟಾಗಲೇ ಹಳ್ಳಿಯವರಿಗೆ ನಮ್ಮೂರ ಹುಡುಗರೇ ವೇಷ ಧರಿಸಿ ಈ ರೀತಿ ಹಾಡಿದ್ದರು ಎಂದು ಗೊತ್ತಾಗಿದ್ದು. "ಏನೆಲ್ಲಾ

ಕಲ್ತವ್ರೆ"! ಎಂದು ಹಳ್ಳಿಯ ಹಿರಿಯ ಮುದುಕಿಯು ಮುಂದೆ ಬಂದು, ಇವರ ಮುಖಗಳನ್ನು ತನ್ನ ಕೈಗಳಿಂದ ನೀವಾಳಿಸಿ ನೆಟಿಗೆ ಮುರಿದುಹೋದಳು.

ಅಂದಿನ ಸಂಜೆಯ ಸಭೆಗೆ ಲಾವಣಿಕಾರರ ತಂಡವೊಂದು ಬಂದಿತ್ತು. ಸರಸ್ವತಿ, ವಿದ್ಯಾರಣ್ಯ, ವಿಜಯನಗರದ ಮೇಲೆ ಕಟ್ಟಿದ ಲಾವಣಿಯೊಂದನ್ನು ಅವರು ಹಾಡಿದಾಗ, ಬಯಲಲ್ಲೆಲ್ಲಾ ಕುಳಿತಿದ್ದ ಹಳ್ಳಿಯವರೆಲ್ಲಾ ಕಿವಿಗೊಟ್ಟು ಭಾವನಾಪರವಶರಾಗಿ ಕುಳಿತಿದ್ದರು.

ಪೂಜಾರಪ್ಪನು ಅವರಿಗೆ ಮರ್ಯಾದೆ ಮಾಡಿದಾಗ, ಹಳ್ಳಿಯವರೆಲ್ಲರೂ ತಮ್ಮ ಕೈಲಾದ ಕಾಣಿಕೆಯನ್ನೂ ಅವರುಗಳಿಗೆ ಕೊಟ್ಟರು.

ಮಾರನೆಯದಿನ ಶಾಲೆಯೆದುರಿನ ಬಯಲಿಗೆ ಬಂದಾಗ ಹಳ್ಳಿಯವರೆಲ್ಲಾ ಮಿಂದು ಬಂದಿದ್ದರು. ದುರ್ಗಾಷ್ಟಮಿಯಲ್ಲವೇ? ಭೈರವಿ ಊರ ದೇವತೆಯಲ್ಲವೇ?

ಪೂಜಾರಪ್ಪನ ಮುಖದ ಮೇಲೆ ಉತ್ಸಾಹ ತುಂಬಿದಂತಿತ್ತು. ಶಂಖವನ್ನೂದಿದಾಗ, ಕಠಾರಿ ಕಚ್ಚೆಯನ್ನು ಹಾಕಿದ, ಸೊಂಟಕ್ಕೆ ರೇಷ್ಮೆ ಪಟ್ಟಿಯನ್ನು ಕಟ್ಟಿದ, ಬಿಚ್ಚುಕತ್ತಿಗಳನ್ನು ಹಿಡಿದಿದ್ದ ಇಬ್ಬರು ಯುವಕರು ಎದುರಿಗೆ ಬಂದು ನಿಂತರು. ಕತ್ತಿಗಳನ್ನು ಪೂಜಾರಪ್ಪನ ಕಾಲಬಳಿ ಇರಿಸಿ ನಮಸ್ಕರಿಸಿ, ಕತ್ತಿಗಳನ್ನು ಪುನಃ ಎತ್ತಿಕೊಂಡು, ಸೆಟೆದು ನಿಂತರು.

ಪೂಜಾರಪ್ಪನು ಕಣ್ಣಸನ್ನೆಮಾಡಿದಾಗ, ಇಬ್ಬರೂ ಕತ್ತಿವರಸೆ ಹಾಕಲು ಪ್ರಾರಂಭಿಸಿದರು. ಅದೇನು ಅವರ ಕೈಚಳಕ ಅಂತೀರಿ! ಕೈಲಿ ಕತ್ತಿ ಇದ್ದದ್ದೇ ಕಾಣಿಸುತ್ತಿದ್ದಿಲ್ಲ. ಮುಂದೆ ತೆಳುವಾದ ಬಟ್ಟೆ ಹಾರಾಡ್ತಾ ಇದ್ದಹಾಗೆ ಕಾಣಿಸ್ತಿತ್ತು. ಪೂಜಾರಪ್ಪನು ಅವರೆದುರಿಗೆ ಎಸೆದ ಮಂತ್ರಾಕ್ಷತೆಯ ಕಾಳುಗಳು ಅವರನ್ನು ತಾಕದೇ ಚದುರಿಸಲ್ಪಟ್ಟವು. ಅಷ್ಟು ಚಮತ್ಕಾರದ ಕತ್ತಿವರಸೆ!

ನಂತರ ದೊಣ್ಣೆಗಳನ್ನು ಹಿಡಿದುಕೊಂಡಿಬ್ಬರು ಬಂದರು. ಪೂಜಾರಪ್ಪನ ಬಳಿ ನಿಂತು, ವಂದಿಸಿ, ಸಂಜ್ಞೆ ಬಂದಾಗ, ದೊಣ್ಣೆವರಸೆಯನ್ನು ಪ್ರದರ್ಶಿಸಿದರು. ಆರಡಿ ದೊಣ್ಣೆಗಳನ್ನು ಮಧ್ಯದಲ್ಲಿ ಹಿಡಿದುಕೊಂಡು ಅಷ್ಟು ಬೇಗ ಬೇಗ ಬೀಸಬಹುದು ಎಂದು ಯಾರೂ ನಂಬಿದ್ದಿಲ್ಲ. ಪೂಜಾರಪ್ಪನು ಎಸೆದ ಹೂಗೊಂಚಲುಗಳೊಂದೂ, ಅವರ ಮುಖದ ಮೇಲೆ ಬೀಳದಂತೆ ಅವರುಗಳು ದೊಣ್ಣೆಗಳನ್ನು ಬೀಸುತ್ತಿದ್ದರು.

ಆಮೇಲೆ ಕವಣೆ ಕಟ್ಟಿ ಗುರಿಯಿಟ್ಟು ಹೊಡೆಯುವ ಪ್ರದರ್ಶನವಾಯ್ತು. ಮಲ್ಲಯುದ್ಧದ ಪ್ರದರ್ಶನ, ಕುಸ್ತಿ ಮೇಲಾಟ, ಎಲ್ಲವೂ ನಡೆದುವು.

ಕತ್ತಿವವಸೆಯವರಿಗೆ ಮೊದಲ ಬಹುಮಾನವನ್ನೂ, ಕವಣೆಕಟ್ಟಿ ಗುರಿಹೊಡೆದವನಿಗೆ ಎರಡನೆಯ ಬಹುಮಾನವನ್ನೂ ಕೊಟ್ಟರು.

ಶಿಷ್ಯಂದಿರೆಲ್ಲರೂ ಪೂಜಾರಪ್ಪನ ಎದುರಿನಲ್ಲಿ ನಿಂತಿದ್ದರು. ಅವರ ಮುಖಗಳನ್ನು ನೋಡಿ ಅದೇನು ತೋಚಿತೋ! ಪೂಜಾರಪ್ಪ ತೆಂಗಿನಕಾಯೊಂದನ್ನು ತೆಗೆದುಕೊಂಡು ಮೇಲಕ್ಕೆಸೆದ. ಸೊಂಟಕ್ಕೆ ಕೈಹಾಕಿ, ಕಿರು ಕಠಾರಿಯನ್ನು ಹೊರಸೆಳೆದು ಬೀಳುತ್ತಿದ್ದ ತೆಂಗಿನಕಾಯಿಯ ಕಡೆಗೆಸೆದ. ಹೋಳುಗಳನ್ನು ಕತ್ತಿಯಲ್ಲಿ ಹಿಡಿಯಿರಿ ಎಂದು ಕೂಗಿದ.



ಬಲಗೈ ಎತ್ತಿ, ತಿರುತಿರುಗುತ್ತಾ ಬೀಳುತ್ತಿದ್ದ ಕಠಾರಿಯನ್ನು ಕೈಯಲ್ಲಿ ಹಿಡಿದ ಕತ್ತಿವರಸೆಯವರು ಬೀಳುತ್ತಿದ್ದ ಎರಡು ಹೋಳುಗಳನ್ನು ಕತ್ತಿಯ ತುದಿಯಲ್ಲಿ ಸಿಕ್ಕಿಸಿ ಹಿಡಿಯಲಾಗಲಿಲ್ಲ.

"ಇನ್ನೂ ನೀವು ಪಳಗಬೇಕು! ಗೊತ್ತಾಯ್ತೆ?" ಎಂದ ಪೂಜಾರಪ್ಪ.

ಸಂಜೆಯ ಸಭೆಗೆ ದುರ್ಗಾಜಯಂತುತ್ಸವದ ಸಲುವಾಗಿ ಶೈವ ಕಾಪಾಲಿಕರು ಕೈವಾರದಿಂದ ಬಂದಿದ್ದರು. ಕಾಣಿಕೆಯನ್ನರ್ಪಿಸಿ, ಶಿಷ್ಯರನ್ನು ಹರಸಿ, ಭೈರವಿ ಗುಡಿಗೆ ಪೂಜಾರಪ್ಪನು ಅವರನ್ನು ಕರೆದುಕೊಂಡು ಹೋದನು.

ಮಹಾನವಮಿಯ ದಿನ ಶಾಲೆಯೆದುರಿನ ಬಯಲಲ್ಲಿ ಜನರೆಲ್ಲರೂ ಸೇರಿದ್ದರು. ಬೆಳಿಗ್ಗೆ ಏಳುಗಂಟೆಯ ಹೊತ್ತಿಗೆ ಆಯುಧಗಳೆಲ್ಲವನ್ನೂ ಜಗುಲಿಯ ಮೇಲಿರಿಸಿದ್ದರು. ಕನ್ನಗತ್ತರಿ, ಕತ್ತಿ, ಕಠಾರಿ, ಲಾಳಕಟ್ಟುವ ಸಾಮಾನು, ಕಲಾಯಿ ವಸ್ತುಗಳು, ದಾಸಯ್ಯನ ಹಣತೆಗಂಬ, ಮಾರಮ್ಮನ ಗುಡಿಯವನ ಚಾವಟೆ, ಮೊದಲಾದುವುಗಳನ್ನೆಲ್ಲಾ ಇರಿಸಿದ್ದರು.

ಪೂಜಾರಪ್ಪನು ಬಂದು ಶಂಖವನ್ನೂದಿದಾಗ, ಸಾಮುದ್ರಿಕಶಾಸ್ತ್ರ ಹೇಳುವನೊಬ್ಬ ಬಂದು, ಕೈನೋಡಿ ಭವಿಷ್ಯ ಹೇಳಲು ಆರಂಭಿಸಿದ. ಇನ್ನೊಬ್ಬಾತ ಕವಡೆ ಹಾಕಿ ಭವಿಷ್ಯ ಹೇಳಲು ಕುಳಿತ. ಮತ್ತೊಬ್ಬ ಬಂದು ಪ್ರಶ್ನೆಯನ್ನು ಕೇಳಿದ ಘಳಿಗೆಯನ್ನು ನೋಡಿ ಗುಣಿಸಿ ತಾಜಗದ ಕುಂಡಲಿ ಹಾಕಿ ಮುಂದಾಗುವುದನ್ನು ಹೇಳಲು ಪ್ರಾರಂಭಿಸಿದ. ಬಂದಿದ್ದ ಜನರೆಲ್ಲರೂ ತಂತಮ್ಮ ಭವಿಷ್ಯವನ್ನು ಕೇಳಲು ಬಲು ಉತ್ಸುಕರಾಗಿದ್ದರು. ಕೇಳಿದ ಮೇಲೆ ಸಂತೋಷವನ್ನು ಪಡುತ್ತಿದ್ದರು. ಈ ಗುಜುಗಲಾಟೆ ಹತೋಟಿಗೆ ಬಂದಾಗ ಶಂಖದ ಥಟ್ ಥಟ್ ಥಟ್ ಶಬ್ದವಾದಾಗ ಪೂಜಾರಪ್ಪನ ಬಳಿಗೆ ಭವಿಷ್ಯಕಾರರೆಲ್ಲರೂ ಹೋಗಿ ನಿಂತರು.

"ಇಂದ್ರಜಾಲ, ಮಹೇಂದ್ರಜಾಲದವರೆಲ್ಲಿ?" ಎಂದು ಪೂಜಾರಪ್ಪನು ಕೇಳಿದ. ಶಾಲೆಯ ಸೂರಿನಿಂದ ಮೂವರು ಜಾರುತ್ತ ಇಳಿದುಬಂದು ನಮಸ್ಕರಿಸಿದರು. "ಎಲಾ! ಇವರ ಸೂರಿಂದ ಹೇಗೆ ತಾನೆ ಇಳಿದರು. ಏಣಿಯಿಲ್ಲ, ಧುಮುಕಲಿಲ್ಲ," ಅಂತ ಬಯಲಿನ ಸುತ್ತಲಿದ್ದ ಜನ ಕಕವಗಳ ಹಾಗೆ ಬಾಯಿ ಬಿಟ್ಟುಕೊಂಡಿದ್ದರು.

ಇಂದ್ರಜಾಲಕನಿಗೆ ಮೊದಲ ಬಹುಮಾನವನ್ನು, ಸಾಮುದ್ರಿಕಶಾಸ್ತ್ರ ಹೇಳಿದವನಿಗೆ ಎರಡನೆಯ ಬಹುಮಾನವನ್ನು ಕೊಡಲಾಯಿತು. ಆಗ ಇಂದ್ರಜಾಲಕನು ಹದಿನಾರು ಸುರುಳಿ ಹಾಕಿದ್ದ ತೆಳುವಾದ ನೂಲು ಹಗ್ಗವನ್ನು ಶಾಲೆಯ ಸೂರಿಂದ ಬಿಡಿಸಿ ಆಯುಧಗಳ ಪಕ್ಕದಲ್ಲಿಟ್ಟನು.

ಆಯುಧ ಪೂಜೆಯಾದ ಮೇಲೆ ಎಲ್ಲರೂ ಮನೆಗಳಿಗೆ ಹೋದರು. ಸಂಜೆಯ ಸಭೆಗೆ ಆರಾಧ್ಯರು ಬಂದಿದ್ದರು. ದಾಸೋಹಮಾಡಿ, ಅವರಿಗೆ ಕಾಣಿಕೆಯನ್ನರ್ಪಿಸಿದ ಬಳಿಕ, ಶಿಷ್ಯರೆಲ್ಲರೂ ನಮಸ್ಕರಿಸಿದರು.

ವಿಜಯದಶಮಿಯ ದಿನ ಮುಂಜಾವಿನಲ್ಲೇ ಶಾಲೆಯೆದುರಿನ ಬಯಲಲ್ಲಿ ಸಾರ್ವಜನಿಕ ಭಜನೆಯಾಯ್ತು. ಭಕ್ತಿಭಂಡಾರಿಗಳ ವಚನಗಳು, ಸರ್ವಜ್ಞ ಪದಗಳು,

ದಾಸರ ಹಾಡುಗಳು, ಇವೆಲ್ಲವನ್ನು ಸುಮಾರು ಎರಡು ತಾಸುಗಳು ಎಲ್ಲರ್ರೂ ಹಾಡಿದರು. ನಂತರ ಪೂಜೆ, ಮಹಾಮಂಗಳಾರತಿ ಎಲ್ಲಾ ಮುಗಿದ ಮೇಲೆ, ಸಂಜೆಯ ಸಭೆಯ ವಿವರಗಳನ್ನಿತ್ತು ಪೂಜಾರಪ್ಪನು ಶಿಷ್ಯರೊಂದಿಗೆ ನಿವಾಸಕ್ಕೆ ಹಿಂತಿರುಗಿದನು.

ಸಂಜೆ ಬಯಲಿನಲ್ಲಿ ಹಳ್ಳಿಯವರೆಲ್ಲಾ ಹಾಜರಿದ್ದರು. ಪೂಜಾರಪ್ಪನು ಶಿಷ್ಯರೊಂದಿಗೆ ಹಳ್ಳಿಯವರನ್ನೆಲ್ಲಾ ಕರೆದುಕೊಂಡು ಊರಂಚಿನಲ್ಲಿದ್ದ ಶಮೀವೃಕ್ಷದ ಬಳಿಗೆ ಹೊರಟನು. ಬಿಚ್ಚುಗತ್ತಿ, ದೊಣ್ಣೆಗಳನ್ನು ಹಿಡಿದ ಶಿಷ್ಯರು ಪೂಜಾರಪ್ಪನ ಹಿಂದೆ ಸಾಲ್ಗೋಡಿಯಾಗಿ ಸಮಸಮ ಕಾಲುಹಾಕುತ್ತಾ ನಡೆದಾಗ ಹಿಂಬಾಲಿಸುತ್ತಿದ್ದ ಹಳ್ಳಿಯವರೂ ಕೂಡ ಸಮಸಮ ನಡೆಯಲು ಶುರು ಮಾಡಿದರು.

ಶಮೀವೃಕ್ಷದ ಬಳಿ ಬಂದಾಗ, ಜನರೆಲ್ಲರೂ ವೃಕ್ಷದ ಕಟ್ಟೆಯ ಸುತ್ತ ನಿಂತರು. ಪೂಜೆಮಾಡಿ, ಶಮೀಪತ್ರವನ್ನು ಎಲ್ಲರಿಗೂ ಹಂಚಿದ ಮೇಲೆ, ಪೂಜಾರಪ್ಪನು:

"ಮೂರು ವರ್ಷಗಳ ಹಿಂದೆ ಕನಸಿನಲ್ಲಿ ಕಂಡ ತಾಯಿ ಭೈರವಿಯ ಆಣತಿಯಂತೆ ನಿಮ್ಮ ಹಳ್ಳಿಗೆ ನಾನು ಬಂದೆ. ನಿಮ್ಮ ನಾಯಕರಾದ ಅಚ್ಚೋಜಿಯವರು, ಪಂಚಾಯ್ತಿಯ ಹಿರಿಯರ ಅಭಿಮತದಂತೆ ನನ್ನ ಸಲಹೆಗಳನ್ನು ಒಪ್ಪಿದರು. ಹದಿನಾರು ಯುವಕರನ್ನು ನನ್ನ ಬಳಿಗೆ ಕಳಿಸಿಕೊಟ್ಟಿರಿ. ಈ ಮೂರು ವರ್ಷಗಳಲ್ಲಿ ಅವರಿಗೆ ಶಿಸ್ತು, ಶಿಕ್ಷಣ, ಸಂಯಮ ಇವೆಲ್ಲವನ್ನೂ ಸಾಧ್ಯವಾದಷ್ಟು ಕಲಿಸಿದ್ದೇನೆ. ಕಳೆದ ಹತ್ತೂ ದಿನಗಳಲ್ಲಿ ತಾವು ಕಲಿತಿದ್ದನ್ನು ಹುಡುಗರು ನಿಮ್ಮೆದುರಿಗೆ ಪ್ರದರ್ಶಿಸಿದ್ದಾರೆ. ಇಷ್ಟೂ ದಿನ ಕಲಿತ ವಿದ್ಯೆಯನ್ನು ಉಪಯೋಗಿಸಿಕೊಂಡು, ನನ್ನ ಸಂಕಲ್ಪದಂತೆ ಸಿದ್ಧಿಯನ್ನು ಪಡೆಯುವ ಕಾಲ ಒದಗಿಬಂದಿದೆ.

ನಮ್ಮ ದೇಶದಲ್ಲಿ ಅಲ್ಲಲ್ಲಿ ಪಾಳೆಯಗಾರರು, ನಾಯ್ಕರು, ಊರ ಗೌಡರು, ಚಿಕ್ಕಪುಟ್ಟ ರಾಜರುಗಳು, ನಿಧಿಯನ್ನು ಹೂತಿಟ್ಟು, ಮರಣವಾದರು. ಆ ನಿಧಿಯು ಅನಾಯಾಸವಾಗಿ, ಅನ್ಯಾಯವಾಗಿ, ಕೆಲವು ಸ್ವಾರ್ಥಿಗಳ ಕೈ ಸೇರಿದೆ. ಶಿಷ್ಯರ ಸಹಾಯದಿಂದ ಆದಷ್ಟು ಅಂತಹ ನಿಧಿಯನ್ನು ಸಂಗ್ರಹಿಸಿ, ಧರ್ಮ ಪ್ರಚಾರಕರೆಲ್ಲರಿಗೂ ಹಂಚಬೇಕೆಂದು ಭೈರವಿಯ ಕಟ್ಟಾಜ್ಞೆಯಾಗಿದೆ. ಈ ವರ್ಷದಿಂದ ಭೈರವಿಯು ಸೂಚಿಸಿದ ದಿಕ್ಕಿಗೆ ಹುಡುಗರನ್ನು ಕಳಿಸಿ ಈ ಕಾರ್ಯವನ್ನು ಆರಂಭಿಸಬೇಕೆಂದಿದ್ದೇನೆ.

ಈ ತನಕ ಹಳ್ಳಿಯಲ್ಲಿ ಮಾಡಿದ ಖರ್ಚನ್ನೆಲ್ಲಾ ಪಿತ್ರಾರ್ಜಿತವಾದ ನನ್ನ ಹಣದಿಂದಲೇ ಮುಗಿಸಿದ್ದೇನೆ. ಶಿಷ್ಯರ ಕಲಿಸುವಿಕೆಗಾದ ಖರ್ಚನ್ನೆಲ್ಲಾ ಆ ಹಣದಿಂದಲೇ ಕೊಟ್ಟಿದ್ದೇನೆ. ನನ್ನ ಹಣದ ಋಣ ಇಲ್ಲಿಗೆ ತೀರಿತು.

ಅಮಾವಾಸ್ಯೆಗೆ ಮೊದಲು ಪ್ರವಾಸ ಕೈಗೊಂಡು, ಹಿಂದೂ ಧರ್ಮವನ್ನು ಪ್ರಚಾರಮಾಡುತ್ತಿರುವ ಹರಿಕಥೆ ದಾಸರು, ಶಿವಕಥಾಕಾರರು, ಪುರಾಣ, ವಚನಗಳನ್ನು ನಡೆಸುತ್ತಿರುವ ಹಿರಿಯಾತ್ಮರು, ಭಗವದ್ಪೂಜೆಯಲ್ಲಿ ಮಗ್ನರಾಗಿ, ಆತ್ಮಶಕ್ತಿಯನ್ನು ಬೆಳೆಸಿಕೊಂಡವರು, ಎಲ್ಲವನ್ನು ವೈರಾಗ್ಯದಿಂದ ತ್ಯಜಿಸಿ, ಸಕಲರ ಹಿತಕ್ಕಾಗಿ ದುಡಿಯುತ್ತಿರುವವರು, ಇಂತಹವರಲ್ಲಿ ಹಲವರನ್ನು ನಮ್ಮೂರಿನ ಉತ್ಸವಕ್ಕೆ ಆಹ್ವಾನಿಸಿ



ಬಂದಿದ್ದೆ. ಅವರುಗಳೂ ನಮ್ಮ ಹುಡುಗರ ಮೇಲೆ ಕೃಪೆ ತೋರಿ, ಇಲ್ಲಿಗೆ ಬಂದು, ತುಂಬು ಮನಸ್ಸಿನಿಂದ ಆಶೀರ್ವಾದ ಮಾಡಿಹೋದರು.

ಈಗ, ನಿಮ್ಮ ನಿಮ್ಮವರೇ ಆದ ಹುಡುಗರನ್ನು ನೀವು ಒಕ್ಕೊರಲಿನಿಂದ ಹರಸಿ. ನಾವು ಇನ್ಮುಂದೆ ತೊಡಗುವ ಕೆಲಸದಲ್ಲಿ ಜಯವಾಗಲೆಂದೂ, ಹುಡುಗರು ಯಶಸ್ವಿಯಾಗಲೆಂದೂ ಭೈರವಿಗೆ ಹರಕೆ ಹೊತ್ತರೂ ಒಳಿತು" ಎಂದು ಹೇಳಿದನು.

ಹಳ್ಳಿಯವರೆಲ್ಲರೂ ಒಕ್ಕೊರಲಿನಿಂದ ಹರಸಿದರು.

ನಂತರ ಎಲ್ಲರೂ ಹಳ್ಳಿಗೆ ಹಿಂತಿರುಗಿದರು.

* * * *

"ಆಮೇಲಿಂದ ನೋಡು, ಶಿವೂ, ವರ್ಷ ವರ್ಷವೂ ಇಬ್ಬರೋ ಮೂವರೋ ಶಿಷ್ಯರನ್ನು ನಿಧಿ ಸಂಗ್ರಹಣೆಗೆ ಪೂಜಾರಪ್ಪನು ಕಳಿಸುತ್ತಿದ್ದ. ಮೂರು ಮೊದಲ ಬಹುಮಾನ, ಎರಡು ದ್ವಿತೀಯ ಬಹುಮಾನವನ್ನು ಪಡೆದಿದ್ದ ಜಗ್ಗೋಜಿಯನ್ನೂ, ಒಂದು ಮೊದಲ ಬಹುಮಾನ ಮೂರು ದ್ವಿತೀಯ ಬಹುಮಾನ ಪಡೆದ ಕನ್ನೋಜಿಯನ್ನೂ ಲಕ್ಕೋಜಿಯನ್ನೂ ಮೊದಮೊದಲು ಕಳಿಸಿಕೊಟ್ಟ.

"ಅವರು ಹಿಂತಿರುಗಿ ಬಂದಾಗ ರೇಣುಕಮ್ಮನ ತೇರಿನ ವಿಷಯವನ್ನು ಹೇಳಿದರು. ಕರಿನಾಗರದ ಅನುಭವ ಹೇಳಿದರು. ಕತ್ತಿವರಸೆ ಕಾಮಯ್ಯನ ವಿಷಯ ತಿಳಿಸಿದರು. ಮುತ್ತು ಉದುರಿಸಿದವನ ಕತೆ ಹೇಳಿದರು. ಒಂದೊಂದನ್ನಾಗಿ ಹೇಳ್ತೀನಿ, ಕೇಳು! ಶಿವು!"

ಎಂದು ಚಿಕ್ಕಣ್ಣಯ್ಯನು ಜಗ್ಗೋಜಿ, ಕನ್ನೋಜಿ, ಲಕ್ಕೋಜಿಗಳ ಅನುಭವದ ಕತೆಗಳನ್ನು ಹೇಳಿದನು.

# "ರೇಣುಕಮ್ಮನ ತೇರು"

ಸೊರಬ ತಾಲ್ಲೂಕು ಚಂದ್ರಗುತ್ತಿಯಲ್ಲಿ ಚೈತ್ರಮಾಸದ ರೇಣುಕಮ್ಮನ ರಥೋತ್ಸವಕ್ಕೆ ಐದಾರು ಸಾವಿರ ಜನರು ಸೇರುತ್ತಾರೆ. ಎಂಟು ದಿನ ಪೂಜೆ ಪುನಸ್ಕಾರಗಳು ನಡೆಯುತ್ತವೆ.

ಚಿನ್ನಮ್ಮಾಜಿಯ ಅರಮನೆಯ ದರೋಗನೊಬ್ಬನು ನಗನಾಣ್ಯಗಳನ್ನು ಲಪಟಾಯಿಸಿಕೊಂಡು ಬಂದಿದ್ದನೆಂಬ ವದಂತಿ-

ಡಂಗುರದ ಶಬ್ದ ಕೇಳಿಸಿತು. ಹತ್ತಿರ ಹತ್ತಿರಕ್ಕೇ ಬರುತ್ತಿದ್ದಂತೆ ಡಂಗುರದ ಶಬ್ದ ಕೇಳಿಸಿತು. ಮನೆ ಹೊರಗಿನ ಜಗಲಿಯ ಮೇಲೆ ಬಿದ್ದುಕೊಂಡಿದ್ದ ಒಕ್ಕಲು ಮಗ ಎದ್ದು ಕುಳಿತ. ನೆಲದ ಮೇಲೆ ಹಾಕಿದ್ದ ಸೌದೆಕಟ್ಟಿನ ಮೇಲೆ ಕಾಲಿಟ್ಟು ಕುಳಿತುಕೊಂಡ.

"ಹಟ್ಟೀಲಿ ಎಲ್ಲಾರ ಮನೇಲೂ ಅಮ್ಮ ಏಳ್ತಾ ಇದೆ. ಊರ ಅಣ್ಣಮ್ಮನಿಗೆ ಎಲ್ಲೋ ಮೈಲಿಗೆ ಆಗೈತೆ. ಶುಕ್ರವಾರ ಸಂಜೆ ಅಣ್ಣಮ್ಮನ ಗುಡೀಲಿ ತಂಪೂಜೆ ಹಾಕ್ತದೆ. ಎಲ್ಲಾರೂ ಕಾಣಿಕೆ ಕೊಟ್ಟು ಅಣ್ಣಮ್ಮನ್ನ ಬೇಡಿಕೊಳ್ಳಿ. ಕುರುಡು, ಕುಂಟರಿಗೆ ಎಡೆ ಹಾಕೋ ಏರ್ಪಾಡೈತೆ. ಅಣ್ಣಮ್ಮಂಗೆ ಕೊಡೋ ಕಾಣಿಕೇನೆಲ್ಲಾ ಕೊಡ್ರೆಲಾ," ಎಂದು ಗುಡಿಯ ದಾಸಯ್ಯ ಡಂಗುರ ಹೊಡೆದು ಕೂಗುತ್ತಾ ಅದೇ ಹಾದಿಯಲ್ಲಿ ಹತ್ತಿರ ಹತ್ತಿರಕ್ಕೆ ಬರುತ್ತಿದ್ದುದನ್ನೂ ಒಕ್ಕಲು ಮಗ ಕಂಡ.

ಡಂಗುರ ಸಾರುತ್ತ ಬಂದವನು ಮನೆಯ ಹತ್ತಿರ ನಿಂತುಕೊಂಡ.

ನಿಂಬೆಹಣ್ಣು ಸಿಕ್ಕಿಸಿದ ಕತ್ತಿಯೊಂದನ್ನು ಬಲಗೈಯಲ್ಲಿ ಹಿಡಿದಿದ್ದಾನೆ. ಎಡಗೈಯಲ್ಲಿ ದೊಡ್ಡ ತಟ್ಟೆಯೊಂದನ್ನು ಹಿಡಿದಿದ್ದಾನೆ. ಬಲತೋಳಿನ ಮೇಲೆ ದೊಡ್ಡ ಜೋಳಿಗೆ ತೂಗುಬಿದ್ದಿದೆ. ಹಣೆಯ ಮೇಲೆ ವಿಭೂತಿಗಿಂತ ಕುಂಕುಮವು ಢಿಖಾವಾಗಿ ಕಾಣುತ್ತಿದೆ. ಚೌಕಳಿ ಕೆಂಪು ರೇಷ್ಮೆ ಪಟ್ಟೇಯನ್ನ ಕಠಾರಿ ಕಚ್ಚೆ ಹಾಕಿ ಉಟ್ಟಿದ್ದಾನೆ. ಏನೋ ಒಂದು ರೀತಿಯ ಕಳೆ ಇದೆ ಅವನ ಮುಖದ ಮೇಲೆ. ಪೂರ್ಣ ನಂಬಿಗೆಯಿಂದ ಉಂಟಾದ ಆತ್ಮ ವಿಶ್ವಾಸದ ಕಳೆ. ತನ್ನನ್ನು ತಾನೇ ಮೋಸಮಾಡಿಕೊಂಡಿರಬಹುದೇ ಎಂಬ ಸಂದೇಹವೂ ಬಾರದೇ ಇರುವ ಪುಣ್ಯವಂತನ ಮುಖದ ಕಳೆ!

"ಮ ಮ ಮ ಮ್ಮನೆ ಬೀಗ ಹಾಕಿರೋದು ಕಖ ಕಖ ಕಾಣಸುಲ್ವಾ! ಇಲ್ಲಿ ಯಾಕ್ಲಾ ನಿ ನಿ ನಿ ನ್ನಿಂತೆ" ಎಂದು ಹೇಳಿದ ಒಕ್ಕಲು ಮಗ. ಪಾಪ! ಒಕ್ಕಲು ಮಗನಿಗೆ ಬಾಯಿ ತುಂಬಾ ತೊದಲುತ್ತಿತ್ತು.

"ಮತ್ತೆ, ನೀನ್ಯಾಕ್ಲಾ, ಬೀಗ ಹಾಕಿದ ಮನೆ ಜಗುಲಿ ಮೇಲೆ ಬಿದ್ದುಕೊಂಡಿದ್ದೀ?" ಎಂದು ಗುಡಿಯ ದಾಸಯ್ಯ ಕೇಳಿದ.

"ರೇ ರೇ ರೇಣುಕಾಮ್ಮನೋರ ತೇ ತೇ ತೇರು ನೋಡ್ಲೇಬೇಕು; ಚವುಚಂದ್ರ ಗುತ್ತಿಗೆ ಹೋಗ್ಲೇಬೇಕು ಅಂತ ನನ್ನೆಂಡ್ರು ಹಠ ಹಿಡಿದ್ಳು. ಸೊರಬದ ಅಯ್ನೋರ ಹತ್ತಿರ, ವಶಿ ಸಾಲ ತೊಗೊಂಡು ಹೋಗೋಣ ಅಂತ ಬಂದೆ. ದೊ ದೊ ದೊಡ್ಡೋರ ಹತ್ತಿರ ಹೋಗೋವಾಗ ಬ ಬ ಬರೀ ಕೈಲಿ ಹೋಗ್ತಾರಾ? ಅದಕ್ಕೇ ಸೌದೆ ಕಟ್ಟು ತ ತ ತಂದೆ. ಇಲ್ಲಿಗೆ ಸುಶ್ತಾಗಿ ಬಂದ್ರೆ, ಅಯ್ನನೋರ ಮನೆ ಬೀಗ ಹಾಕಿದೆ. ಹಿತ್ತಲ ಕಡೆ ಹೋಗಿ ನೋಡಿದೆ; ಯಾರಾರಾ ಕೂಲಿ ಆಳು ಇದಾರಾ ಅಂತ. ಎಲ್ಲರೂ ಹೊಂಟ್ಹೋಗಿದಾರೆ. ಪಕ್ಕದ ಮನ್ಯಾಗೆ ಯಿಚಾರಿಸ್ದೆ. ಅಯ್ನನೋರು ಚ ಚ ಚಂದ್ರಗುತ್ತೀಗೆ ಹೋಗಿ ಎರಡು ದಿನ ಆತು ಅಂತ ಹೇಳಿದ್ರು. ಬ ಬ ಬರೀ ಕೈಲಿ ಹೋಗಬೇಕು ಮನೇಗೆ. ಇನ್ನೇನು ರಂಪಾಟ ಹೂಡ್ತಾಳೋ, ಮನೇಲಿ ನನ್ನೆಂಡ್ತಿ" ಎಂದು ಒಕ್ಕಲು ಮಗ ಅಳು ದನಿಯಲ್ಲಿ, ತೊದಲುತ್ತಾ ಬೆವರುತ್ತಾ ಹೇಳಿದ.

ಅಣ್ಣಮ್ಮನ ಗುಡಿ ದಾಸಯ್ಯ ನಕ್ಕ. ನಗುತ್ತಾ "ಎಲಾ ಹಳ್ಳಿ ಮುಕ್ಕ! ಇಷ್ಟು ಗೊತ್ತಿಲ್ವಾ

ನಿಂಗೆ? ಸೊರಬದ ಅಯ್ನೋರು ಯಾರು ಅಂತೀ! ಕೆಳದಿ ನಾಯ್ಕರು ಅಂತ ಕೇಳಿಲ್ಲಾ ಅವರ ರಾಣಿ ಚೆನ್ನಾಮ್ಮಾಜಿಯವರು ಬಿದನೂರು ಬಿಟ್ಟು ಬಲ್ಲಾಳರಾಯನ ದುರ್ಗ ಓಡಿಹೋದಾಗ, ಅರಮನೆ ಓಲೆಕಾರನೊಬ್ಬ ನಗನಾಣ್ಯ ಹೊಡೆದುಕೊಂಡು ಇಲ್ಲಿ ರಂಗನಾಥಸ್ವಾಮಿ ದೇವಸ್ಥಾನಕ್ಕೆ ಬಂದು ಉಳಿದುಕೊಂಡ. ಅವನೇ ದೇವಸ್ಥಾನಾನ್ನ ಜೀರ್ಣೋದ್ಧಾರ ಮಾಡಿದ, ರೇಣುಕಾಮ್ಮನ ತೇರಿನ ಏರ್ಪಾಡು ಮಾಡಿದ. ಅವ ವಂಶದೋರೇ ನಮ್ಮ ಸೊರಬದ ಅಯ್ನೋರು. ತೇರಿನ ಏರ್ಪಾಡಿಗೆಲ್ಲಾ ಅವರು ಮುಖ್ಯಸ್ಥರು. ಅದಕ್ಕೇ ನಾಲ್ಕು ದಿನ ಮುಂಚೇನೇ, ಮನೆಯೋರೆಲ್ಲರ ಜತೆಗೆ ಚಂದ್ರಗುತ್ತಿ ಹೋಗ್ತಾರೆ! ಇದು ತಿಳೀದಾ ನಿಂಗೆ!" ಎಂದ.

"ಹ. ಹಂಗಾರ, ಇವೆಲ್ಲಾ ಗೊ ಗೊ ಗೊತ್ತಿದ್ದೋನು, ನೀನು ಯಾಕ್ಲಾ, ಈ ಮನೆ ತ ಥಾವ ನಿಂತೆ?" ಎಂದು ಒಕ್ಕಲು ಮಗ ಕೇಳಿದ.

"ಅದೂ ತಿಳೀಲಿಲ್ವಾ! ಸೊರಬದ ಅಯ್ನೋರು ಊರಿಗೆ ದೊಡ್ಡೋರು. ಅವರು ಮನೇಲಿರಲಿ, ಇಲ್ಲದೇ ಇರಲಿ; ಅವರ ಮನೆ ಬಾಗಿಲಿಗೆ ಅಣ್ಣಮ್ಮನೋರ ಭಾಂಡಾರ ಹಚ್ಚಿ ಹೋಗಬೇಕು. ಅಮ್ಮನೋರ ಗುಡೀಗೆ ಅಯ್ಯನೋರೇ ಗೋಪುರ ಕಟ್ಟಿಸಿ ಸೇವ ಮಾಡ್ದೋರು" ಎಂದು ದಾಸಯ್ಯ ಹೇಳಿ ಬೀಗ ಹಾಕಿದ್ದ ಬೀದಿ ಬಾಗಿಲಿಗೆ, ವಿಭೂತಿಯ ಮೂರು ಅಡ್ಡಪಟ್ಟೆಗಳನ್ನು ಹಚ್ಚಿ, ಡಂಗುರ ಸಾರುತ್ತಾ ಮುಂದಕ್ಕೆ ನಡೆದುಹೋದ.

"ವಿಭೂತಿ ಪಟ್ಟೇನ ಅಡ್ಡಡ್ಡವಾಗಿ ಹಚ್ಚೋ ಅಣ್ಣಮ್ಮನ ಗುಡಿಯೋರನ್ನ ಕಂಡೇ ಇದ್ದಿಲ್ವಲ್ಲಾ" ಎಂದಂದುಕೊಂಡ ಒಕ್ಕಲುಮಗ.

* * * *

ನಿಶಿರಾತ್ರಿ, ಕಗ್ಗತ್ತಲು ಕಾಣಿಸೋ ಅಷ್ಟು ನಕ್ಷತ್ರದ ಬೆಳಕು ಬಿದ್ದಿದೆ. ಅಯ್ಯನೋರ ಮನೆ ಮುಂದೆ ಒಬ್ಬ ವ್ಯಕ್ತಿ, ಮೂಡಲ ಕಡೆ ಇದ್ದ ತುಳಸೀ ತೋಟದ ಕಡೆಗೆ ಹೋದ. ಗಂಟೊಂದನ್ನು ಬಿಚ್ಚಿದ. ಆ ಕಡೆ ಇದ್ದ ಮನೆ ಗೋಡೆಗೆ ಕನ್ನ ಹಾಕಲು ಶುರು ಮಾಡಿದ. ಘಳಿಗೆಯೊಂದರಲ್ಲೇ ಕನ್ನಗತ್ತರಿಯನ್ನು ಹಿಂದಕ್ಕೆಳೆದುಕೊಂಡ. ಆಸಾಮಿ ತೂರುವಷ್ಟು ಕನ್ನ ಬಿದ್ದಿತ್ತು. ಏನೊಂದೂ ಶಬ್ದ, ಸಪ್ಪಳ ಆಗಲಿಲ್ಲ. ಅವ ಕನ್ನದಲ್ಲಿ ತೂರಿ ಬಚ್ಚಲ ಮನೆ ಸೇರಿದ. ಅಲ್ಲಿಂದ ಎಂಟು ಕಂಬದ ತೊಟ್ಟಿಗೆ ನಡೆದ. ಬೆಂಕಿಕಡ್ಡಿ ಗೀಚಿ, ಅದರ ಬೆಳಕಿನಲ್ಲೇ ಬಲಗಡೆಯಿದ್ದ ಕೊಠಡಿಯ ಬೀಗವನ್ನು ಎರಡು ಕ್ಷಣದಲ್ಲಿ ಬಿಚ್ಚಿದ. ಬಾಗಿಲು ತೆರೆದು ಕೊಠಡಿಯನ್ನು ಹೊಕ್ಕ. ಪೆಠಾರಿಯ ಮೇಲೆ ಪೇರಿಸಿಟ್ಟಿದ್ದ ಹಾಸಿಗೆಗಳೆರಡನ್ನೂ ತೆಗೆದು ಕೆಳಗಿರಿಸಿದ. ಪೆಠಾರಿಗೆ ಹಾಕಿದ್ದ ದೊಡ್ಡ ಬೀಗವೊಂದನ್ನು ಹಿಡಿದು ನೋಡಿದ. ಬೆಂಕಿಕಡ್ಡಿಯನ್ನು ಗೀಚಿ ಬೀಗವನ್ನು ಪರೀಕ್ಷಿಸಿದ.

ಕಿವಿಗೇನೋ ಕೇಳಿಸಿದಂತಾಯ್ತು. ಏನೋ ಅಪಾಯ! ಎಂಬ ಸಂಶಯ ಅವನಿಗೆ ತೋರಿತು. ಕೂದಲೆಲ್ಲಾ ನಿಮಿರಿ ನಿಂತುಕೊಂಡುವು. ಬಾಗಿಲ ಕಡೆಗೆ ಕಣ್ಣು ತಿರುಗಿಸಿ, ಉಸಿರಾಡುವುದೂ ಕೇಳದಿರುವಂತೆ ಸ್ತಬ್ಧನಾದ.

ಕೊಠಡಿ ಬಾಗಿಲ ಬಳಿಯಲ್ಲಿ ಬೆಂಕಿಕಡ್ಡಿ ಗೀಚಿದಂತಾಯಿತು. ಹಚ್ಚಲ್ಪಟ್ಟ ಲಾಂದ್ರದ



ಬೆಳಕು ಕಾಣಿಸಿತು. ಆ ಲಾಂದ್ರವನ್ನು ಎಡಗೈಯಲ್ಲಿ ಹಿಡಿದುಕೊಂಡು ಒಬ್ಬಾತ ಕೊಠಡಿಯೊಳಕ್ಕೆ ಬಂದ. ರೇಷ್ಮೆ ಕಿಸೆಅಂಗಿ ಧರಿಸಿದ, ಅಂಗೈಯಗಲ ಅಂಚಿನ ಮೇಲುಕೋಟೆ ಪಂಚೆಯನ್ನುಟ್ಟ, ಮಧ್ಯಪ್ರಾಯ ಮೀರಿದ ಆತನ ಬಲಗೈಯಲ್ಲಿ 'ವ್ಯಾಘ್ರನಖ'ವಿತ್ತು.

"ಚಂದ್ರಗುತ್ತಿಗೆ ಹೋಗಿದ್ದೇನೆ, ರೇಣುಕಾಮ್ಮನ ಗುಡಿಯಲ್ಲಿದ್ದೇನೆ, ಎಂದುಕೊಂಡು, ನನ್ನ ಮನೆ ದೋಚುಕ್ಕೆ ಬಂದೆಯಾ? ರೇಣುಕಾಂಬೆಯ ಕೃಪೆ! ಕಟ್ಟಿಟ್ಟಿದ್ದ ಮುಡುಪನ್ನು ತೆಗೆದುಕೊಂಡು ಹೋಗಲು ಮರೆತಿದ್ದೆ. ಅದನ್ನು ತೆಗೆದುಕೊಂಡು ಹೋಗೋಣ ಎಂದು ಸಂಜೆ ಮುಂದೆ, ಕುದುರೇನ ಧೌಡು ಓಡಿಸಿಕೊಂಡು, ಮನೆಗೆ ಬಂದರೆ, ಬೀದಿ ಬಾಗಿಲಿಗೆ ಮೂರು ಅಡ್ಡ ಬಿಳಿಪಟ್ಟೆ ಹಾಕಿತ್ತು, ಯಾವನೋ ಕಳ್ಳ, ಬೀಗ ಹಾಕಿದ ಬಾಗಿಲ ಕತ್ತಲಲ್ಲಿ ಕಾಣಿಸಲಿ ಅಂತ ಗುರ್ತು ಮಾಡಿ ಹೋಗಿದ್ದಾನೆ ಎಂಬುದು ಅರ್ಥವಾಯಿತು. ಅದಕ್ಕೇ ಮನೆಯಲ್ಲಿ ಕಾವಲು ಕುಳಿತೆ. ಬಚ್ಚಲ ಮನೆಯಲ್ಲಿ ಕನ್ನ ಹಾಕಿದ ಶಬ್ದ ಕೇಳಿಸಿತು. ಪಕ್ಕದ ಕೊಠಡಿಯಲ್ಲಿ ಕುಳಿತಿದ್ದ ನನಗೆ, ಈ ಕೊಠಡಿ ಬೀಗ ತೆಗೆದು ನೀನು ಹೋಗಿದ್ದೂ ಕಾಣಿಸಿತು. ಇನ್ನು ಯಾರೂ ನಿನ್ನ ಜತೆಗಿಲ್ಲ ಎಂದೂ ತಿಳಿಯಿತು. ಅದಕ್ಕೇ ಈಗಲೇ ಹಿಡಿಯೋಣ ಅಂತ ಬಂದೆ" ಎಂದು ಕೋಪದಿಂದ ಹೇಳಿದ.

ಕಳ್ಳನಿಗೆ ಮಾತೇ ಹೊರಡಲಿಲ್ಲ. ಮನೆಯಾತನನ್ನು ಕಂಡಾಗ ಬಾಯಿ ಒಣಗಿತ್ತು. ನಾಲಿಗೆ ಮೇಲಂಗಳಕ್ಕೆ ಅಂಟಿಕೊಂಡಿತ್ತು. ಎದೆಯ ಬಡಿತವು ಅವನ ಕಿವಿಯ ತಮಟೆಗಳಿಗೆ, ತಮಟೆ ಬಡಿದಂತೆ ಕೇಳಿಸುತ್ತಿತ್ತು. ಹೊಟ್ಟೆಯೆಲ್ಲಾ ಸಿಡಿದೆದ್ದು ಗಂಟಲಿಗೆ ಬಂದಿತ್ತು. ಕಾಲಿಗೆ ಕಲ್ಲು ಕಟ್ಟಿದಂತಿತ್ತು. ಗರಬಡಿದವನಂತೆ ಮಂಕಾಗಿ ಬೆಪ್ಪಾಗಿದ್ದ ಕಳ್ಳ ಮೂಗನಾಗಿಯೇ ಇದ್ದ. ಮೊಗದ ತುಂಬ ಶೂನ್ಯ ತುಂಬಿತ್ತು.

ಇದನ್ನು ಕಂಡ ಮನೆಯಾತನ ಮುಖದ ಮೇಲಿದ್ದ ಕೋಪದ ಗೆರೆಗಳೆಲ್ಲಾ ಅಳಿಸಿಹೋದುವು. ಕನಿಕರವು ಅನುಕಂಪದಿಂದ ತುಂಬಿ ಬಂದಿತ್ತು, ಮೆಲುದನಿಯಲ್ಲಿ

"ನಿಮ್ಮಂತಹವರನ್ನು ಕಂಡರೆ ನನಗೆ ಅಯ್ಯೋ ಎನ್ನಿಸುತ್ತೆ.ಎಲ್ಲರ ಹಾಗೆ ಮಾನವಾಗಿ ಬಾಳಿಕೊಳ್ಳಲು ಏನೋ ಅಡಚಣೆ ಬಂದು, ಯಾರದೋ ಕೆಟ್ಟ ಸಹವಾಸ ಸಿಕ್ಕಿ, ಹೀಗಾಗುತ್ತೀರಿ ಎಂದು ನನಗೆ ಗೊತ್ತು. ನೀನಿನ್ನೂ ಚಿಕ್ಕ ವಯಸ್ಸಿನವನು, ಅಪ್ಪ ಅಮ್ಮ ಇಲ್ಲದೇ ಇರಬಹುದು. ಆದರೆ ಅಮ್ಮ ಅಕ್ಕಂದಿರೂ ಇಲ್ಲವೇ ನಿನಗೆ? ಯಾಕೆ ಈ ಪಾಪಿ ಮಾರ್ಗಕ್ಕೆ ಬಿದ್ದೆ?" ಎಂದು ಸರಳವಾಗಿ ಕೇಳಿದ.

ಕನಿಕರ ತುಂಬಿದ, ಕರುಳು ತಟ್ಟಿ, ಎದೆ ಬಿರಿಸುವ ಈ ಮಾತುಗಳಿಂದ ಕಳ್ಳನ ಬಾಯಿಬೀಗ ಕಳಚಿಕೊಂಡಿತು. ಕಾಲ ಸಂಕೋಲೆ ಬಿಡಿಸಿಕೊಂಡಿತು. ಹಿರಿಯರೆದುರಿಗೆ ಸಹಜವಾಗಿ ನಿಲ್ಲುವಂತೆ, ಕೂತಿದ್ದ ಕಳ್ಳ ಎದ್ದುನಿಂತ.

ಆಗ ತಾನು ಯಾರು, ಎಲ್ಲಿದ್ದೇನೆ, ಎಂಬ ನೆನಪೂ ಕೂಡಿಬಂತು. ಸುಳ್ಳಿನ ಸರವನ್ನೇ ಪೋಣಿಸಿ, ತನ್ನ ಬಾಳ ಗೋಳನ್ನು ಹೇಳಿಕೊಳ್ಳಲು ಶುರುಮಾಡಿದ.

"ಮೂರು ವರ್ಷ ತುಂಬಿತ್ತು. ಆಗ ಅಮ್ಮನಿಗೆ ತಟ್ಟಂಥ ಜ್ಞಾನ ತಪ್ಪಿಹೋಯ್ತು. ದೆವ್ವ ಬಿಡಿಸುಕ್ಕೆ ಅಂತ ಜೋಗಿ ಚತ್ರಕ್ಕೆ ನನ್ನ ದೊಡ್ಡ ಅಣ್ಣಾ ಕರೆದುಕೊಂಡು ಹೋದ.

ಎರಡು ದಿನ ಆದಮೇಲೆ, ಬರಿಗೈಯಲ್ಲಿ ಮನೆಗೆ ಬಂದ. ಯಾವಾಗಲೂ ಬಾಯಿ ತುಂ ಮಾತಾಡ್ತಿದ್ದ ಅಣ್ಣ, ಅವತ್ತಿನಿಂದ ಮಾತಾಡೋದನ್ನೇ ಕಡಿಮೆ ಮಾಡಿದ. ಸದರ ಮಾತು, ಸರಸದ ಮಾತು, ಆದರದ ಮಾತು ಎಲ್ಲಾ ನಿಂತೇಹೋಯ್ತು. ಅ ಯಥಾಪ್ರಕಾರ, ಎಲ್ಲ ಅಪ್ಪಂದಿರಂತೆಯೇ, ಅವರಪ್ಪ ಹಾಕಿದ ಆಲದಮರದ ನೆರಳ ಹುಡುಕುತ್ತಾ, ಕುರುಡೆತ್ತಿನ ನಂಬಿಕೆಯಿಂದ ತನ್ನ ಪಾಡು ತಾನು ನೋಡಿಕೊಂ ನಾವಿರೋದೂ ಅವನಿಗೆ ಮರೆತುಹೋಯ್ತು! ಮಗಳನ್ನು ಕಳೆದುಕೊಂಡ ಅಜ್ಜಿ ಮನೇಲಿ ಮೂರು ವರ್ಷದ ಬಾಲ್ಯ ಕಳೆದೆ. ಆ ಮೇಲೆ ಅತ್ತಿಗೆ ಮನೇಲಿ, ಒಂದೂಟ ಎರಡು ಬೈಗಳು ಹೀಗೆ ದಿನಗಳನ್ನು ಕಳೆದೆ. ಕಡೆಗೆ ಏನೋ ಆಯಿತು. ಮನೆಯಿಂ ಹೊರಕ್ಕೆ ಅಟ್ಟಿದರು. ಆಮೇಲೆ ಕಂಡವರ ಮನೆಮೇಲೆ ಕಣ್ಣು ಬಿದ್ದಿತು. ಕನ್ನಹಾ ಅವರುಗಳ ಮನೆದೋಚಿ ಜೀವನ ಮಾಡಲಾರಂಭಿಸಿದೆ. ಇದೊಂದೇ ಕಸುಬು, ನಾನ ಕಲಿತಿರೋದು. ಈಗ ಇನ್ನೇನಾದರೂ ಮಾಡೋಣ ಅಂದರೆ ಕಳ್ಳನಿಗೆ ಯಾರು ಕೆಲ ಕೊಡ್ತಾರೆ?" ಎಂದೆಲ್ಲಾ ಕರುಳು ಕುಯ್ಯುವ ಮಾತುಗಳನ್ನು ಬೆಡಗಿನ ರೀತಿಯಲ್ಲಿ ಆಡಿದ

ಕಣ್ಣಂಚನ್ನು ಒರೆಸಿಕೊಂಡು ಮನೆಯಾತ, "ಅಯ್ಯೋ! ಪಾಪ! ಹೀಗಾಯಿತೇ ನಿ ಹಣೆಯ ಬರಹ! ಆದರೂ, ಸಮಾಜದಲ್ಲಿ ಕಟ್ಟು ಕಟ್ಟಳೆಗಳನ್ನೆಲ್ಲಾ ಸರ್ಕಾರದವರು ವಿಧಿಸಿರೋದು ನಮ್ಮ ಒಳ್ಳೆಯದಕ್ಕೇ ಅಲ್ಲವೇ? ಕಟ್ಟಳೆಗಳಿಗೆ ಸರಿಯಾಗಿ ನಾವ ನಡೆದುಕೋಬೇಕು. ತಪ್ಪು ಮಾಡಿದರೆ ಶಿಕ್ಷೆಯನ್ನು ಅನುಭವಿಸಲೇಬೇಕು. ಆದರೆ ನಿನಗ ಶಿಕ್ಷೆಯು ಆದಷ್ಟು ಕಡಿಮೆಯಾಗುವಂತೆ ನನ್ನ ಕೈಲಾದ್ದು ಮಾಡುತ್ತೇನೆ. ಈ ಊರಲ್ಲಿ ನನ್ನ ಮಾತು ನಡೆಯುತ್ತೆ. ಇನ್ನೆಲ್ಲಾ ಸ್ವಲ್ಪಹೊತ್ತಿನಲ್ಲಿ ಗಸ್ತು ತಿರುಗುವ ಕೊತ್ವಾಲರ ಪ್ಯಾದ ಬರುತ್ತಾನೆ. ಕದಿಯಲಿಲ್ಲ ಇವ, ಕನ್ನಹಾಕಿ ಸಿದ್ಧಮಾಡಿಕೊಂಡಿದ್ದ ಎಂದು ಅವನಿಗ ಹೇಳುತ್ತೇನೆ. ಹೇಗೂ ಈ ಪೆಠಾರಿಗೆ ಹಾಕಿರೋ ಬೀಗ ಯಾರೂ ಒಡೆಯಲಾರರು. ಕೆಳದಿ ನಾಯಕರ ಖಜಾನೆಗೆಂದೇ ತರಿಸಿದ್ದ ಬೀಗ" ಎಂದು ಹೇಳಿದ.

ಕಳ್ಳನಿಗೆ ಕೋಪ ಬಂದಿತು. "ಈ ಬೀಗಾನ ಯಾಕೆ ತೆಗೆಯುಕ್ಕೆ ಆಗುಲ್ಲ ಅಂತೀರಿ? ಬೇಕಾರ ನೋಡಿ ನಿಮ್ಮೆದುರಿಗೇ ಕಳಚ್ತೇನಿ" ಎಂದ. ಒದೆ ಏಟುಗಳಿಂದ ತಪ್ಪಿಸಿಕೊಂಡೆನಲ್ಲಾ ಅನ್ನೋ ಸಮಾಧಾನವೂ ಇತ್ತು. ಶಿಕ್ಷೆಯು ಕಡಿಮೆಯಾಗಬಹುದೆಂಬ ಆಸೆಯೂ ಇತ್ತು. ಆದರೆ ಕೈ ಚಳಕದ ವಿಚಾರ ಯಾರಾದರೂ ಹೀನಾಯವಾಗಿ ಮಾತನಾಡಿದರೆ, ಸುಮ್ಮನಿರಲು ಸಾಧ್ಯವಾಗಲಿಲ್ಲ. ಹೀಗೆ ಮಾಡಿದರೆ ಮುಂದೆ ತನಗೆ ಹೆಚ್ಚು ಕಷ್ಟ ಬರಬಹುದು ಎಂದೂ ತೋರಲಿಲ್ಲ.

ಮನೆಯಾತ ನಕ್ಕು "ಹಾಗಾದರೆ ತೆಗೀ ಬೀಗಾನ," ಎಂದು ಹೇಳಿದ. ಗುಗ್ಗೆಕಡ್ಡಿಗಳೆರಡನ್ನು ಹಿಡಿದು ಪೆಠಾರಿ ಬೀಗವನ್ನು ತೆರೆಯಲು ಕಳ್ಳ ಪ್ರಾರಂಭ ಮಾಡಿದ. ಅತ್ತ ಇತ್ತ ಅವುಗಳನ್ನು ಕಣ್ಣುಮುಚ್ಚಿಕೊಂಡೇ, ಬೀಗದ ಒಳಗೆ ಅಳ್ಳಾಡಿಸಿ ಬಗ್ಗಿಸಾಡಿದ. ಒಂದಿಪ್ಪತ್ತು ಭೈರವಿ ಮಂತ್ರ ಹೇಳೋ ಅಷ್ಟು ಹೊತ್ತಿನಲ್ಲಿ ಛಕ್ ಅಂತ ಶಬ್ದವಾಯಿತು. ಬೀಗ ಕಳಚಿಕೊಂಡಿತ್ತು. "ಭೇಷ್" ಅಂದ ಮನೆಯಾತ.

"ಇಷ್ಟೆಲ್ಲಾ ಜಾಣ! ಈ ಕಸುಬಿಗೆ ಯಾಕೆ ಬಿದ್ದೇಪ್ಪಾ? ಮುಂದಾದರೂ ನಿನಗೊಂದು



ಮಾರ್ಗ ಮಾಡಿಕೊಡ್ತೀನಿ. ಈಗ ತೊಟ್ಟಿಗೆ ಬಾ, ಕಂಭಕ್ಕೆ ಕಟ್ಟಿಹಾಕ್ತೀನಿ. ನಂತರ ಬೀದಿಬಾಗಿಲು ತೆಗೆದು ಪ್ಯಾದೆಯನ್ನು ಕರೀತೀನಿ" ಎಂದು ಹೇಳುತ್ತಾ ಕಳ್ಳನನ್ನು ತೊಟ್ಟಿಗೆ ಹಿಡಿದುಕೊಂಡು ಬಂದು ಕಂಭಕ್ಕೆ ಬಿಗಿಯಾಗಿ ಕಟ್ಟಿಹಾಕಿದ.

ತೋಳನ್ನು ಮನೆಯಾತ ಹಿಡಿದಾಗಲೇ ಕಳ್ಳನಿಗೆ ಗೊತ್ತಾಗಿತ್ತು; ಮನೆಯಾತ ಗರಡಿ ಸಾಮು ಮಾಡಿದವ ಅಂತ. ಆಯುಧ ಅವನ ಹತ್ತಿರ ಇಲ್ಲದೇ ಇದ್ದರೂ ಇವನ ಆಟ ಏನೂ ಸಾಗುಲ್ಲ ಅಂತ ತಿಳಿದುಹೋಗಿತ್ತು. ತೆಪ್ಪಗೆ ಕಂಭಕ್ಕೆ ಕಟ್ಟಿಸಿಕೊಂಡ.

ರಸ್ತೆಯಲ್ಲಿ ಟಪ್ ಟಪ್ ಸಪ್ಪಳ ಕೇಳಿಸಿತು. ಮನೆಯಾತ ಬಾಗಿಲು ತೆಗೆದು ಗಸ್ತಿನ ಪ್ಯಾದೆಯನ್ನು ಕೂಗಿ ಕರೆದ. ನಡೆದ ವಿಷಯವನ್ನೆಲ್ಲಾ ತಿಳಿಸಿದ. ಪ್ಯಾದೆಗೆ ಬಲು ಖುಷಿಯಾಯ್ತು. ಬೋನಿನಲ್ಲಿರುವ ಕುಂಟ ಇಲಿಯನ್ನು ಕಂಡ ಬೆಕ್ಕಿನಂತೆ ಹಿಗ್ಗಿದ. "ಇಷ್ಟು ಸುಲಭವಾಗಿ ಶಿಕಾರಿ ಸಿಕ್ಕಿತಲ್ಲಾ, ಅದೂ ಅಯ್ಯನೋರ ಮನೇಲೇನೇ! ಅಂದ ಮೇಲೆ ಭಡ್ತಿ ದೊರೆಯೋದು ಖಂಡಿತ," ಎಂದೆಲ್ಲಾ ಅನ್ನಿಸಿತು.

"ಭಾಳ ಬುದ್ಧಿಯಿಂದ ಈ ಕದೀಮನ್ನ ನೀವೊಬ್ಬರೇ ಹಿಡಿದಿರಲ್ಲಾ" ಎಂದು ಮನೆಯಾತನನ್ನು ಹೊಗಳಿದ. "ನಿಮ್ಮ ಧೈರ್ಯ ಬಹಾಳ ಅಯ್ಯನೋರ" ಎಂದಂದ. "ಧೈರ್ಯ ಇಲ್ಲದೇ ಇದ್ದರೆ, ನಗ ನಾಣ್ಯಗಳನ್ನಿಟ್ಟುಕೊಂಡು ಊರಲ್ಲಿ ಬಾಳೋದು ಸುಲಭವೇನಯ್ಯಾ?" ಎಂದ ಮನೆಯಾತ.

ಹಾತ್ ಬೇಡಿ ತೊಡಿಸಲು ಪ್ಯಾದೆಯು ಉದ್ಯುಕ್ತನಾದ. ಆಗ ಮನೆಯಾತ ಹೇಳಿದ "ಕನ್ನ ಎಲ್ಲಿ ಹಾಕಿದ್ದಾನೆ, ಯಾವ ಕಡೆಯಿಂದ ಬಂದಿದ್ದಾನೆ, ಅವನ್ನೆಲ್ಲಾ ನೋಡಿಕೊಂಡು ಬರೋವಂತೆ, ಬಾ. ರುಜುವಾತಿಗೆ ಆ ಸಾಕ್ಷ್ಯ ಎಲ್ಲಾ ಬೇಕಾಗುತ್ತೆ. ಆ ಮೇಲೆ ಬೇಡಿಹಾಕಿ ಠಾಣೆಗೆ ಹಿಡಿದುಕೊಂಡು ಹೋದರಾಯಿತು" ಎಂದು. ಹೌದು ಹೌದು ನೀವು ಹೇಳಿದ್ದು ಸಮ ಎಂದು ಪ್ಯಾದೆಯು-ಮುಂದೆ, ಬಚ್ಚಲ ಮನೆಯ ಕಡೆಗೆ ಹೊರಟ. ತೊಟ್ಟಿಯಿಂದ ತೆರೆದಿದ್ದ ಒಂದೇ ಬಾಗಿಲು ಬಚ್ಚಲಮನೆಗೆ ತೆರೆಯುತ್ತಿತ್ತು. ಅವನ ಹಿಂದೆಯೇ ಮನೆಯಾತನೂ ಹೊರಟ. ಒಂದು ಹೆಜ್ಜೆ ಹಾಕಿದ ಮೇಲೆ ಮನೆಯಾತ ಹಿಂತಿರುಗಿ ಕಳ್ಳನ ಕಡೆಗೆ ನೋಡಿದ, ಬಲಗಣ್ಣು ಹುಬ್ಬೆತ್ತಿ ಕಣ್ಣು ಮಿಟುಕಿಸಿದ. "ಅರೆ! ಇದೇನು ಬೇನೆ ಇವನಿಗೆ?" ಎಂದು ಕಳ್ಳನಿಗೆ ಆಶ್ಚರ್ಯವಾಯಿತು.

* * * *

ಬಚ್ಚಲಮನೆಯಲ್ಲಿ ಹಾಕಲ್ಪಟ್ಟಿದ್ದ ಕನ್ನವನ್ನು ಪ್ಯಾದೆಯು ನೋಡಿದ. "ಅಯ್ನೋರ! ಎಷ್ಟು ಪಸಂದಾಗಿ ಕನ್ನ ಹಾಕಿದ್ದಾನೆ," ಎಂದ. "ಅಗಲ ಎಷ್ಟಿದೆ ನೋಡು, ವಿಚಾರಣೆ ಮಾಡೋವಾಗ ಕೇಳ್ತಾರೆ" ಎಂದ ಮನೆಯಾತ.

ಅಳತೆ ತೆಗೆದುಕೊಳ್ಳುಕ್ಕೆ ಪ್ಯಾದೆ ಬಗ್ಗಿದ. ಠಣ್ ಅಂತ ಶಬ್ದ ಆಯಿತು. ಧೊಪ್ ಅಂತ ಭಾರಿ ಪದಾರ್ಥ ಬಿದ್ದಹಾಗಾಯ್ತು.

* * * *

ಲಾಂದ್ರಹಿಡಿದಿದ್ದವನೊಬ್ಬನೇ ತೊಟ್ಟಿಗೆ ಹಿಂತಿರುಗಿದ. ಕಳ್ಳನಿಗೆ ಬಿಗಿದಿದ್ದ

ಕಟ್ಟುಗಳೆಲ್ಲವನ್ನು ಬೇಗ ಬೇಗ ಬಿಚ್ಚಿದ. ಪೆಠಾರಿ ಕೊಠಡಿಗೆ ಕಳ್ಳನನ್ನು ಕರೆದುಕೊಂಡು ಹೋದ. ಶಾಲೊಂದನ್ನು ಹಾಸಿದ. ಪೆಠಾರಿಯಲ್ಲಿದ್ದ ನಗ ನಾಣ್ಯ ಎಲ್ಲವನ್ನು ಶಾಲಿನ ಮೇಲೆ ಪೇರಿಸಿದ.

"ನೀನೇ, ಸಮ ಸಮ ಭಾಗ ಮಾಡು. ನಿನ್ನ ಪಾಲಿನದನ್ನು ಬೇರೆ ಗಂಟುಕಟ್ಟು," ಎಂದ, ಲಾಂದ್ರ ಹಿಡಿದಿದ್ದ 'ಮನೆಯಾತ.'

ಬೆಕ್ಕಸ ಬೆರಗಾಗಿ ನೋಡುತ್ತಿದ್ದ ಕಳ್ಳ "ನೀನೂ ನಮ್ಮೋನೇನಾ?" ಎಂದ. ಲಾಂದ್ರದವ ಹ್ಞೂ ಅಂದ. "ಹಾಗಿದ್ದರೆ ನನ್ನಾಕೆ ಅಷ್ಟು ಬಿಗಿಯಾಗಿ ಕಟ್ಟುಹಾಕಿದೆ?" ಎಂದು ಕಳ್ಳ ಕೇಳಿದ. "ಕೊತ್ವಾಲನ ಪ್ಯಾದೆಯು ಈ ರಸ್ತೆಯಲ್ಲಿ ಈ ಹೊತ್ತಿನಲ್ಲಿ ಬರುತ್ತಾನೆ ಅಂತ ಗೊತ್ತಿತ್ತು. ಅಯ್ಯನೋರು ಚಂದ್ರಗುತ್ತೀಗೆ ಹೋಗಿದ್ದಾರೆ ಅಂತ ಪ್ಯಾದೆಯು ಈ ಮನೇ ಮೇಲೆ ಕಣ್ಣು ಹಾಯಿಸೋದು ಸ್ವಾಭಾವಿಕ. ಒಳಗೇನಾದರೂ ಶಬ್ದ ಆಗ್ತಿದೆ ಅಂತ ಅವನಿಗೆ ಅನ್ನಿಸಿದ್ರೆ, ಅವನಿಲ್ಲೇ ಪಹರೆ ಕಾದುಬಿಟ್ರೆ, ಅಥವಾ ಮನೆ ಸುತ್ತ ಗಸ್ತು ಬಂದರೆ ಇಬ್ಬರೂ ಸಿಕ್ಕಿಹಾಕೊಂಡು ಬಿಡುತ್ತಿದ್ದೆವು. ಅದಕ್ಕೇ ಮನೆಯಾತನ ತರಹ ವಸ್ತ್ರಗಳನ್ನು ಧರಿಸಿ, ಅವನನ್ನು ಉಪಾಯವಾಗಿ ಒಳಕ್ಕೆ ಕರೆದುತಂದು ಬಚ್ಚಲಮನೇಲಿದ್ದ ಕನ್ನ ತೋರಿಸಿದೆ. ಬಗ್ಗಿದಾಗ ಅವನ ಮೆಡಶಿರಕ್ಕೆ ಒಂದು ಮಡಗಿದೆ. ಧೊಪ್ಪಂತ ಬಿದ್ದ. ಅವನ ರುಮಾಲಿನಲ್ಲೇ ಅವನ ಕೈಕಾಲು ಕಟ್ಟಿ, ರುಮಾಲಿನ ತುದಿಯನ್ನು ಅವನ ಬಾಯಿಗೆ ತುರುಕಿದೆ. ಎಚ್ಚರಗೊಂಡು, ಅವನು ಕೂಗೋ ಹೊತ್ತಿಗೆ ನಾವು ಬೇರೆ ಊರು ಸೇರಿರ್ತೀವಿ. ಜಾತ್ರೆಯಿಂದ ಹಿಂತಿರುಗುವವರ ಜತೆ ಸೇರಿ ತಲೆ ತಪ್ಪಿಸಿಕೊಳ್ಳಬಹುದು. ಮೊದಲೇ ನಿನಗೆ ಇದನ್ನೆಲ್ಲಾ ಹೇಳಿದ್ದರೆ ನೀನು ಕಳ್ಳನ ತರಹ ಆಡ್ತಿರಲಿಲ್ಲ. ನಿನ್ನ ಮುಖ ಚರ್ಯೆಯಿಂದ ಪ್ಯಾದೆಗೆ ಅನುಮಾನ ಬರಬಹುದಿತ್ತು," ಎಂದು ಲಾಂದ್ರದವ ಎಲ್ಲವನ್ನೂ ವಿಷದವಾಗಿ ಹೇಳಿದ.

ಶಾಲಿನ ಮೇಲಿದ್ದ ವಸ್ತುಗಳನ್ನೆಲ್ಲಾ ಕಳ್ಳನೇ ಎರಡು ಭಾಗ ಮಾಡಿ, ಬೇರೆ ಬೇರೆ ಗಂಟುಗಳನ್ನು ಕಟ್ಟಿದ.

"ನಿನ್ನ ಗಂಟು ತೆಗೆದುಕೊಂಡು, ಹಿತ್ತಿಲ ಬಾಗಿಲಿಂದ ಹೊರಟುಹೋಗು. ಇಲ್ಲೇ ಸ್ವಲ್ಪ ಹೊತ್ತು ಇದ್ದು, ಎಲ್ಲಾ ವ್ಯವಸ್ಥೆ ಮಾಡಿ ನಾನು ಆಮೇಲೆ ಹೋಗ್ತೀನಿ" ಎಂದು ಲಾಂದ್ರದವ ಹೇಳಿದ.

ಕಳ್ಳ ಹೊರಟುಹೋದ ಮೇಲೆ ಹಿತ್ತಿಲ ಬಾಗಿಲನ್ನು ಹಾಕಿಕೊಂಡುಬಂದ. ಬಚ್ಚಲ ಮನೆಯಲ್ಲಿ ಪ್ಯಾದೆಯು ಸರಿಯಾಗಿ ಉರಿಸಾಡುತ್ತಿದ್ದುದನ್ನು ನೋಡಿ, ಆ ಬಾಗಿಲನ್ನೂ ಹಾಕಿಕೊಂಡು ತೊಟ್ಟಿಗೆ ಬಂದ. ಅಲ್ಲಿ ವೇಷ ಬದಲಾಯಿಸಿಕೊಂಡ. ತಲೆಗೆ ಲಪ್ಪಟ್ಟೆ ಕಟ್ಟಿದ. ತನ್ನ ಗಂಟನ್ನು ಬಿಚ್ಚಿ ಹಳೇಬಟ್ಟೆಗಳನ್ನು ಸೇರಿಸಿ ದೊಡ್ಡ ಮೂಟೆ ಕಟ್ಟಿದ. ದಟ್ಟಿ ಪಂಚೆ ಉಟ್ಟ. ಗಂಟನ್ನು ಬೆನ್ನ ಮೇಲೆ ಅಗಸರ ತರಹ ಹೊತ್ತು, ಹೊರಕ್ಕೆ ಬಂದ. ಬೀದಿ ಬಾಗಿಲಿಗೆ ಬೀಗ ಹಾಕಿದ. ನಂತರ ಸೊರಬದ ಕೆರೆಯ ಕಡೆ ಹೊರಟಾಗ ಹಕ್ಕಿಗಳೆಲ್ಲಾ ಚಿಲಿಪಿಲಿಗುಟ್ಟುತ್ತಿದ್ದುವು.

* * * *



ಹಿತ್ತಿಲಬಾಗಿಲಿಂದ ಹೊರಬಿದ್ದ ಕಳ್ಳ ತುಳಸೀತೋಟ ದಾಟಿ, ಊರಾಚೆ ಇದ್ದ ಅಶ್ವತ್ಥಕಟ್ಟೆಗೆ ಹೋಗಿ, ನಾಗರ ಕಲ್ಲುಗಳ ಹಿಂದೆ ಮರೆಯಲ್ಲಿ ಮಲಗಿದ. ಕೋಳಿಕೂಗುವ ಹೊತ್ತಿಗೆದ್ದು ತನ್ನ ಗಂಟುಬಿಚ್ಚಿ ನೋಡಿದ. ಸಾಕಷ್ಟು ಸಂಪಾದನೆಯಾಗಿತ್ತು. ಊರಿಗೆ ಹೋಗಿ ಅಣ್ಣನಿಗೂ ಪೂಜಾರಪ್ಪನಿಗೂ ತನ್ನ ಸಾಹಸದ ಮೊದಲ ಸಂಪಾದನೆ ತೋರಿಸಿದರೆ ಸಂತೋಷಪಡುತ್ತಾರೆ ಎಂದಂದುಕೊಂಡು ಹಿಗ್ಗಿದ. "ಅರೆ! ಲಾಂದ್ರದವನ ಹತ್ತಿರ ಇದ್ದ ವ್ಯಾಘ್ರನಖ ಗಿಟ್ಟಿಸಿದೆನಲ್ಲಾ ಅದೆಲ್ಲಿ?" ಎಂದು ತಡಕಾಡಿದ. ಸಿಗಲಿಲ್ಲ ಆ ಮೇಲೆ ನೆನಪಾಯ್ತು. ಒಳಜೇಬಿಗೆ ಕೈ ಹಾಕಿದ, ಸಿಕ್ಕಿತು. ಹೊರಕ್ಕೆ ತೆಗೆದ. ಗಂಧದ ಮರದಲ್ಲಿ ಮಾಡಿದ ನಾಜೂಕು ಪ್ರಭಾವಳಿ! "ಎಲಾ! ಇದನ್ನು ನೋಡಿಯೇ ನಾನು ಅಷ್ಟು ಭಯ ಬಿದ್ದೆನಲ್ಲಾ!" ಎಂದು ಖಿನ್ನನಾದ.

ತನ್ನೂರ ಕಡೆ ಹೊರಟ.

* * * *

ಮಾರನೆ ದಿನ ಬೆಳಗಿನ ಝಾವ ಅಯ್ಯನೋರ ಮನೆ ತುಳಸೀತೋಟದಲ್ಲಿ, ಹೂವು ತುಳಸಿ ಕದ್ದುಕೊಂಡು ಹೋಗಿ, ತಮ್ಮ ಮನೆದೇವರನ್ನು ಪೂಜೆಮಾಡುವ ಊರ ಮುದುಕರೊಬ್ಬರು ವಾಡಿಕೆಯಂತೆ ಬಂದಾಗ ಅಯ್ಯನೋರ ಮನೇಲಿ ಏನೋ ನರಳಾಟ, ಏನೋ ಒದರಾಟ ಕೇಳಿಸಿತು. ರೇಣುಕಮ್ಮನ ಜಾತ್ರೆಗೆ ಮನೆಯೋರೆಲ್ಲಾ ಹೋಗಿದ್ದಾರೆ ಅಂತ ಗೊತ್ತಿತ್ತು. ದೆವ್ವದ ಕಾಟಾನೋ ಭೂತದ ಆಟಾನೋ ಎಂದು ಒಂದು ಕ್ಷಣ ಅನ್ನಿಸಿತು. ವಯಸ್ಸಾದವರು; ನಮ್ಮನ್ನು ಬಿಟ್ಟರೆ ಬೇರೆ ಭೂತ ಎಲ್ಲಿ? ಎಂದು ತ್ರಿಳಿವಳಿಕೆ ಬಂದಿದ್ದವರು. ಆದರೂ ನಮಗ್ಯಾಕೆ ಇದರ ಗೊಡವೆ? ಎಂದು ರಸ್ತೆಗೆ ಮೆಲ್ಲಗೆ ಬಂದರು.

ದನಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಹಾಲಿನವನು ಮುದುಕರನ್ನು ಕಂಡು "ಏನ್ಸೋಮಿ! ಅಯ್ನೋರ ಮನೆ ತೋಟದಲ್ಲಿ ಕದ್ದು ಮುಗಿಸಿದ್ರಾ?" ಎಂದು ಹೀಯಾಳಿಸುವ ದನಿಯಲ್ಲಿ ನಗುತ್ತ ಕೇಳಿದ. ಮುದುಕರಿಗೆ ತುಸು ಕೋಪ ಬಂದಿತ್ತು. ಈ ದಿನ ಕದ್ದೇ ಇರಲಿಲ್ಲ. ಅದಕ್ಕೇ ಗುಡುಗುಡುತ್ತಾ ಹೇಳಿದರು "ಅಯ್ನೋರ ಮನೆ ಒಳಗಿಂದ ಯಾರೋ ಸಂಕಟ ಪಡ್ತಾ ನರಳೋ ಶಬ್ದ ಕೇಳಿಸ್ತು. ಅದಕ್ಕೇ ನೋಡೋಣ ಅಂತ ಹೋದೆ; ಅಷ್ಟರಲ್ಲೇ ಯಾರನ್ನಾದರೂ ಕರಕೊಂಡು ಹೋದರೆ ವಾಸಿ ಅಂತ ಬರ್ತಿದ್ದೆ. ಇನ್ನೊಬ್ಬರಿಗೆ ಸಹಾಯ ಮಾಡುಕ್ಕ ಹೋದರೆ ಅಪಖ್ಯಾತಿ ತಪ್ಪಿದ್ದಲ್ಲ" ಎಂದು ಗೊಣಗುತ್ತಾ ಹೊರಟೇ ಹೋದರು.

ಹಾಲಿನವ ತಾನು ಹೋದ ಮನೆ ಮನೆಯಲ್ಲೂ ಈ ಸುದ್ದಿ ಹೇಳಿದ. ಬಣ್ಣಕಟ್ಟಿ ಹೇಳಿದ. ಕೊತ್ವಾಲರ ಠಾಣೆಗೂ ಈ ಸುದ್ದಿ ಹೋಯ್ತು. ಆಗ ದಫೇದಾರನೊಬ್ಬನೇ ಅಲ್ಲಿದ್ದ. ಅವನೇ ಜಮೇದಾರ್‍ರ ಮನೆಗೆ ಹೋಗಿ ತಿಳಿಸಿದ. ಇಬ್ಬರೂ ಠಾಣೆಗೆ ಹಿಂತಿರುಗಿ ಬಂದು ಅಯ್ನೋರ ಮನೆ ಬೀದೀಲಿ ಗಸ್ತುಹೋದ ಪ್ಯಾದೆ ಹಿಂತಿರುಗಿ ಬಂದಿದ್ದಾನೊ ಅಂತ ನೋಡಿದರು. ಆ ಪ್ಯಾದೆ ಹಿಂತಿರುಗಿತ್ತಿಲ್ಲ! ನಾಲ್ಕು ಜನ ಇತರ ಪ್ಯಾದೆಗಳನ್ನು ಕರೆದುಕೊಂಡು ಅಯ್ಯನೋರ ಮನೆಗೆ ಹೋದರು. ಹೊರಬಾಗಿಲ ಬೀಗ ಹಾಕಿತ್ತು.

ಮನೆ ಸುತ್ತ ನಡೆದರು. ಹಿತ್ತಿಲ ಬಾಗಿಲು ಹಾಕಿತ್ತು. ತುಳಸಿತೋಟದ ಕಡೆ ಬಂದಾಗ ಗೋಡೆಗೆ ಕನ್ನ ಹಾಕಿದ್ದುದು ಕಾಣಿಸಿತು.

ಅದರೊಳಗಿಂದ ಒಬ್ಬ ಪ್ಯಾದೆ ನುಗ್ಗಿದ. ಬಚ್ಚಲಮನೆಯಲ್ಲಿ ತನ್ನ ಸಹೋದ್ಯೋಗಿ ನರಳುತ್ತಾ ಕಟ್ಟುಬಿದ್ದುದನ್ನು ಕಂಡ ಪ್ಯಾದೆಯು ಹಿತ್ತಿಲ ಬಾಗಿಲನ್ನು ತೆರೆದು ಉಳಿದವರನ್ನು ಕೂಗಿ ಕರೆದು, ಕಟ್ಟುಗಳನ್ನೆಲ್ಲಾ ಬಿಚ್ಚಿ ತಲೆಗೆ ನೀರನ್ನು ತಟ್ಟಿದ. ಗಸ್ತು ಪ್ಯಾದೆಯು ಎಚ್ಚರಗೊಂಡ ಮೇಲೆ ನಡೆದುದೆಲ್ಲವನ್ನು ವಿವರಿಸಿದ. ಜಮೇದಾರರಿಗೆ ಬಲು ಕೋಪ ಬಂದಿತು. "ನಾನಿಲ್ಲಿರೋವಾಗ, ಅಯ್ನೋರ ಮನೆಗೆ ಕನ್ನಹಾಕಿ ದೋಚಿದ್ದಾರಲ್ಲ! ನನ್ನ ಮಾನಾನೂ ಹೋಯ್ತಲ್ಲ! ಎಂದಾದರೂ ಈ ಕದೀಮ ಕಳ್ಳರನ್ನು ಹಿಡಿಯಬೇಕು" ಎಂದು ಶಪಥ ಮಾಡಿದರು. ಮನೆಯಾತನವೇಷ ಹಾಕಿದವನೂ, ಕಳ್ಳನೆಂದು ಕಟ್ಟುಹಾಕಲ್ಪಟ್ಟಿದ್ದವನೂ ಶಾಮೀಲಾಗಿದ್ದರೋ, ಅಥವಾ ಇನ್ನೇನಾದರೂ ಆಗಿರಬಹುದೋ ಅದನ್ನೆಲ್ಲಾ ತಿಳಿಯಬೇಕು ಎಂದುಕೊಂಡರು.

* * * *

ಕೊಂಡೆನಕಪಲ್ಲಿಯಲ್ಲಿ ಭೈರವಿಯ ಸಂಜೆಪೂಜೆಯನ್ನು ಮುಗಿಸಿ, ಪೂಜಾರಪ್ಪನು ಜಗುಲಿ ಮೇಲೆ ಕುಳಿತಿದ್ದ. ಅತ್ತ ಹಾದೀಲಿ ಸರಸರ ನಡೆದು ಬರುತ್ತಿದ್ದ ಯುವಕನೊಬ್ಬ ಹತ್ತಿರ ಬಂದಾಗ ಇವನಿಗೆ ಅಡ್ಡಬಿದ್ದ. ಹೊತ್ತುತಂದಿದ್ದ ಗಂಟೊಂದನ್ನು ಇವನ ಕಾಲ ಬಳಿ ಇರಿಸಿದ. ಯುವಕನ ತಲೆ ಮುಟ್ಟಿಹರಸಿ, ಪೂಜಾರಪ್ಪ ಕೇಳಿದ "ಕನ್ನೋಜಿ! ಏನೇನು ಮಾಡಿಕೊಂಡು ಬಂದೆ? ಜಗ್ಗೋಜಿ ಜತೆಯಲ್ಲಿ ಹೊರಟವನು, ಒಬ್ಬನೇ ಹಿಂತಿರುಗಿದ್ದೀ! ಮೊದಲ ಯಾತ್ರೆ ನಿನ್ನದು. ಏನೆಲ್ಲಾ ಆಯಿತು ಹೇಳು" ಎಂದು.

ಕನ್ನೋಜಿ ವಿವರವಾಗಿ ಹೇಳಲು ಆರಂಭಿಸಿದ.

"ಅಣ್ಣನ ಜತೆಗೆ ಹೊರಟೆವು. ಬತ್ತಿಹೋದ ಕೆರೆಏರಿ ತುದಿಯಲ್ಲಿದ್ದ ಮಂಟಪದಲ್ಲಿ ಉಳಿದುಕೊಂಡೆವು. ಒಂದು ಚಣ ನನ್ನ ಮುಖಾನೇ ನೋಡಿ ಅಣ್ಣ ಹೇಳಿದ, "ಕನ್ನೊ, ಚಿಗುರುಮೀಶಿ ಬರ್ತಾ ಇದೆ. ಧೈರ್ಯಾನೂ ಈಗ ಬರಬೇಕು. ಜಾಣತನವನ್ನು ಕಲಿತುಕೋಬೇಕು. ಈಗ, ನನ್ನ ಜತೆಗೇ ಇದ್ದರೆ ಧೈರ್ಯಬರುತ್ತೋ ಇಲ್ಲವೋ? ಅದಕ್ಕೆ ನಾನಿಲ್ಲೇ ಉಳಿದುಕೋತೀನಿ. ನಿನ್ನ ಪಾಡಿಗೆ ನೀನು ಕೆಲಸ ಮಾಡಿಕೋ. ಕೆಲಸ ಮುಗಿದ ಮೇಲೆ ಊರಿಗೆ ಹೋಗಿ ಪೂಜಾರಪ್ಪನ್ನ ಕಾಣು. ಹಿಂದಾಗಡೆಯಿಂದ ಸುತ್ತಿಕೊಂಡು ನಾನು ಆ ಮೇಲೆ ಬರ್ತೀನಿ' ಎಂದು ಹೇಳಿ ನನ್ನನ್ನು ಕಳಿಸಿಬಿಟ್ಟ. ಕೆರೆ ಏರಿಗೂ ಸೂರಬಕ್ಕೂ ಮಧ್ಯೆ ದೊಡ್ಡ ಅಶ್ವತ್ಥಕಟ್ಟೆ ಇತ್ತು. ಆಳೆತ್ತರದ ನಾಗರ ಕಲ್ಲುಗಳನ್ನು ಬೇಕಾದಷ್ಟು ನಟ್ಟಿದ್ದರು. ಆ ಕಲ್ಲುಗಳ ಮಧ್ಯೆ ಯಾರ ಕಣ್ಣಿಗೂ ಬೀಳದೆ ಇರಬಹುದು ಎಂದು ತೋರಿತು. ಅಲ್ಲೇ ಉಳಕೊಂಡೆ. ಕಲ್ಲೆಸೆಯೋ ಅಷ್ಟು ದೂರದಲ್ಲೇ ಅಣ್ಣಮ್ಮನ ಗುಡಿ ಇತ್ತು. ಅಣ್ಣಮ್ಮನ ಗುಡಿ ದಾಸಯ್ಯನ ಹಾಗೆ ವೇಷ ಹಾಕ್ಕೊಂಡು ಊರು ತಲಾಷೆ ಮಾಡಬಹುದು ಅಂತ ತೋಚಿತು, ಹಾಗೇ ಮಾಡಿದೆ. ಅಯ್ಯನೋರ ಮನೆಗೆ ಬೀಗ ಹಾಕಿದ್ದು ನೋಡಿದೆ, ರೇಣುಕಮ್ಮನ ತೇರಿಗೆ ಹೋಗಿದ್ದಾರೆಂದೂ ತಿಳಿಯಿತು. ವಿಭೂತಿ ಪಟ್ಟೇನ ಬಾಗಿಲಿಗೆ ಹಚ್ಚಿದೆ, ರಾತ್ರಿ ಗುರುತು ಸಿಕ್ಕಲಿ ಅಂತ. ಅಲ್ಲಿ ಯಾರೂ ಆಗ ಇತ್ತಿಲ್ಲ -



ಮರೆತೆ, ಸೌದೆ ತಂದಿದ್ದ ಹಳ್ಳಿಮುಕ್ಕ ಒಬ್ಬ ಇದ್ದ, - ಮಂಕ ಅಂದರೆ ಮಂಕ ಅವ. ರಾತ್ರಿ ಮೂರನೆ ಝಾವದ ಹೊತ್ತಿಗೆ ಕನ್ನ ಹಾಕಿ ಮನೆ ಹೊಕ್ಕೆ ಆ ಮೇಲೆ ನಡೆದುದೆಲ್ಲವನ್ನೂ ವಿಶದವಾಗಿ ಹೇಳಿದ....

"ಅಮ್ಮನ ಆಶೀರ್ವಾದ, ನಿಮ್ಮ ಹರಕೆ, ಅಣ್ಣನ ರಕ್ಷೆ! ಸಿಕ್ಕಿಹಾಕಿಕೊಂಡಿದ್ದರೂ ಸುಲಭವಾಗಿ ತಪ್ಪಿಸಿಕೊಂಡು, ಸಂಪಾದನೇನೂ ಮಾಡಿಕೊಂಡು ಬಂದೆ" ಎಂದ ಕನ್ನೋಜಿ.

ನಿರ್ಜನವಾಗಿದ್ದ ಆ ರಸ್ತೆಯಲ್ಲಿ ಇವರ ಕಡೆಗೇ ಯಾರೋ ಬರುತ್ತಿದ್ದ ಹಾಗೆ ಕಾಲು ಸಪ್ಪಳ ಕೇಳಿಸಿತು. ಇಬ್ಬರೂ ಮಾತು ನಿಲ್ಲಿಸಿದರು. ಕಾಲು ಸಪ್ಪಳ ಚೆನ್ನಾಗಿ ಕೇಳಿಸುತ್ತಾ ಬಂತು, ಹತ್ತಿರಕ್ಕೇ ಬಂತು. ಬಂದ ಆಗಂತುಕ ಪೂಜಾರಪ್ಪನಿಗೆ ಅಡ್ಡ ಬಿದ್ದು,

"ಪು ಪು ಪೂಜಾರಪ್ಪನೋರಾ! ಕಖಕನ್ನು ಬಂದನಾ ಅಂತ ನೋಡುಕ್ಕೆ ಭ ಭ ಭಂದೆ," ಎಂದು ಹೇಳುತ್ತಾ ತಂದಿದ್ದ ಗಂಟೊಂದನ್ನು ಕಾಲ ಬಳಿ ಇರಿಸಿದ.

ಬಿರಿ ಬಿರಿಯಾಗಿ ಪೂಜಾರಪ್ಪ ನಕ್ಕ, ಸಮಾಧಾನಕ್ಕೆ ಬಂದ ಮೇಲೆ "ನೀನೇನು ಮಾಡಿಕೊಂಡು ಬಂದೆ ಜಗ್ಗೋಜಿ? ಕನ್ನು ಇನ್ನೂ ಹರೆಯ ಹುಡುಗ, ಅವನ ಜತೇಲಿ ಇರು ಅಂತ ಹೇಳಿತ್ತಿಲ್ವಾ ನಾನು, ಅವನಿಗೆಲ್ಲಾ ಕಲಿಸಿಕೊಡು ಎಂದು ಎರಡೆರಡು ಬಾರಿ ಹೇಳಿತ್ತಿಲ್ವಾ? ತಬ್ಬಲಿ ಮಗ, ತುಂಬಾ ಎಚ್ಚರದಿಂದಿರು ಅಂತೆಲ್ಲಾ ಹೇಳಿದ್ರೂನೂ, ಅವನ್ನೊಬ್ಬನೇ ಬಿಟ್ಟು ಹೋದೆಯಂತೇ! ಏನೆಲ್ಲಾ ಕಷ್ಟದಲ್ಲಿ ಸಿಕ್ಕಿಹಾಕಿಕೊಂಡ ಅವ. ಎಲ್ಲಾನೂ ಈಗ ತಾನೇ ಹೇಳಿದ" ಎಂದು ನುಡಿದ.

"ಅಣ್ಣಾ! ಹಳ್ಳಿಮುಕ್ಕ, ಸೌ ಸೌದೆಕಟ್ಟು!" ಎಂದು ಕನ್ನೋಜಿ ಆಶ್ಚರ್ಯದಿಂದ, ಬೆರಗಾಗಿ ಪಲುಕಿದ. ಜಗ್ಗೋಜಿಯು ತನ್ನ ವರದಿಯನ್ನು ಒಪ್ಪಿಸಲು ಪ್ರಾರಂಭಿಸಿದ.

"ಕಲಿಸಿಕೊಡು ಧೈರ್ಯಾನ ಅಂತ ಹೇಳಿದ್ದೀರಿ. ಅದಕ್ಕೇ ಅವನ ಮೋರೆ ಮೇಲಿನ ಮೀಶೆ ಕಂಡಾಗ, ನಿನ್ನ ಪಾಡಿಗೆ ನೀನು ಕೆಲಸ ಮಾಡಿಕೋ ಎಂದು ಕೆರೆ ಏರಿ ಮಂಟಪದಿಂದ ಕಳಿಸಿದೆ. ಆದರೂ ಒಂದು ಕಣ್ಣು ಇಟ್ಟಿರೋಣ, ಹಾಗೂ ಏನಾದರೂ ಸಂಪಾದನೆ ಸಿಗೋಹಾಗಿದ್ರೆ ಅದನ್ನೂ ಮಾಡೋಣ ಅಂತ ಹಳ್ಳಿಮುಕ್ಕನ ಹಾಗೆ, ಸೌದೆ ಕಟ್ಟು ಹೊತ್ತುಕೊಂಡು, ಬೀಗ ಹಾಕಿದ್ದ ಅಯ್ನೋರ ಮನೆ ಜಗಲಿ ಮೇಲೆ ಮದ್ದಂಗಿ ಕಡೆಬೇರನ್ನ ಅಗಿಯುತ್ತಾ ಬಿದ್ದುಕೊಂಡೆ. ನಾಲಿಗೆ ದಪ್ಪ ಆಯಿತು, ಒಣಗ್ತಾನೂ ಇತ್ತು. ತೊದಲುಕ್ಕೆ ಅನುಕೂಲಾನೂ ಆಯ್ತು. ಡಂಗುರ ಸಾರುತ್ತ ಇವ ಬಂದಾಗ ಅಣ್ಣಮ್ಮನ ಗುಡಿಯವನೋ ಏನೋ ಎಂದುಕೊಂಡೆ. ಆದರೆ ಬಾಗಿಲಿಗೆ ವಿಭೂತಿಪಟ್ಟೆ ಇಟ್ಟಾಗ ಇವನೇ ಕನ್ನು ಎಂದು ಗೊತ್ತಾಗಿ ಹೋಯ್ತು. ಅಣ್ಣಮ್ಮನ ಗುಡೀಲಿ ವಿಭೂತಿ ಎಲ್ಲಿ? ಎಲ್ಲಾ ಕೆಂಪು ಅಲ್ಲಿ!! ಹಸಿಹುಡುಗ, ಬಿಸಿ ನೆತ್ತರಿದೆ. ಅದಕ್ಕೇ ಕಾವಲು ಕಾಯೋಣ ಅಂತ ಅಯ್ನೋರ ಮನೇನೇ ನಾನು ಆಯ್ದುಕೊಂಡೆ. ಮೊದಲ ಜಾಮದಲ್ಲೇ ಹೊರಬೀಗ ತೆಗೆದು ಅಯ್ನೋರ ಮನೇಲೆಲ್ಲಾ ನಡೆದಾಡಿ ಹುಡುಕಿದೆ, ಅಯ್ನೋರ ಬಟ್ಟೆ ಹಾಕ್ಕೊಂಡು ಕಾದೆ, ಮೂರನೆ ಝಾವದಲ್ಲಿ ಬಚ್ಚಲಮನೆಗೆ ಕನ್ನ ಬಿತ್ತು. ಕೊತ್ವಾಲನ ಪ್ಯಾದೆಯು ಅತ್ತ ಗಸ್ತು ಬರುತ್ತಾನೆ ಅಂತ ಕನ್ನುವಿಗೆ ಗೊತ್ತಿರಲಿಲ್ಲ. ತಿಳಿದುಕೊಂಡೂ ಇತ್ತಿಲ್ಲ, ಇಲ್ಲದೆ ಇದ್ದರೆ

ಎರಡನೇ ಝಾವದಲ್ಲೇ ಕೆಲಸ ಶುರು ಹಚ್ಚುತ್ತಿದ್ದ. ಅದಕ್ಕೇ ಆ ಆಟ ಹೂಡಿದ. ಪ್ಯಾದೆಯನ್ನು ಬಚ್ಚಲಮನೆ ಕಡೆಗೆ ಕರೆದುಕೊಂಡು ಹೋದಾಗ ಬಲಗಣ್ಣು ಹುಬ್ಬು ಹಾರಿಸಿದೆ. ಆಗ ಕನ್ನುವಿನ ಮುಖ ನೋಡಿದ್ದರೆ ಯಾವ ಮಗುವಾದರೂ ಇವನನ್ನ ಕಂಡುಹಿಡಿಯುತ್ತಿತ್ತು. ಅದಕ್ಕೇ ಅಲ್ಲೇ ಇದ್ದು ಎಲ್ಲ ಮುಗಿಸಿ, ಅವನನ್ನು ಸುರಕ್ಷಿತವಾಗಿ ಕಳಿಸಿಕೊಟ್ಟ ಮೇಲೆ ನಾನು ಹೊರಬಿದ್ದೆ. ಅಮ್ಮನ ಚೊಚ್ಚಲು ನಾನು, ನನ್ನ ಬೆನ್ನಹಿಂದ ಕನ್ನು ಅಂದು ಬಿದ್ದಿದ್ದ. ಈಗ ಅವನ ಬೆನ್ನ ಹಿಂದೆ ನಾನು ನಡೆದು ಬಂದೆ, ನೀವು ಹೇಳಿದ್ದನ್ನೆಲ್ಲಾ ಮಾಡಿದ್ದೀನಿ" ಎಂದು ವರದಿ ಮುಗಿಸಿದ.

ಜಗ್ಗೋಜಿಯ ತಲೆಯನ್ನು ನೇವರಿಸಿದ ಪೂಜಾರಿ, ಇಬ್ಬರ ಮುಖವನ್ನೂ ಆದರದಿಂದ ನೋಡುತ್ತಾ,

"ಅಮ್ಮನ ಕಟ್ಟಳೆ ಮುರಿಯಬೇಡಿ, ಅಮ್ಮ ಕಾಪಾಡ್ತಾಳೆ" ಎಂದು ಅನುಭವದಿಂದ ಕಲಿತ ಬುದ್ಧಿಯ ಮಾತನ್ನು ನುಡಿದ.

# "ಕರಿನಾಗರ ಕೊಲ್ಲಿಸಬಾರದಾಗಿತ್ತು"

ಮಾಘ ಬಹುಳ ಚತುರ್ದಶಿ. ಆವಣಿಯಲ್ಲಿ ರಾಮಲಿಂಗೇಶ್ವರನ ಜಾತ್ರೆಗೆ ಹತ್ತುಸಾವಿರ ಜನ, ಇಪ್ಪತ್ತು ಸಾವಿರ ದನ ಸೇರಿ, ಹದಿನೈದು ದಿನಗಳು ಪರಪೆ ನಡೆಯುತ್ತದೆ.

ಇಲವಂಜಿ ರಾಯರು ಹೂತಿಟ್ಟಿದ್ದ ನಿಧಿಯು ಯಾರ ಕೈಗೆ ದಕ್ಕುತ್ತೋ ನೋಡಬೇಕು ಎನ್ನುತ್ತಿದ್ದರು ಜನ.

"ಅತ್ತೆ ಮನೆಗೆ ಹೋಗೋವಾಗ ತಿಮ್ಮಣ್ಣ! ಹೆಂಗೆ ಹೊಗ್ತಿ" ಎಂದ, ಕೋತಿ ಆಡಿಸುವವ.

ಬೆನ್ನಿನ ಮೇಲೊಂದು ಸಣ್ಣ ಗಂಟನ್ನು ಹೊತ್ತುಕೊಂಡು ಕೋತಿಯು ಗುಡುಗುಡು ಅಂತ ಸಡಗರದಿಂದ ಒಂದು ಸುತ್ತು ಹೊಡೆಯಿತು.

ಸುತ್ತಲೂ ಸೇರಿದ್ದ ಜನರೆಲ್ಲಾ ನಕ್ಕರು.

"ಸುಲ್ತಾನನ ದರ್ಬಾರಿಗೆ ಹೋಗ್ಬೇಕಾದ್ರೆ ತಿಮ್ಮಣ್ಣ! ಹೆಂಗೆ ಹೋಗ್ತಿ," ಎಂದು ನುಡಿದ ಆಡಿಸುವವ.

ನೆಲದಿಂದ ತಲೆ ತನಕ ಬಲಗೈಯನ್ನು ಹೆಜ್ಜೆ ಹೆಜ್ಜೆಗೂ ಸಲಾಂ ಆಡಿಸುತ್ತ, ಮೂರು ಮೂರು ಹೆಜ್ಜೆಗೆ ಖುರ್ನೀಷ್ ಮಾಡುತ್ತಾ, ಒಂದು ಸುತ್ತು ಹೊಡೆಯಿತು. ಆಡಿಸೋನ ಎದುರಿಗೆ ಮೊಣಕೈ, ಹಿಂಗಾಲುಗಳ ಮೇಲೆ ಬಗ್ಗಿ ನಮಸ್ಕರಿಸುವಂತೆ ನಿಂತಿತು.

ಸುತ್ತಲೂ ನೆರೆದಿದ್ದ ಜಾತ್ರೆಯ ಜನರೆಲ್ಲಾ ಘೊಳ್ಳಂತ ನಕ್ಕರು.

"ತಿಮ್ಮಣ್ಣಾ! ಈ ಗಣೆ ಮರ ಹತ್ತಿ, ದೂರದಲ್ಲಿ ಯಾರಾದರೂ ಇಂಗ್ಲೀಷ್ ಸಿಪಾಯಿಗಳು ಬರ್ತಿದಾರಾ ನೋಡು" ಎಂದು ಹೇಳುತ್ತಾ ಆಡಿಸುವವ ದೊಡ್ಡ ಬೊಂಬೊಂದನ್ನು ನೆಲದ ಮೇಲೆ ನೆಟ್ಟಗೆ ನಿಲ್ಲಿಸಿ ಹಿಡಿದುಕೊಂಡ.

ಕೋತಿ ಸರಸರ ಅಂತ ಬೊಂಬನ್ನು ಹತ್ತಿ, ತುದಿಯಲ್ಲಿ ಕುಳಿತು, ಹುಬ್ಬಿಗೆ ಬಲ ಅಂಗೈನೆರಳು ಹಾಕಿಕೊಂಡು ಸುತ್ತಲೂ ನೋಡಿತು.

"ನಿನ್ನ ಹಂಗೇ ಇರ್ತಾರೆ ತಿಮ್ಮಣ್ಣಾ! ಇಂಗ್ಲೀಷ್ ಸಿಪಾಯಿಗಳು, ಗುರ್ತು ಹಿಡಿಯೋದು ಬಲು ಸುಲಭ" ಎಂದ ಕೋತಿ ಆಡಿಸುವವ.

ಕೋತಿ ತಲೆಯನ್ನು ಅಡ್ಡಡ್ಡವಾಗಿ ಆಡಿಸಿತು. ಯಾರೂ ಇಲ್ಲ ಎನ್ನುವಂತೆ. ರಾಮಲಿಂಗೇಶ್ವರನ ಜಾತ್ರೆಗೆಂದು ಬಂದಿದ್ದ ಸುಮಾರು ಜನರೆಲ್ಲಾ ಗಹಗಹಿಸಿ ನಕ್ಕರು. ತಮ್ಮನ್ನೆಲ್ಲಾ ಈಗ ಆಳುತ್ತಿರುವವರ ಮೇಲೆ ಯಾರಾದರೂ ಪರಿಹಾಸ್ಯವೆಸಗಿದರೆ, ಏನೋ ಸಂತೋಷ ಕೆಳಗೆಬಿದ್ದ ಜನರಿಗೆ. ಸಂತೋಷದಿಂದ ಅಲೆಯಲೆಯಾಗಿ ನಕ್ಕರು.

ಕೋತಿ ಇಳಿದು ಬಂದಿತು. ಆಡಿಸುವವನ ಹತ್ತಿರ ಇದ್ದ ಡಬ್ಬವೊಂದನ್ನು ಹಿಡಿದು ನಗುತ್ತಿದ್ದ ಜನರ ಹತ್ತಿರ ಭಿಕ್ಷೆ ಬೇಡುತ್ತಾ ಸುತ್ತು ಹೊಡೆಯಿತು. ಡಬ್ಬವು ಅರ್ಧ ಭರ್ತಿಯಾಗಿತ್ತು ಎರಡು ಪ್ರದಕ್ಷಿಣೆ ಹೊಡೆಯುವುದರಲ್ಲಿ ಯಜಮಾನನ ಕಾಲಿನ ಬಳಿ ಡಬ್ಬವನ್ನು ಕೋತಿಯು ತಂದಿಟ್ಟಿತು.

"ಭೇಷ್! ತಿಮ್ಮಣ್ಣಾ! ಸಾವಿರ ಕುದುರೆ ಸರದಾರನಾದರೂ ಮನೆ ಹೆಂಡತಿ ಹತ್ತಿರ ತಿಂಗಳ ಪಗಾರ ಒಪ್ಪಿಸೋ ಹಂಗೆ, ನನ್ನ ಬಳಿ ಸಂಪಾದಿಸಿದ್ದನ್ನೆಲ್ಲಾ ನೀ ಕೊಡ್ತೀಯಲ್ಲಾ!" ಎಂದು ಕೋತಿ ಆಡಿಸುವವ ಹೇಳುತ್ತಾ, ಡಬ್ಬವನ್ನೆಲ್ಲಾ ತನ್ನ ಕಿಸೆಗೆ ಬಗ್ಗಿಸಿಕೊಂಡ.

ಇದನ್ನು ಕೇಳಿದ ಆವಣಿ ಜಾತ್ರೆಗೆ ಬಂದಿದ್ದ ರೈತ ಜನರೆಲ್ಲಾ ಬಿಕ್ಕಿಬಿಕ್ಕಿ ಪಕ್ಕ ಹಿಡಿದುಕೊಂಡು ನಗುತ್ತಿದ್ದರು.

* * * *

ಲಕ-ಲಕ್ಲ-ಲ್ಲೇ-ಗಳ-ಗಲ್ಳ-ಲ್ಲೇ ಅಂತ ಕರ್ಕಶ ಕೂಗೊಂದು ಎಲ್ಲಿಂದಲೋ ಕೇ ಬಂತು. ಎಲ್ಲರ ನಗುವೂ ನಿಂತಿತು. ಕೋತಿ ಆಡಿಸುವವನು ಕಿಸೆಯ ಮೇಲೆ ಇರಿಸಿಕೊಂಡ. ಕೋತಿ ಪಿಳಪಿಳನೆ ದನಿ ಬಂದ ಕಡೆಯೇ ನೋಡುತ್ತಿತ್ತು.

ಚಿಂದಿ ಬಟ್ಟೆಗಳನ್ನು ಹೊರವಾಗಿ ಉಟ್ಟ, ಕಾಗದದಿಂದ ಮಾಡಿದ ಉದ್ದಾನ ಟೋಪಿಯನ್ನು ಧರಿಸಿದ, ಕಾಳ್ಕತ್ತಲೆಯಂತಹ ಗಡ್ಡ ಮೀಸೆ ತಲೆ ಕೂದಲು ತುಂಬಿ 20-30 ವಯಸ್ಸಿನ ಯುವಕನೊಬ್ಬ ಓಡೋಡಿ ಬಂದ.

ಕೋತಿಯ ಎದುರಿಗೆ ನಿಂತುಕೊಂಡ. ಕೂತುಕೊಂಡ.

ಕಿಚಿ ಕಿಚಿ, ಕಚ ಕಚಿ ಎಂದು ಏನೇನೋ ಶಬ್ದ ಮಾಡಿದ. ಶಬ್ದಕ್ಕೆ ತಕ್ಕ ಮುಖ ತೋರಿಸುತ್ತಾ, ಮಾರ್ದನಿ ಕೊಟ್ಟಂತೆ ಕೋತಿ ಅವನನ್ನು ಅಣಕಿಸಿತು. ಕಡೆಗೆ ಛಂಗಿ ಬಂದು ಅವನ ಬಲತೋಳ ಮೇಲೆ ಕೂತು, ಅವನ ತಲೆಯನ್ನು ಎಡಗೈಯ್ಯಲ್ಲಿ ನೇವರಿಸಿತು.

"ಇಲವಂಜಿ ಹೈದ!" ಎಂದು ಜಾತ್ರೆ ಜನರ ಗುಂಪಿನಿಂದ ಯಾರೋ ಕೂಗಿದರು. "ಅಂಥಾ ಚೆಂದಾಗಿ ಬಾಳಿದ ರಾಯರ ವಂಶದಲ್ಲಿ ಇವನ್ಯಾಕಾರೂ ಹುಟ್ಟಿದನೋ" ಎಂದು ಇನ್ಯಾರೋ ಕೂಗಿದರು.

"ಅತ್ತಕಡೆ ಕೋತಿ! ಇತ್ತಕಡೆ ಹುಚ್ಚ! ನೋಡ್ಲಾ ಮೋಜಾ!" ಎಂಬ ಕೂಗನ್ನು ಇನ್ಯಾರೋ ಮುಂದಿದ್ದವರು ನುಡಿದರು.

ಕೋತಿ ಆಡಿಸುವವನ ಹುಬ್ಬು ಗಂಟಿಕ್ಕಿತು. "ಅಷ್ಟು ದಿವಸಗಳಿಂದ ಕೋತಿಗೆ ಆಟ ಕಲಿಸುತ್ತಿದ್ದೀನಿ. ಇನ್ನೂ ಕೋತಿ ಒಲಿದಿಲ್ಲ. ಇವನ್ಯಾರೋ ಹುಚ್ಚ ಬಂದು ಕಿಚಿಕಿಚಿ ಮಾಡಿದ್ರೆ, ಅವನ ತೋಳ್ಮೇಲೆ ನಗ್ತಾ ಕೂತುಕೊಳ್ಳುತ್ತಲ್ಲಾ ನನ್ನ ಕೋತಿ!" ಎಂದೆಲ್ಲಾ ಅವನಿಗೆ ಅನ್ನಿಸಿ ಬಲು ಕೋಪ ಬಂದಿತ್ತು.

"ತಿಮ್ಮಾ ಇತ್ತ ಬಾ" ಎಂದು ಕೂಗುತ್ತಾ, ಕೋಲೊಂದನ್ನು ಹಿಡಿದುಕೊಂಡ. ಕೋತಿ ಹೆದರಿ ಬೆದರುತ್ತಾ ಯಜಮಾನನ ಹತ್ತಿರ ಬಂದು ಬಿದ್ದುಗೊಂಡಿತು.

ಇದನ್ನು ನೋಡಿದ ಇಲವಂಜಿ ಹೈದನ ಕಣ್ಣು ಮಂಜಾಯಿತು. "ಇಂಥಾ ಕೋತೀನ ಇಟ್ಟುಕೊಂಡು ವಿಶ್ವಾಸ ತೋರಿಸಬಾರ್ದಾ! ಹೆದರ್ಸಿ ಸಾಯಿಸ್ತೀಯಲ್ಲಾ," ಎಂದು ಹೇಳಿದ.

"ಲಕ... ಲಕ್ಲಲ್ಲೇ! ಗಳಗಳಲ್ಲೋ," ಅಂತ ವಿಕಟವಾಗಿ ಕೂಗುತ್ತಾ ಎತ್ತಲೋ ಓಡಿಹೋದ ಆ ಯುವಕ-ಹುಚ್ಚ!!-

* * * *

ಜಾತ್ರೆಯ ಎಂಟನೆ ದಿನ, ಕೋತಿ ಆಡಿಸುವವನಿಗೆ ಒಂದು ಹಣವೂ ಸಂಪಾದನೆಯಾಗಿರಲಿಲ್ಲ. ಮುಂದಕ್ಕೆ ಹೊರಡೋದು ವಾಸಿ ಎಂದೆನ್ನಿಸಿತು ಅವನಿಗೆ. ದವಸ ತುಂಬಿದ ಜೋಡೆತ್ತಿನ ಗಾಡಿಯೊಂದು ಹೊರಡಲು ಸಿದ್ಧವಾಗಿತ್ತು. ಗಾಡಿ



ಹೊಡೆಯುವವನ ಬಳಿಗೆ ಕೋತಿ ಆಡಿಸುವವ ಹೋಗಿ, "ಗೌಡರೇ! ಯಾವ ಊರಕಡೆ ಹೊರಟಿದ್ದೀರಿ?" ಎಂದು ಕೇಳಿದ.

"ಮುಳಬಾಗಿಲಿಗೆ ಹೋಗಿ ನಾಯ್ಕರ ಮನೆಗೆ ದವಸಾನೆಲ್ಲಾ ಹಾಕಬೇಕು. ಯಾಕೆ ಕೇಳಿದೆ?" ಎಂದು ಗಾಡಿಯವ ಕೇಳಿದ.

"ಇಲ್ಲೇನೂ ಸಂಪಾದನೆಯಾಗೋ ಹಂಗಿಲ್ಲ. ಎಲ್ಲಾರಾ ಬೇರೆ ಊರಿಗೆ ಹೋಗಬೇಕು, ಎತ್ತ ಕಡೆ ಹೋಗೋಣ ಅಂತಿದ್ದೆ. ಮುಳಬಾಗಿಲಿನಲ್ಲಿ ಏನಾರೆ ಸಿಗಬಹುದಾ? ನಮ್ಮನ್ನೂ ಕರಕೊಂಡು ಹೋಗ್ತೀಯಾ?" ಎಂದು ಕೋತಿ ಆಡಿಸುವವ ಕೇಳಿದ.

"ಮೂಟೆ ಮೇಲೆ ಕೂತುಕೊಂಡು ಬರೋದಾದರೆ, ಕರಕೊಂಡು ಹೋಗ್ತೀನಿ. ಕೋತಿ ಏನೂ ಚೇಷ್ಟೆ ಮಾಡೋದಿಲ್ಲ ತಾನೇ?" ಎಂದ ಗಾಡಿಯವ.

ಮುಳಬಾಗಿಲಿಗೆ ಹೋಗುತ್ತಾ, ಆ ಮಾತು ಈ ಮಾತು ಆಡ್ತಾ ಗಾಡಿಯವ, "ಊರ್ನಲ್ಲಿ ಕೆಂಚಾನಾಯ್ಕರು ಭಾಳ ಶ್ರೀಮಂತರು. ಸುಲ್ತಾನರು ಕೆರೆ ಏರಿ ಕಟ್ಟಿಸಿದಾಗ ಕೂಲಿಗೆ ಬಂದು ಸೇರ್ಕೊಂಡ ನಾಯ್ಕರು ಮರಾಮತ್ ದಳ್ಳಾಳಿಯಾಗಿ ಹಣ ಸಂಪಾದಿಸಿದರು. ಆಮೇಲೆ ಪಾಳುಮನೆಯೊಂದನ್ನು ಕೊಂಡುಕೊಂಡು, ದುರಸ್ತು ಮಾಡಿಸಿದಾಗ, ಗೋಡೆಯಲ್ಲಿ ಹುದುಗಿಟ್ಟಿದ್ದ ನಿಧಿ ಸಿಕ್ಕಿತು. ಈಗ ಭಾರಿಕುಳ ಆಗಿದ್ದಾರೆ" ಎಂದೆಲ್ಲಾ ಹೇಳಿದ.

"ಅವರಿಗೆ ಮಕ್ಕಳು ಮರಿ ಇಧಾರಾ? ಇಲ್ಲದೇ ಇದ್ದರೆ ಕೋತಿ ಆಡಿಸೋನಿಗೆ ಏನೂ ಪ್ರಯೋಜನವಿಲ್ಲ" ಎಂದ ಕೋತಿ ಆಡಿಸುವವ.

"ಮೂರು ಹೆಂಡಿರು, ನಾಯ್ಕರಿಗೆ. ಹತ್ತಿಪ್ಪತ್ತು ಮಕ್ಕಳಿಧಾವೆ, ಮನೇಲಿ ಅದಕ್ಕಾಕೆ ಯೋಚನೆ! ಕಿರಿಹೆಂಡ್ತಿ ಮಕ್ಕಳು ಅಂದರೆ ನಾಯ್ಕರಿಗೆ ಬಲು ಅಚ್ಚುಮೆಚ್ಚು. ಅವರನ್ನೊಲಿಸಿಕೊಂಡರೆ ಬೇಕಾದಷ್ಟು ದುಡ್ಡು ದುಗ್ಗಾಣಿ ಸಿಕ್ಕುತ್ತೆ ನಿನಗೆ" ಎಂದ ಗಾಡಿಯವ.

ಮುಳಬಾಗಿಲ ಸುಂಕದಕಟ್ಟೆ ಹತ್ತಿರ ಕೋತಿ ಆಡಿಸುವವನನ್ನು ಗಾಡಿಯವನು ಇಳಿಸಿದ. "ಊರೊಳಗೆ ಯಾರಾರೂ ಕಂಡರೆ ನನ್ನ ಮೇಲೆ ಚಾಡಿ ಹೇಳಾರು, ಯಾರನ್ನೋ ಗಾಡೀಲಿ ಬಾಡಿಗ್ಗೆ ಕೂರಿಸಿಕೊಂಡು ಬಂದಿದ್ದ, ಎಂದು" ಎಂದು ಕಾರಣವನ್ನು ಹೇಳಿದ.

* * * *

ಮುಳಬಾಗಿಲಿನ ಮೂಡಲಕ್ಕೆ ಹೋಗುವ ತೆಂಗಿನಮರದ ರಸ್ತೆಯಲ್ಲಿ ತಲೆ ತುಂಬಾ ಶಾಲನ್ನು ಹೊದ್ದು ಮುಖವನ್ನೂ ಅರೆ ಮುಚ್ಚಿದ್ದ ಮಧ್ಯ ಪ್ರಾಯದವನೊಬ್ಬ, ರಾತ್ರಿ ಎಂಟು, ಎಂಟೂವರೆ ಗಂಟೆಯಲ್ಲಿ ನಡೆದುಹೋಗುತ್ತಿದ್ದ. ರಸ್ತೆ ತುದಿಯಲ್ಲಿ ಎಡಕ್ಕೆ ತಿರುಗಿ ಹೈದರಾಲಿ ದರ್ಗದ ಕಡೆಗೆ ನಡೆದ. ದರ್ಗದ ಎದುರಿಗೇ ಅಡ್ಡದಾರಿ ಹಿಡಿದು

ಹುಣಿಸೇತೋಪಿನ ಕಡೆಗೆ ಹೋಗಿ, ಸುಮಾರು ಅರ್ಧ ತಾಸಿನಲ್ಲಿ ಪಾಳು ಮಂಟಪವೊಂದನ್ನು ಸೇರಿದ. ಬೆನ್ನುಬಾಗಿ ನಮಸ್ಕಾರ ಮಾಡಿದ.

ವೀರಾಂಜನೇಯನ ಪಟವೊಂದಕ್ಕೆ ಪೂಜೆಮಾಡುತ್ತಾ ಬೈರಾಗಿಯೊಬ್ಬ ಅಲ್ಲಿ ಕುಳಿತಿದ್ದ. ಮಂಗಳಾರತಿ ಎತ್ತುವ ಹೊತ್ತು. ಮೆಲು ಸ್ವರದಲ್ಲಿ ಬೈರಾಗಿ ಒಂದು ಸಿಳ್ಳು ಹಾಕಿದ. ಎಲ್ಲಿಂದಲೋ ಒಂದು ಮಂಗ ಹಾರಿ ಬಂದು ಪಟದ ಪಕ್ಕದಲ್ಲಿ ಕೂತುಕೊಂಡಿತು. ಬೈರಾಗಿಯು ಮಂಗಳಾರತಿ ಮಾಡಿ, ಬಂದಿದ್ದ ಕೋತಿಗೆ ಸಾಷ್ಟಾಂಗ ಹಾಕಿ ವೀರಾಂಜನೇಯ ಸ್ತೋತ್ರ ಹೇಳಿದ. ಸ್ತೋತ್ರ ಮುಗಿದ ಮೇಲೆ ತಿರುಗಿ ಮೆಲುದನಿಯಲ್ಲಿ ಸಿಳ್ಳು ಹಾಕಿದ. ಮಂಗವು ಛಂಗಿ ತೋಪಿನೊಳಗೆ ಎಲ್ಲೋ ಹೋಗಿ ಮಾಯವಾಯಿತು. ಅಷ್ಟೊಹೊತ್ತು ತುಟಿಪಿಟಕ್ಕನ್ನದೆ, ಪ್ರತಿಮೆಯಂತೇ ಕುಳಿತಿತ್ತು ಮಂಗ.

ಬೈರಾಗಿಯು, ಆಗ ಬಂದಿದ್ದವನ ಕಡೆ ದೃಷ್ಟಿಹರಿಸಿ, "ಹೊತ್ತಾಯ್ತೆ ಬಂದು, ನಾಯ್ಕರೇ?" ಎಂದು ಹೇಳಿದ.

"ಹತ್ತು ಹದಿನೈದು ನಿಮಿಷ ಆಗಿರಬಹುದು ಅಷ್ಟೇ! ಆದರೂ ಮಂಗಳಾರತಿ ಹೊತ್ತಿಗೆ ಬಂದೆನಲ್ಲಾ ಅಂತ ಸಂತೋಷ" ಎಂದರು ನಾಯ್ಕರು.

"ವೀರಾಂಜನೇಯ ಪ್ರಸನ್ನನಾಗಿದ್ದಾನೆ. ನಾನೇ ಧನ್ಯ! ಸಹಸ್ರಬಾರಿ ಆವಾಹನೆ ಮಾಡಿ ಪೂಜೆ ಮಾಡಿದರೂ, ಮಂಗಳಾರತಿ ಹೊತ್ತಿಗೆ ಪ್ರತ್ಯಕ್ಷವಾಗಿ ಬಂದು ದರ್ಶನ ಕೊಡೋದು ಆರೋ ಏಳೋ ಬಾರಿ. ಈ ದಿನ ವೀರಾಂಜನೇಯನು ಸಾಕ್ಷಾತ್ತಾಗಿ ಬಂದು ಪೂಜೆಯನ್ನು ಸ್ವೀಕರಿಸಿದ್ದಾನೆ. ನಿಮ್ಮ ಕೆಲಸ ಆದಹಾಗೇ ಸರಿ!" ಎಂದು ಸಂತೋಷದ ದನಿಯಲ್ಲಿ ಬೈರಾಗಿ ನುಡಿದ.

"ಎಲ್ಲಾ ನಿಮ್ಮ ಆಶೀರ್ವಾದ! ನೀವು ನಿಂತು ಮಾಡಿಸಿಕೊಟ್ಟರೆ ಆಗದೇ ಏನು" ಎಂದರು ನಾಯಕರು.

"ಮಧ್ಯಾಹ್ನ ಪೂಜೆಹಾಕಿ ಅಂಜನ ಹಚ್ಚಿಕೊಂಡು ನೋಡಿದಾಗ, ಇಲವಂಜಿರಾಯರು ನಿಧಿ ಹೂತಿಟ್ಟಿರೋ ಸ್ಥಳ ಕಾಣಿಸಿತು. ಕರೀನಾಗರ ಕಾವಲು ಕಾಯ್ತಾ ಇತ್ತು. ಅದು ಯಾಕೋ ಏನೋ ಉಸಿರುಕಟ್ಟಿ ವಿಲವಿಲ ಒದ್ದಾಡಿ ಸತ್ತುಹೋಯಿತು. ನಿಧಿಯೆಲ್ಲಾ ಇಜ್ಜಿಲಾಗಿ ಹೋಯ್ತು. ಮಾಡೋ ಪ್ರಾಯಶ್ಚಿತ್ತಾನ ಸರಿಯಾಗಿ ಮಾಡಿದರೆ, ವೀರಾಂಜನೇಯ ಪ್ರಸನ್ನವಾದರೆ, ಇಜ್ಜಿಲು ತಿರುಗಿ ನಿಧಿಯಾಗೇ ಆಗುತ್ತೆ" ಎಂದ ಬೈರಾಗಿ.

"ಏನು ಮಾಡಬೇಕೋ ಹೇಳಿದರೆ ಎಲ್ಲಾ ಮಾಡೋಕ್ಕೆ ಸಿದ್ಧ. ಆದರೆ ನನ್ನ ದೊಡ್ಡ ಹೆಂಡತೀಗೆ ತಿಳಿಯದ ಹಾಗೆ ಮಾಡಬೇಕು. ಆಕೆಗೆ ದೇವರು, ದಿಂಡರು, ಮಡಿ, ಮೈಲಿಗೆ ಅಂದರೆ ತುಂಬಾ ನಂಬಿಕೆ. ಶೂನ್ಯಗೀನ್ಯ ಅಂದರೆ ಸುಮ್ಮನಿರುಲ್ಲ" ಎಂದರು ನಾಯಕರು.

"ಪೂಜೆ ಹಾಕಬೇಕಾದರೆ ನಿಶಿರಾತ್ರಿ, ವೀರನಕ್ಷತ್ರದಲ್ಲಿ, ನಿಧಿ ಹೂತಿರೋದು ಅಂಗಳದಲ್ಲಿರುವ ತುಳಸಿಕಟ್ಟೆ ಹತ್ತಿರ. ಪೂಜೆಹಾಕಿ, ಮಾಟಮಾಡಿ, ನಿಧಿಯ ಹತ್ತಿರ ಹೂತರೆ, ಕರೀನಾಗರ ಕೊಂದ ಪಾಪ ಪರಿಹಾರವಾಗುತ್ತೆ. ಆಗ ಇಲವಂಜಿ ವಂಶದವನು



ಯಾರಾದರೂ ಇದ್ದರೆ ಅವನನ್ನು ನಿಧಿ ಹತ್ತಿರಕ್ಕೆ ವೀರಾಂಜನೇಯನು ಸೆಳೆದುಕೊಂಡು ಬರ್ತಾನೆ. ಅವನು ಕಾಲಿಟ್ಟರೆ ಸಾಕು. ಧಣಿ ಬಂದ ಅಂತ ಇಜ್ಜಿಲು ಮೊದಲಿನಂತೇ ನಿಧಿಯಾಗುತ್ತೆ" ಎಂದ ಬೈರಾಗಿ.

"ಇಲವಂಜಿ ರಾಯನ ವಂಶದವರು ಯಾರೂ ಇಲ್ಲ ಈಗ. ಮೂರು ನಾಲ್ಕು ವರ್ಷಗಳ ಹಿಂದೆ, ಇದ್ದ ಒಬ್ಬ ಹೈದನಿಗೆ ಹುಚ್ಚು ಹಿಡಿದುಹೋಯ್ತು. ಅವನೆಲ್ಲೋ ಓಡಿ ಹೋಗಿಬಿಟ್ಟ. ಕೆರೇಲೆಲ್ಲೋ ಬಿದ್ದು ಸತ್ತುಹೋದ ಅಂತ ಕೇಳಿದ್ದೆ. ಈಗೇನು ಮಾಡೋದು?" ಎಂದರು ನಾಯಕರು.

"ಹಾಕೋ ಪೂಜೆ ಹಾಕೋಣ. ಅವನು ಬದುಕಿದ್ದರೆ ಬಂದೇ ಬರ್ತಾನೆ. ಆಗ ಗೊತ್ತಾಗುತ್ತಲ್ಲ. ನಿಧಿ ನಮಗೆ ಸಿಗುತ್ತೆ ಅಥವಾ ಇಲ್ಲ ಅನ್ನೋದು" ಎಂದ ಬೈರಾಗಿ.

"ದಿಟ! ಮಾಡೋದು ಮಾಡೋಣ. ನಮ್ಮ ಪುಣ್ಯ ಹೇಗಿರುತ್ತೋ..." ಎಂದರು ನಾಯಕರು.

ಅಷ್ಟಕ್ಕೇ ಮುಗೀಲಿಲ್ಲ, ನಾಯಕರೇ! ಮಸಲಾ ಇಲವಂಜಿ ವಂಶದವನು ಬಂದ ಅಂತಿಟ್ಟುಕೊಳ್ಳಿ. ಅಷ್ಟಕ್ಕೇ ನಿಧಿ ನಿಮ್ಮ ಕೈಗೆ ಸಿಕ್ಕಿತು ಅಂತಲ್ಲ. ಅದೇನಾದರೂ ವೀರಾಂಜನೇಯನ ದಯದಿಂದ ಆದರೆ, ಮೂರುದಿನ ನೀವು ವ್ರತ ಮಾಡಬೇಕು. ನಾನೂ ವ್ರತಮಾಡಿ ಪೂಜೆಹಾಕಿ, ಮಂತ್ರಿಸಿದ ಪ್ರಸಾದ ಕೊಡ್ತೀನಿ. ಅದನ್ನು ಮಾತ್ರ ತಿಂದು ಬ್ರಹ್ಮಚಾರಿಗಳಾಗಿರಬೇಕು. ಅನಂತರವೇ ನಿಮಗೆ ನಿಧಿ ಲಭ್ಯ!" ಎಂದ ಬೈರಾಗಿ.

"ಇಷ್ಟು ಮಾಡಿದವನಿಗೆ ಅದೆಲ್ಲಾ ಏನು ಕಷ್ಟ! ಮಾಡ್ತೀನಿ. ಸಿಕ್ಕಿದ ನಿಧಿಯಲ್ಲಿ ನಿಮಗರ್ಧ ಕೊಡ್ತೀನಿ" ಎಂದರು ನಾಯಕರು.

"ತೋಬಾತೋಬಾ ವೀರಾಂಜನೇಯ!" ಅಂತ ಕೂಗುತ್ತಾ ಬೈರಾಗಿ ಕೆನ್ನೆಗೆ ಹೊಡೆದುಕೊಂಡ.

"ನಿಧಿ ಆಶೆಗೆ ನಾನು ಪೂಜೆ ಹಾಕಿದರೆ, ತಲೆ ಛಿದ್ರವಾಗಿ ಬಿಡುತ್ತೆ. ಲಭ್ಯವಿದ್ದೋರಿಗೆ ನಿಧಿ ಕೊಡಿಸುವುದೇ ನನ್ನ ಕರ್ಮ. ಲಾಭದ ಆಶೆಯಿಂದಲ್ಲ. ಆದರೂ ನಿಮಗೆ ಧರ್ಮ ಮಾಡಬೇಕು ಅನ್ನಿಸಿದರೆ, ಆಂಜನೇಯನ ಗುಡಿಯೊಂದನ್ನು ಕಟ್ಟಿಸಿ, ನಿತ್ಯಪೂಜೆಗೆ ಏರ್ಪಾಟುಮಾಡಿ" ಎಂದ ಬೈರಾಗಿ.

* * * *

ಹಿತ್ತಲಲ್ಲಿದ್ದ ತೆಂಗಿನಮರದ ಬುಡದಲ್ಲಿ ಮುಸಿರೆ ಪಾತ್ರೆಗಳನ್ನು ತೊಳೆಯುತ್ತಾ ತಿಮ್ಮಿ ಕುಳಿತಿದ್ದಳು. ಕಾವಲಿಗೆ ದನ ಹೊಡಕೊಂಡು ಹೋಗ್ತಿದ್ದವ ಆಕೆಯನ್ನು ಕಂಡು, "ಇದ್ಯಾಕೆ ತಿಮ್ಮಿ? ಮುಖ ಧುಮಗುಟ್ತಾ ಇದೆ. ವಸಿ ಕಡ್ಡಿಪುಡಿ ಇಸ್ಕೊಂಡು ಹೋಗುವ ಅಂತ ಬಂದೆ. ಕೋಪದಿಂದ ನೀನು ಪಾತ್ರೆ ತಿಕ್ಕೋದನ್ನು ನೋಡಿದರೆ, ಏನೋ ಆಗಿದೆ ಅಂತ ಅನ್ನಿಸುತ್ತೆ. ಏನಾಯ್ತು?" ಎಂದು ಕೇಳಿದ.

"ಆಗೋದೇನು, ಮೂರು ದಿನದಿಂದ ಸಿಡಿಸಿಡಿ ಬೀಳ್ತಾರೆ ದೊಡ್ಡಮ್ಮಾವ್ರು, ಎದ್ದರೆ

ತಪ್ಪು ನಿಂತರೆ ತಪ್ಪು, ಬೆಳಿಗೆದ್ದಾಗ ಅವರ ಮುಖ ನೋಡಿದ್ರೆ, ರಾತ್ರಿಯೆಲ್ಲಾ ಅತ್ತೋ ಹಾಗೆ ಕಾಣಿಸ್ತು. ಅವರಿಗೂ ಏನೋ ಆಗಿದೆ" ಎಂದು ತಿಮ್ಮಿ ಗುರುಗುರು ನುಡಿದಳು.

"ಹಟ್ಟೀಲೆಲ್ಲಾ ಮಾತಾಡ್ಕೋತಿದಾರೆ! ಯಾವನೋ ಬೈರಾಗಿ ಹಿಂದೆ ನಾಯ್ಕರು ಬಿದ್ದಿದ್ದಾರೆ. ಕೆಟ್ಟಕಟ್ಟ ಪೂಜೆ ಹಾಕಿಸ್ತಾ ಇದಾರೆ. ಇದೆಲ್ಲಾ ಒಳ್ಳೇದಕ್ಕಲ್ಲಾ ಅಂತ ಜನ ಎಲ್ಲ ಪಿಸುಪಿಸು ಅಂತಿದ್ದಾರೆ" ಎಂದ ದನ ನೋಡಿಕೊಳ್ಳುವವ.

"ಹಂಗಾ! ಏನೋ ಇರ್ಬೇಕು! ಮೊನ್ನೆ ಬೆರಣಿ ತಟ್ಟೋ ಅಜ್ಜಿ ಹೇಳ್ತಿದ್ಳು. ದನದ ಹಟ್ಟೀ ಹತ್ತಿರಾನೆ ಅವಳು ರಾತ್ರಿ ಬಿದ್ಕೊಳ್ಳೋದು. ನಿಶಿರಾತ್ರೀಲಿ ನಾಯ್ಕರು, ಬೈರಾಗಿ ಇಬ್ಬರೂ ಬಂದು ತುಳಸಿ ಕಟ್ಟೆ ಪಕ್ಕದಲ್ಲಿ ಗುಂಡಿ ತೆಗೆದು ಏನನ್ನೋ ಹೂತಿಟ್ಟು ಹೋದರು ಅಂತ. ಶೂನ್ಯಗೀನ್ಯ ಹೀಗೆಲ್ಲಾ ಮಾಡಿದರೆ ಮನೆ ಉಳಿಯಲ್ಲ ಅಂತ ಆಕೀಗೆ ಅನ್ನಿಸ್ತು. ಬೆಳಗಿನ ಝಾವ ತಾನೇ ಅಗೆದಳಂತೆ. ಮೂಳೆ ಸಿಕ್ತಂತೆ. ಅದನ್ನು ತೆಗೆದು ಮಾರಮ್ಮನ ಗುಡೀ ಹತ್ತಿರ ಎಸೆದು ಬಂದಳಂತೆ. ಹುಟ್ಟಿದಾಗಿನಿಂದ ಆಕೆ ಈ ಮನೇಲಿ ಇದ್ದೋಳು, ಮನೆಯೋಳ ಹಾಗೇ ಒದ್ದಾಡ್ತಾಳೆ" ಎಂದಳು ತಿಮ್ಮಿ ಪಿಸುದನಿಯಲ್ಲಿ.

"ಇದೆಲ್ಲಾ ಒಳ್ಳೇದಕ್ಕಲ್ಲ! ತಿಮ್ಮಿ! ಕರಿನಾಗರಾನ ನಾಯ್ಕರು ಕೊಲ್ಲಿಸ್ಬಾರ್ದಾಗಿತ್ತು. ಹೋಗಲಿ ಬಿಡು! ನಮಗ್ಯಾಕೆ ದೊಡ್ಡೋರ ಮಾತು. ವಸಿ ಕಡ್ಡಿಪುಡಿ ಕೊಡು, ಹೋಗ್ತೀನಿ, ನಾಯ್ಕರು ನೋಡಿದರೆ ಇನ್ನೂ ಇಲ್ಲೇ ಇದಿಯಾ ಅಂತ ರೇಗಿಬೀಳ್ತಾರೆ" ಎಂದ ದನಕಾಯುವವ.

"ದೊಡ್ಡ ಬಿಂದಿಗೆ ತಾವ ಚೀಲ ಇದೆ ನೋಡು, ಅದರಲ್ಲಿದೆ ಕಡ್ಡಿಪುಡಿ" ಎಂದಳು ತಿಮ್ಮಿ. ಅವಳ ಮುಖ ಸ್ವಲ್ಪ ಹಗುರಗೊಂಡಿತ್ತು.

* * * *

ಕೆಂಚಾನಾಯ್ಕರ ಮನೆ ಮುಂದೆ ಕೋತಿ ಆಡಿಸೋನು, ಬೆಳಿಗ್ಗೆ ಎಂಟುಗಂಟೆ ಹೊತ್ತಿಗೆ,ತನ್ನ ಆಟಾನ ಪ್ರಾರಂಭಿಸಿದ.

ಮೂರು ಬಾರಿ ತನ್ನ ದೊಡ್ಡ ಬುಡುಬುಡಿಕೆಯನ್ನು ಬಾರಿಸಿದ. ಹಿಂದೆಯೇ ನಡೆದು ಬಂದಿದ್ದ ಹಳ್ಳಿ ಹುಡುಗರೆಲ್ಲಾ ಸುತ್ತು ನಿಂತರು. ಕೆಂಚಾನಾಯ್ಕರ ಮನೆ ಹುಡುಗರೂ ಬಂದು ಮೆಟ್ಟಿಲ ಮೇಲೆ ನಿಂತರು.

ಒಂದೇ ತಂತಿಯಿದ್ದ, ಒಂದೇ ಅಡಿ ಉದ್ದವಿದ್ದ, ಬಿದುರಿನ ಪಿಟೀಲಿನ ಮೇಲೆ ಇವನು ನಿಂತುಕೊಂಡು ಕುಣಿತದ ಹಾಡನ್ನು ಬಾರಿಸುತ್ತಿದ್ದ.

ಲಂಗ ಉಟ್ಟುಕೊಂಡಿದ್ದ, ಸೆರಗನ್ನು ಹೊದ್ದುಕೊಂಡಿದ್ದ, ಹಣೆಗೆ ಭಾಷಿಂಗ ಕಟ್ಟಿ ಶೃಂಗರಿಸಲ್ಪಟ್ಟಿದ್ದ, ಕೋತಿ ಹಾಡಿಗೆ ಸರಿಯಾಗಿ ಕುಣಿಯುತ್ತಿತ್ತು. ಇವನು ಬಲಗಾಲಿನಲ್ಲಿ ಹಾಕುತ್ತಿದ್ದ ತಾಳಕ್ಕೆ ಸರಿಯಾಗಿ ಕೋತಿಯು ಕೂಡ, ಕಾಲ್ಗೆಜ್ಜೆಯನ್ನು ನುಡಿಸುತ್ತಿತ್ತು.

ಹಾಡು ಇಂಪಾಗಿತ್ತು. ಗೆಜ್ಜೆಯ ಸಪ್ಪಳವು ಕಿವಿಯನ್ನು ಸೆಳೆಯುತ್ತಿತ್ತು. ಮನೆಯೊಳಗಿನಿಂದ ಹೆಂಗಸರೂ ಬಂದು ನೋಡುತ್ತ ನಿಂತರು. ಕೆಂಚಾನಾಯ್ಕರು ಕೂಡ ಬಂದು ನೋಡಲು,ಕಂಭ ಒರಗಿಕೊಂಡು ಜಗುಲಿಯ ಮೇಲೆ ನಿಂತರು.



"ಅತ್ತೆ ಮನೆಗೆ ಹೋಗೋವಾಗ, ತಿಮ್ಮಕ್ಕಾ! ಹೆಂಗೆ ಹೋಗ್ತೀ" ಎಂದ ಆಡಿಸುವವ. ತಲೇನ ಕೆಳಕ್ಕೆ ಬಗ್ಗಿಸಿ, ಕಣ್ಣೆತ್ತಿಕೊಂಡು ಹಾದಿ ನೋಡುತ್ತಾ ಮೆಲ್ಲಮೆಲ್ಲನೆ ನಿಧಾನವಾಗಿ ಕಾಲ್ಗೆಜ್ಜೆಯನ್ನು ಹಾಕುತ್ತಾ ಕೋತಿಯು ಒಂದು ಸುತ್ತು ಹಾಕಿತು. ಆಡಿಸುವವನ ಹತ್ತಿರ ಬಂದು ಬಲಗಾಲಿನಿಂದ ನೆಲವನ್ನುಕೆರೆಯುತ್ತ ಪಿಳಿಪಿಳಿ ನೋಡುತ್ತ ನಿಂತುಕೊಂಡಿತು.

ಹುಡುಗರೆಲ್ಲಾ ಕೈ ಚಪ್ಪಾಳೆ ತಟ್ಟಿದರು. ಜಗುಲಿ ಮೇಲೆ ನಿಂತಿದ್ದ ಹೆಂಗಸರು ನಕ್ಕರು. "ಹೋತನ ಹಾಗೆ ಬೆಳೆದಿದೆ, ಮುಂಡೇದು! ಇದರ ನಡೆದಾಟಾನಾದರೂ ನೋಡೇ! ಮನುಷ್ಯರಿಗಿಂತ ಚೆಂದಾಗಿ ವಾಲಾಡುತ್ತಲ್ಲೇ" ಎಂದು ಕೆಂಚಾನಾಯ್ಕರು ತುಸು ನಗುತ್ತಾ ಕಿರಿಯ ಹೆಂಡತಿ ಕಡೆ ನೋಡುತ್ತಾ ಹೇಳಿದರು.

"ತಿಮ್ಮಕ್ಕಾ! ತಿಮ್ಮಕ್ಕಾ! ಕೆಂಚಾನೆ ಮೂತಿ ಸಿಪಾಯಿಗಳು ಬಂದ್ರಲ್ಲೇ!" ಅಂತ ಕೋತಿ ಆಡಿಸುವವ ಚೀರಿದ.

ಲಂಗವನ್ನು ಎರಡು ಕೈಗಳಲ್ಲೂ ಮುದುರಿಕೊಂಡು, ಹೆದರಿದಂತೆ ಪಿಳಿಪಿಳಿ ನೋಡುತ್ತ,ಕೋತಿಯು ಮನೆ ಜಗುಲಿಯ ಮೇಲಕ್ಕೆ ಹೋಗಿ ಕಂಭವೊಂದರ ಹಿಂದೆ ಅವಿತುಕೊಂಡಂತೆ ಕೂತಿತು. ಚೆಲ್ಲಾಪಿಲ್ಲಿಯಾಗಿದ್ದ ಹುಡುಗರು ಹೆಂಗಸರು ಈ ದೃಶ್ಯವನ್ನು ನೋಡಿ ಕೇಕೆ ಹಾಕುತ್ತ ನಕ್ಕರು. "ಗಾಣಗಿತ್ತಿ ಮಗಳ್ಹಾಂಗೆ ಕೂತಿದೆ ಅಲ್ವಾ..." ಎಂದು ಕೆಂಚಾನಾಯ್ಕರು ಹೇಳಿ ನಕ್ಕರು.

ಲಕ್ ಲಕ-ಲಕ್ಲಲ್ಲೇ!! ಗಳ್‌ಗಳ ಗಳ್ಳಲ್ಲೇ ಅಂತ ಕರ್ಕಶದ ಕೂಗು ಕೇಳಿಸಿತು. ಎಲ್ಲಿಂದಲೋ ಹುಚ್ಚನೊಬ್ಬ ಓಡೋಡಿ ಬಂದು ಜಗಲಿ ಹತ್ತಿದ. "ಇಲವಂಜಿ ಹೈದ! ಸತ್ತಿಲ್ಲವಾ ಇವನು, ಇವನ್ಯಾವಾಗ ಬಂದ!" ಎಂದು ಉದ್ಗಾರ ತೆಗೆದರು ಕೆಂಚಾನಾಯ್ಕರು. ಅಷ್ಟರಲ್ಲೇ ಕೋತಿಯು ಹುಚ್ಚನ ತೋಳ ಮೇಲಕ್ಕೆ ಛಂಗಿ ಕೂತಿತು. ಹುಚ್ಚ ಮನೆಯೊಳಕ್ಕೆ ನುಗ್ಗಿದ. ಕೆಟ್ಟುಕೆಟ್ಟುದಾಗಿ ಅರಿಚಾಡುತ್ತಿದ್ದ ಹುಚ್ಚ. ಅವನ ಜತೆಗೂ ಕೋತಿಯ ಕಿಚಿಕಿಚಿ ಕೇಳಿಸುತ್ತಿತ್ತು. ಕೆಂಚಾನಾಯ್ಕರು ಮನೆಯೊಳಕ್ಕೆ ನುಗ್ಗಿದಾಗ ಅಂಗಳದಲ್ಲಿ ದೊಡ್ಡ ಹೆಂಡತಿಯು ಚೀರಿದ್ದು ಕೇಳಿಸಿತು. ಅಲ್ಲಿಗೆ ಓಡಿದರು. "ಯಾವನೋ ಹುಚ್ಚ ಓಡಿಬಂದ. ಅವನ ತೋಳ್ಮೇಲಿದ್ದ ಕೋತಿ ಕೆಳಕ್ಕೆ ಹಾರಿತು. ತುಳಸಿಕಟ್ಟೆ ಹತ್ತಿರ ಅಂಗಳದಲ್ಲಿ ಸಂಡಿಗೆ ಹರಿವು ಹಾಕಿದ್ದೆ. ಅದನ್ನೆಲ್ಲಾ ತುಳಿದುಬಿಡ್ತು. ಆ ಕಡೆ ಓಡಿಹೋಯ್ತು" ಎಂದು ಆಕೆ ರೇಗುತ್ತಾ ನುಡಿದಳು.

ಬೀದಿಯ ಬಾಗಿಲ ಬಳಿ ಗಲಾಟೆ ಜೋರಾಯ್ತು. ನಾಯ್ಕರು ನಿಂತಲ್ಲೇ ನಿಂತಿದ್ದರು. ಹುಚ್ಚ ಓಡಿಹೋಗುತ್ತಿದ್ದ ರಸ್ತೇಲಿ. ಕೋತಿ ಆಡಿಸೋನು ಕೋತೀನ ಹಿಡಿದುಕೊಂಡು "ಯಾಕಪ್ಪಾ? ತಿಮ್ಮಣ್ಣಾ ಹಂಗ್ಮಾಡ್ದೆ" ಅಂತ ಮುದ್ದುಗರೆಯುತ್ತಾ ಮಾತನಾಡಿಸುತ್ತಿದ್ದ.

ನಾಯ್ಕರಿಗೆ ಏನೋ ಆಗಿತ್ತು. "ಎದ್ದೋಗೋ! ಭಡವಾ! ಇಲ್ಲೇ ಇದ್ರೆ ವದ್ದುಬಿಡ್ತೀನಿ" ಅಂತ ಕೋತಿ ಆಡಿಸೋನ ಮೇಲೆ ರೇಗಿದರು. ಹೆಂಗಸರೆಲ್ಲಾ ಮನೆಯೊಳಕ್ಕೆ ಬೇಗ ಹೋಗಿ ಅವಿತುಕೊಂಡರು. ಮಕ್ಕಳೆಲ್ಲಾ ಸದ್ದಿಲ್ಲದೆ ಮನೆಯೊಳಕ್ಕೆ ಮಾಯವಾದುವು. ಇದನ್ನು ಕಂಡ ಕೋತಿಯವ ಗಪ್‌ಚಿಪ್ ಎನ್ನದೆ ಗಂಟು ಮೂಟೆ ಕಟ್ಟಿಕೊಂಡು, ಸಂಪಾದನೆಯೇನೂ ಇಲ್ಲದೆ ಗುಡುಗುಡು ನಡೆದುಬಿಟ್ಟ.

* * * *

ಆವಣಿ ದೇವಸ್ಥಾನದ ಅರ್ಚಕರು ಜಾತ್ರೆಯೆಲ್ಲಾ ಮುಗಿದ ಮೇಲೆ ಮುಳಬಾಗಿಲಿಗೆ ಬಂದು, ಕೆಂಚಾನಾಯಕರನ್ನು ಭೆಟ್ಟಿಯಾಗಿ ಪ್ರಸಾದವನ್ನು ಕೊಟ್ಟರು. "ನಿಮ್ಮಿಂದಲ್ಲೇ ಸುಲ್ತಾನರು ನಾಲ್ಕು ಎಕರೆ ಜಮೀನನ್ನು ದೇವಸ್ಥಾನಕ್ಕೆ ದಯಪಾಲಿಸಿದ್ದು. ಅದಕ್ಕೇ ನಿಮ್ಮ ಕೈಂಕರ್ಯ ಅಂತ ಜಾತ್ರೆ ಮುಗಿದ ಮೂರನೆ ದಿನ ಉತ್ಸವ ನಡೆಸಿ, ಪ್ರಸಾದ ಕೊಟ್ಟು ಬಾ ಅಂತ ನಮ್ಮ ಅಣ್ಣಂದಿರು ಹೇಳಿದ್ದರು. ಅವರು ಹೋದ ವರ್ಷ ಗೆಡ್ಡೆಬೇನೆ ಬಂದು ಸ್ವರ್ಗಸ್ಥರಾದರು. ಹೊಸಬ ನಾನು ಇದೆಲ್ಲವನ್ನೂ ಹೇಳಕೋಬೇಕಾಯ್ತು" ಎಂದರು.

ನಾಯಕರೂ ಸ್ವಲ್ಪ ನಗುಮುಖದಿಂದಿದ್ದರು, "ಏನೆಲ್ಲಾ ಸಮಾಚಾರ, ಜಾತ್ರೇಲಿ ಸುಮಾರು ವ್ಯಾಪಾರ ಆಯ್ತಾ?" ಎಂದೆಲ್ಲಾ ಕೇಳಿದರು.

ಅರ್ಚಕರು ಎಲ್ಲ ವಿವರಣೆಯನ್ನೂ ಇತ್ತು, ನಂತರ ಜ್ಞಾಪಿಸಿಕೊಂಡವರಂತೆ, "ಅಂದ ಹಾಗೇ ಇಲವಂಜಿ ಹೈದ, ಹುಚ್ಚು ಹಿಡಿದಿತ್ತಲ್ಲಾ; ನೀವಿರೋ ಮನೆ ಅವನಿಂದಲೇ ಕೊಂಡಿದ್ದು. ಕೆರೇಲಿ ಕಾಲು ಜಾರಿಬಿದ್ದು ತೀರಿಕೊಂಡ ಅಂತ ಸುದ್ದಿ ಇತ್ತಲ್ಲ! ಅದು ಸುಳ್ಳು! ಇಲವಂಜಿ ಹೈದ ಜಾತ್ರೆಗೆ ಬಂದಿದ್ದ. ಒಂದೆರಡು ದಿನ ಕಾಣಿಸಿಕೊಂಡ. ತಿರುಗಿ ಕಾಣೆಯಾದ" ಎಂದು ಹೇಳಿದರು.

* * * *

ಆವೇಳೆ ಹೊತ್ತಿನಲ್ಲಿ ನಾಯಕರು ಹಿಂತಿರುಗಿದಾಗ, ಚಿಕ್ಕ ಹೆಂಡತಿ ಕಾದಿದ್ದಳು. "ಇವತ್ತು ನಾನೇ ಮುಸುಕಿನ ಜೋಳದ ಆಂಬೊಡೇನ ಮಾಡಿದ್ದೇನೆ. ಊಟದ ಜತೆಗೆ ತಿನ್ನುತ್ತೀರಾ, ಅಥವಾ ಮೊದಲೇ ತಿಂತೀರಾ" ಎಂದು ಆದರದಿಂದ ಕೇಳಿದಳು. "ಹೊತ್ತಾಗಿದೆ, ಹಸಿವೂ ಇಲ್ಲ. ಬರೀ ಆಂಬೊಡೆ ಎರಡನ್ನು ಬಾಯಿಗೆ ಹಾಕಿಕೊಂಡು ಮಲಕ್ಕೋತೀನಿ" ಎಂದರು ನಾಯಕರು.

ಬೆಳಿಗ್ಗೆ ಏಳೋ ಹೊತ್ತಿಗೆ "ಯಾಕೋ ಹೊಟ್ಟೇಲಿ ಏನೋ ಆಗ್ತಾ ಇದೆ, ಇವತ್ತುಲಂಘಣ ಮಾಡೋದು ಒಳ್ಳೇದೇನೋ" ಎಂದು ಹೇಳಿದರು. "ಉಪವಾಸ ಇರೋದಾದರೆ ಇಲ್ಲಿ ಯಾಕಾರ ಇರಬೇಕು! ದೊಡ್ಡಕ್ಕನ ಜತೇಲೇ ವ್ರತದ ಹೆಸರಾರೂ ಹೇಳಿಕೊಂಡು ಉಪವಾಸ ಇರಬೋದಲ್ಲ" ಎಂದು ಚಿಕ್ಕ ಹೆಂಡತಿ ಕೊಂಕು ನುಡಿದಳು. "ದಿಟ ನೀ ಹೇಳಿದ್ದು. ಹಾಗೇ ಮಾಡ್ತೀನಿ" ಎಂದು ನಾಯಕರು ಎದ್ದು ಬಚ್ಚಲಮನೆಗೆ ಹೋದರು.

"ಏನೇನೋ ತಿಂಡಿಗಳನ್ನ, ಯಾವ ಯಾವ ಜಾತಿ ಹೆಂಗಸರು ಹೇಳಿ ಕೊಡ್ತಾರೋ, ಅದನ್ನೆಲ್ಲಾ ಮಾಡಿ ನಿಮಗೆ ಬಾಯಿ ರುಚಿ ಹಚ್ಚಿಸಿ ತಿನ್ನಿಸ್ತಾಳೆ. ನೀವು ಬೇನೆ ಬೀಳೋ ಹಾಗಾಗುತ್ತೆ," ಎಂದು ದೊಡ್ಡ ಹೆಂಡತಿ ಚಡಪಡಿಸುತ್ತಾ, "ಬಿಸಿನೀರ ಶಾಖ ಕೊಡಲಾ? ಜೀರಿಗೆ ಕಷಾಯ ಹಾಕಿ ಕೊಡಲಾ? ನಾನೇನೋ ಹರಕೆ ಹೊತ್ತಾಯ್ತು ಆಗಲೇ" ಎಂದು ಹೇಳಿದಳು. "ಏನೂ ಬೇಡ. ಬರೀ ಹಾಲು ಕುಡಿದು ಲಂಘಣ ಮಾಡಿದರೆ ಸರಿಹೋಗುತ್ತೆ. ಇದಕ್ಯಾಕೆ ಕಾಳಜಿ ಮಾಡ್ತಿ" ಎಂದು ಕೆಂಚಾನಾಯಕರು ಸಮಾಧಾನ ಹೇಳಿದರು. "ಹೇಗೂ ಉಪವಾಸ ಇರ್ತೀನಿ. ಸಂಜೆ ಮುಂದೆ ದೇವಸ್ಥಾನಕ್ಕೆ ಹೋಗಿ ಒಂದು ಸುತ್ತು ಪ್ರದಕ್ಷಿಣೆ ಹಾಕಿ ಬರ್ತೀನಿ" ಅಂತ ಅಡ್ಡಾಡಲಿಕ್ಕೆ ಹೋದರು. "ಬೇಗ



ಬಂದುಬಿಡ್ತೀನಿ, ಅಯ್ಯನೋರ್ನ ಕರೆಸಿ ಮನೇಲಿ ಕುಂಕುಮಾರ್ಚನೆ ಮಾಡಿಸು" ಎಂದು, ನಾನೂ ಬರ್ತೀನಿ ಅಂತ ಹಠ ಹಿಡಿದ ಮೊದಲನೆ ಹೆಂಡತೀನ ಪುಸಲಾಯಿಸಿ ಒಬ್ಬರೇ ಹೊರಡೋದಕ್ಕೆ ಸುಮಾರು ತ್ರಾಸಪಟ್ಟರು.

* * * *

ತನ್ನ ಸಾಮಾನೆಲ್ಲವನ್ನೂ ಕಟ್ಟಿ ಪ್ರಯಾಣ ಹೊರಡುವುದಕ್ಕೆ ಬೈರಾಗಿ ಸಿದ್ಧವಾಗಿದ್ದ. "ನೀವು ಬರೋದನ್ನೇ ಕಾದಿದ್ದೆ. ಮಧ್ಯಾಹ್ನ ಪೂಜೆ ಹಾಕಿ ಪ್ರಸಾದಾನ ತೆಗೆದಿರಿಸಿದೆ. ಆವಾಗಿನಿಂದ ಏನೇನೋ ಅಪಶಕುನಗಳೇ ಕಾಣಿಸ್ತಾ ಇವೆ. 'ನಾಲ್ಕು ಅಪಶಕುನ ಒಂದೇ ತಾಸಿನಲ್ಲಿ ಬಿದ್ದರೆ, ನನಗೇನೋ ಆಗಿದೆ ಅಂತ ತಿಳಿದುಕೊಂಡು ಎಲ್ಲಿದ್ದರೂ ಜಟ್ಟಂತ ಬಂದುಬಿಡು. ಕಡೇ ಉಪದೇಶ ಮಾಡೋದು ಇನ್ನೂ ಬಾಕಿ ಇದೆ,' ಎಂದು ಗುರುಗಳು ಹೇಳಿದ್ದರು. ನಿಮಗೆ ಪ್ರಸಾದಾನ ಕೊಟ್ಟು ಹೊರಡೋಣ ಅಂತ ಕಾದಿದ್ದೆ. ನಾನು ಹೇಳಿದ್ದೆಲ್ಲಾ ನೆನಪಿದೆಯಲ್ಲಾ! ಮೂರು ದಿನ ವ್ರತವಾಗಿರಿ. ಪ್ರಸಾದ ಮಾತ್ರ ರಾತ್ರಿ ತೊಗೊಂಡು ಹಾಲು ಕುಡಿದು ಮಿಕ್ಕ ಎಲ್ಲಾ ಪಥ್ಯಾನೂ ಮಾಡಿ, ಮೂರು ದಿನ ಆದ ಮೇಲೆ, ನಾಲ್ಕನೇ ದಿನ ತುಳಸಿಕಟ್ಟೆ ಹತ್ತಿರ ಅಗೀರಿ. ನಿಧಿ ಸಿಕ್ಕೇ ಸಿಗುತ್ತೆ. ವೀರಾಂಜನೇಯ ಎಂದೂ ಕೈಬಿಡುಲ್ಲ. ಅದಕ್ಕೇ ಇಲವಂಜಿ ಹೈದನನ್ನು ಹೇಗೆ . ಎಳಕೊಂಡು ಬಂದಾ! ತುಳಸಿಕಟ್ಟೆ ಹತ್ತಿರ ಪಾದ ಹಾಕೋ ಹಾಗೆ ಮಾಡಿದ!" ಎಂದ ಬೈರಾಗಿ. ಒಂದು ಕ್ಷಣ ಸುಮ್ಮನಿದ್ದು. "ಮರೀಬೇಡಿ! ನಿಧಿ ಸಿಕ್ಕರೆ ಆಂಜನೇಯನ ಗುಡಿ ಕಟ್ಟಿಸಿ!" ಎಂದು ನುಡಿದ.

ತಲೆಬಾಗಿ ಪ್ರಸಾದವನ್ನು ಸ್ವೀಕರಿಸಿ, "ಮೂರು ಭಾಗ ಮಾಡಿ ಮೂರು ರಾತ್ರೀನೂ ತೊಗೊಂಡು, ನಾಲ್ಕನೇ ದಿನ ನಿಧಿ ತೆಗಿತೀನಿ, ಎಲ್ಲಾ ನಿಮ್ಮ ಕೃಪೆ!- ಗುಡಿ ಕಟ್ಟಿಸ್ತೀನಿ" ಎಂದು ಕೆಂಚಾನಾಯ್ಕರು ಹೇಳಿ ಮನೆಯ ಕಡೆಗೆ ಹಿಂತಿರುಗಿದರು.

* * * *

ದೊಡ್ಡ ಹೆಂಡತಿ ಉಳಿದ ಇಬ್ಬರನ್ನೂ ಕರೆದು "ಸಂಜೆ ಅಯ್ನೋರ್ನ ಕುಂಕುಮಾರ್ಚನೆಗೆ ಕರೆಸಿದ್ದೆ. ನಾಯ್ಕರು ಹೇಗೋ ಇದಾರೆ. ಏನು ಕಾಯಿಲೆ ಇರಬಹುದು ಅಂತ ಕೇಳಿದೆ. ಅವರು ಕವಡೆ ಹಾಕಿ ನೋಡಿ, "ಮೈನಲ್ಲೇನೂ ಜಡ್ಡಿಲ್ಲ. ಆದರೆ ಯಾರೋ ಆಗದವರು ಮಾಟ ಮಾಡಿಸಿದ ಹಾಗೆ ಕಾಣುತ್ತೆ. ಇಲ್ಲದೇ ಇದ್ದರೆ ಹಸುವನ್ನು ಕೊಂದರೂ ಹೀಗಾಗುತ್ತೆ. ಕರಿನಾಗರ, ಬೆಕ್ಕುಗಳನ್ನು ಕೊಂದರೂ ಹೀಗಾಗಬಹುದು," ಎಂದರು. "ಏನು ಮಾಡಬೇಕು ಹಾಗಾದರೆ" ಅಂತ ಕೇಳಿದೆ. 'ನೀವೆಲ್ಲಾ ಏನೂ ಮಾಡಬೇಕಾಗಿಲ್ಲ. ನಾಯಕರು ಬಹಳ ಶಹಣೆ ಇದ್ದಾರೆ. ಕಾಳಂಭಟ್ಟರ ಪರಿಚಯ ಚೆನ್ನಾಗಿದೆ. ಕಾಳಂಭಟ್ಟರಿಗೆ ತಿಳಿಯದೇ ಇರೋ ಭೂತ ವೈದ್ಯ ಇನ್ಯಾರಿಗೂ ಗೊತ್ತೇ ಇಲ್ಲ. ಅದಕ್ಕೋಸ್ಕರ ನೀವು ಸುಮ್ಮನೆ ಇದ್ದು, ನಾಯಕರು ಹೇಳಿದ ಹಾಗೆ ಮಾಡಿ. ಯಾಕೆ ಏನು ಅಂತೆಲ್ಲಾ ಕೇಳುಕ್ಕೆ ಹೋಗಬೇಡಿ. ಇಂತಹ ವಿಷಯಗಳನ್ನು ಅವರು ಹೇಳುವ ಹಾಗೂ ಇರುಲ್ಲ' ಎಂದು ಹೇಳಿದರು.

"ನನಗ್ಯಾಕೋ ಗಾಬರಿಯಾಗ್ತಾ ಇದೆ. ಅದಕ್ಕೇ ಸಾವಿತ್ರಿ ವ್ರತ ಮಾಡ್ತೀನಿ. ನೀವು

ಮನೆಕೆಲಸ ಮಕ್ಕಳನ್ನು ನೋಡಿಕೊಳ್ಳೋದು ಮಿಕ್ಕ ಎಲ್ಲವನ್ನೂ ಮಾಡ್ತಾ ಇರಿ" ಎಂದು ಹೇಳಿದಳು.

* * * *

ಮೂರು ದಿನಗಳು ಕೆಂಚಾನಾಯಕರು ಮನೆಯಲ್ಲಿ ಹಾಲೊಂದನ್ನೇ ಕುಡಿದು, ತಮ್ಮ ಕೊಠಡಿಯಲ್ಲಿ ಮಲಗುತ್ತಾ ಕಳೆದರು. ಕಾಳಂಭಟ್ಟರೊಬ್ಬರೇ ಯಾವಾಗಲಾದರೂ ಬಂದು ಮಾತನಾಡಿಕೊಂಡು ಹೋಗುತ್ತಿದ್ದರು. ಮೂರು ದಿನ ಮುಗಿದು ನಾಲ್ಕನೇ ದಿನ ಆದಾಗ, ಕೆಂಚಾನಾಯ್ಕರು ಬೆಳಿಗ್ಗೆ ಎಂಟು ತಾಸು ಬಡಿದಿದ್ದರೂ ಕೊಠಡಿಯಿಂದ ಎದ್ದು ಬರಲಿಲ್ಲ. ಕಾತರಗೊಂಡ ದೊಡ್ಡ ಹೆಂಡತಿಯು ಅವರ ಕೊಠಡಿಗೆ ಹೋಗೇಬಿಟ್ಟಳು. ನಾಯಕರು ಇನ್ನೂ ಮಲಗೇ ಇದ್ದಾರೆ. ಅವರ ಹಣೆಯ ಮೇಲೆ ಕೈಯಿಟ್ಟು ನೋಡಿದಾಗ ಕಿರುಬೆವರು ಬಂದಿದ್ದುದು ದೊಡ್ಡ ಹೆಂಡತಿಗೆ ಗೊತ್ತಾಯ್ತು. ಆ ಹೊತ್ತಿಗೆ ನಾಯಕರು ಎಚ್ಚೆತ್ತರು. ಕೆಂಗಣ್ಣುಗಳನ್ನು ಉಜ್ಜಿಕೊಂಡು ಎದ್ದು ಕೂತರು.

"ಯಾಕೆ ಇಷ್ಟು ಹೊತ್ತಾಯ್ತು ಏಳೋದು, ರಾತ್ರಿ ನಿದ್ರೆ ಬರಲಿಲ್ಲವೇ?" ಎಂದಳು ಹೆಂಡತಿ.

"ರಾತ್ರಿಯೆಲ್ಲಾ ಕೆಟ್ಟಕೆಟ್ಟ ಕನಸು ಬೀಳ್ತಿತ್ತು. ಬೆಳಗಿನ ಝಾವದಲ್ಲಿ ನಿದ್ದೆ ಗಾಢವಾಗಿ ಬಂದಿರಬೇಕು" ಎಂದರು ನಾಯಕರು.

"ಬೆಳಗಿನ ಝಾವ ಐದು ಗಂಟೆಗೆದ್ದು ಬೀದಿ ಬಾಗಿಲನ್ನು ಸಾರಿಸಲು ಹೋದಾಗ ದೊಡ್ಡ ಬಾಗಿಲಿನ ಅಗಳಿ ತೆಗೆದಿತ್ತು. ರಾತ್ರಿ ಅಗಳಿ ಹಾಕೋದೇ ಮರೆತರೇನೋ ಅಂದುಕೊಂಡೆ. ನೀವೇನಾದರೂ ಎದ್ದು ಹೋಗಿದ್ದಿರೇನು? ನಿದ್ದೆ ಸರಿಯಾಗಿ ಬರಲಿಲ್ಲ ಅಂದ್ರಿ," ಎಂದಳು ಹಂಡತಿ.

"ಇಲ್ಲವಲ್ಲ! ಬೀದಿ ಬಾಗಿಲ ಅಗಳಿ ತೆಗೆದಿತ್ತು ಅಂದ್ರೆ!! ಕಳ್ಳ ಗಿಳ್ಳ ಏನಾರೂ ಬಂದ್ದಿದ್ರೋ! ಎಲ್ಲಾ ನೋಡಿದೆಯಾ ಮನೇಲಿ?" ಎಂದು ಹೇಳುತ್ತಾ ನಾಯಕರು ಎದ್ದರು. ತಲೆದಿಂಬು ತೆಗೆದು ನೋಡಿದರು. ಬೀಗದ ಕೈಗೊಂಚಲಲ್ಲೇ ಇತ್ತು. ತಲೆ ಕಡೆಯ ಗೋಡೆ ಮೇಲಿದ್ದ ಸತ್ಯನಾರಾಯಣ ಪಟವನ್ನು ನೋಡಿದರು. ಕೈ ಜೋಡಿಸಿದರು.

ಆ ವೇಳೆಗೆ ಚಿಕ್ಕ ಹೆಂಡತಿಯೂ ಬಂದಳು. ಎಲ್ಲ ವಿಷಯವೂ ಅವಳಿಗೆ ತಿಳಿಯಿತು. "ಪಟ ಜರುಗಿ, ಗೋಡೇಲೇ ಹೂತಿರೋ ಸಂದೂಕಾನೂ ನೋಡಿಬಿಡೋದು ತಾನೇ! ಅಪ್ಪನ ಮನೇಲಿ ಕೊಟ್ಟಿದ್ದ ನಾಗಮುರಿ ಜಡೆಬಿಲ್ಲೆ ಕೂಡ ಅದರಲ್ಲೇ ನೀವು ಇರಿಸಿದಿರಿ, ತುಂಬಾ ಬೆಲೆಯಾದದ್ದು, ಹುಷಾರಾಗಿರೋಣ ಅಂದ್ರಿ" ಎಂದು ಆಕೆ ಅಂದಳು. ಸತ್ಯನಾರಾಯಣನ ಪಟವನ್ನು ವಾರೆಮಾಡಿ, ಸಂದೂಕದ ಬಾಗಿಲನ್ನು ತೆಗೆದರು. ನಾಯಕರಿಗೆ ಕಂಡಿದ್ದು ಖಾಲಿ ಸಂದೂಕ!!

"ಅಯ್ಯಯ್ಯೋ!" ಎಂದು ಕೂಗಿದಳು ಚಿಕ್ಕ ಹೆಂಡತಿ ದುಃಖದಿಂದ.



"ಇದ್ದುದ್ದೆಲ್ಲಾ ದೋಚಿಕೊಂಡು ಹೋಗಿದಾರಲ್ಲೇ ಯಾರೋ ಕಳ್ಳಸೂಳೆ ಮಕ್ಕಳು!!" ಎಂದು ಚೀರಾಡಲಾರಂಭಿಸಿದರು, ನಾಯಕರು.

"ಕೊತ್ವಾಲರಿಗೆ ಹೇಳಿ ಕಳಿಸೇ! ಕಾಳಂಭಟ್ಟರನ್ನ ಬರಹೇಳಲು ಆಳು ಕಳಿಸೇ" ಎಂದು ಕೆಂಚಾನಾಯಕರು ಹೇಳಿದರು.

ಕಾಳಂಭಟ್ಟರೇ ಮೊದಲು ಬಂದಿದ್ದು, "ಕೊಪ್ಪರಿಗೆ ನಿಧಿ ಸಿಗೋದು ಹಾಗಿರಲಿ, ಇರೋ ನಿಧೀನೇ ಕಳ್ಳತನವಾಯ್ತಲ್ಲಾ ಭಟ್ಟರೇ! ನಾನಿಲ್ಲೇ ಮಲಗಿದ್ದೇನೆ. ಆದರೂ ಯಾವ ಮಾಯದಲ್ಲಿ ಕಳ್ಳರು ಬಂದರೋ! ದೇವರೇ ಬಲ್ಲ," ಎಂದು ನಾಯಕರು ಅವರ ಹತ್ತಿರ ದುಃಖ ತೋಡಿಕೊಂಡರು ಗೋಪ್ಯವಾಗಿ. "ಸಮಾಧಾನ ತಂದುಕೊಳ್ಳಿ ನಾಯಕರೇ! ಕೊತ್ವಾಲರು ಇಷ್ಟರಲ್ಲೇ ಬರ್ತಾರೇ, ಹೊಸದಾಗಿ ಬಂದಿರೋರು, ಬಹಳ ಹೆಸರು ಪಡೆದಿರೋರು! ದೈವ ಸಹಾಯ ಇದ್ದರೆ ಹೋದ ಮಾಲು ಸಿಗಬಹುದು" ಎಂದು ಕಾಳಂಭಟ್ಟರು ಸಮಾಧಾನ ಹೇಳಿದರು.

ಅಷ್ಟು ಹೊತ್ತಿಗೆ ಕೊತ್ವಾಲರೇ ಬಂದರು. ವಿವರಗಳನ್ನೆಲ್ಲಾ ನಾಯಕರು ತಿಳಿಸಿದರು. "ಏನೇನು ವಸ್ತುಗಳು ಕಳುವಾಗಿದೆಯೋ ಅವುಗಳ ವಿವರಣೆ ಪಟ್ಟಿಯನ್ನು ಬರೆದುಕೊಡಿ. ಈಗ ತನಿಖೆ ಮಾಡೋಣ" ಎಂದರು. ಕೊಠಡಿಯನ್ನು ಪರೀಕ್ಷೆ ಮಾಡಿದರು. ಕಿಟಕಿಯ ಬಾಗಿಲೆಲ್ಲಾ ಭದ್ರವಾಗಿ ಹಾಕಿತ್ತು. ಮೇಲೊಂದು ಗವಾಕ್ಷಿ ಇತ್ತು. ಸಣ್ಣ ಗವಾಕ್ಷಿ. ಅದರಲ್ಲಾರೂ ಕಳ್ಳರು ಬರಲು ಸಾಧ್ಯವಿಲ್ಲ ಎಂದರು. ಮನೆಯೊಳಗೆಲ್ಲೂ ಕನ್ನಹಾಕಿದ ಹಾಗಿಲ್ಲ ಎಂದು ಸುತ್ತಾಡಿ ಕಂಡುಕೊಂಡರು. ಬೀದಿಬಾಗಿಲ ಅಗಳಿ ತೆಗೆದಿತ್ತು ಎಂದು ತಿಳಿದಾಗ, ಮನೆಯೋರ್ಯಾರೋ ಷಾಮೀಲಾಗಿರಬೇಕು. ಯಾರ್ಯಾರು ಮನೇಲಿರೋದು ಎಂದು ವಿಚಾರಿಸಿದರು. ಮೂವರು ಹೆಂಡಿರು, ಹದಿನೆಂಟು ಮಕ್ಕಳು, ನಾಯಕರು ಹೊರತಾಗಿ ಯಾರೂ ಮಲಗುತ್ತಿರಲಿಲ್ಲ. ದೊಡ್ಡವೆಲ್ಲಾ ಹನ್ನೆರಡರಿಂದ ಎಂಟರ ವಯಸ್ಸಿನ ಹೆಣ್ಣು ಮಕ್ಕಳು. ಮಿಕ್ಕವೆಲ್ಲಾ ಚಿಳ್ಳಪಿಳ್ಳ ಗಂಡು. ಹೆಂಡಿರ ಮೇಲೆ ಅನುಮಾನ ಬರೋ ಹಾಗಿರಲಿಲ್ಲ. ಮನೆ ಹೊರಗೆ ಪರೀಕ್ಷೆಗೆ ಹೊರಟರು. ಅಲ್ಲಿ ಸುಳು ಸಿಕ್ಕಿತು. ರಾಯರು ಮಲಗಿದ್ದ ಕೊಠಡಿಯ ಗವಾಕ್ಷದ ಹತ್ತಿರ ಹೆಜ್ಜೆ ಗುರ್ತುಗಳು ಕಂಡುಬಂದುವು. ಏಣಿ ತರಿಸಿ ಹತ್ತಿ ನೋಡಿದರು. ಸಣ್ಣಸಣ್ಣ ಹೆಜ್ಜೆಗಳು! ಕೋತಿ ಹೆಜ್ಜೆಗಳು! ಕೆಳಗಿಳಿದು ಬಂದು ನಾಯಕರನ್ನು ವಿಚಾರಿಸಿದಾಗ ಮೂರು ನಾಲ್ಕು ದಿನಗಳ ಹಿಂದೆ ಕೋತಿ ಆಡಿಸೋನು ಬಂದಿದ್ದುದು ಗೊತ್ತಾಯ್ತು.

"ನಾಯಕರೇ! ಬಿಡಿ ಚಿಂತೇನ. ವಿವರಣೆ ಪಟ್ಟೀನ ಬರೆದಿಡಿ, ಮುಂದಿನ ಕೆಲಸಾನ ತುರ್ತು ಮಾಡಬೇಕು" ಎಂದು ಹೇಳಿ ಕೊತ್ವಾಲರು ಹೊರಟುಹೋದರು.

ಕೊತ್ವಾಲರ ಪ್ಯಾದೆಗಳು ಹೋಗಿ ದರ್ಗದ ಎದುರಿನ ಛತ್ರದಲ್ಲಿದ್ದ ಕೋತಿ ಆಡಿಸುವವನನ್ನು ಠಾಣೆಗೆ ಕರೆತಂದರು. ಖುದ್ದಾಗಿ ಕೊತ್ವಾಲರೇ ವಿಚಾರಣೆ ನಡೆಸಿದರು. ಮಾಲೇನೂ ಅವನ ಹತ್ತಿರ ಇರಲಿಲ್ಲ. ಎಂಟುದಿವಸ ಬಂದೀಖಾನೇಲಿಟ್ಟು ಇವನ ಬಾಯಿ ಬಿಡಿಸೋಣ ಎಂದರು. ಅನ್ನೋದೇನೋ ಅಂದರು, ಆದರೂ ಮನಸ್ಸು ಅಳುಕುತ್ತಾಯಿತ್ತು. ಗವಾಕ್ಷದ ಹತ್ತಿರ ಕಂಡ ಹೆಜ್ಜೆಗಳು ಪುಟಾಣಿ ಹೆಜ್ಜೆ. ಈ

ಕೋತಿಹೆಜ್ಜೆಗಳು ಅದಕ್ಕೆ ಎರಡರಷ್ಟಾದರೂ ದೊಡ್ಡದು! ಅದೇ ಅಳುಕುತ್ತಿತ್ತು. ದಿನಗಳಾದ ಮೇಲೆ ತಿರುಗಿ ಪರೀಕ್ಷಿಸೋಣ ಎಂದು ನಾಯಕರ ಮನೆಗೆ ಕೊತ್ವಾಲರು ಬಂದರು. ತೆಂಗಿನಮರದ ಹತ್ತಿರ ಮಕ್ಕಳು ಆಡ್ತಾ ಇದ್ದುವು. "ನಾಯಕರಿದಾರ್ಯೇ..." ಎಂದು ಕೂಗಿದರು. ಆ ಕೂಗನ್ನು ಕೇಳಿಯೇ ಒಳಗಿಂದ ನಾಯಕರು ಬಂದರು. ಒಂದು ಕ್ಷಣ ಕೊತ್ವಾಲರಿಗೆ ಗುರ್ತೇ ಸಿಗಲಿಲ್ಲ. ಬೆಪ್ಪು ಬಡಿದುಹೋಗಿತ್ತು. ನಾಯಕರ ಮುಖ. "ಯಾಕೆ ನಾಯಕರೆ! ಮೈ ಚೆನ್ನಾಗಿಲ್ಲವೇ?" ಎಂದರು. "ಕರೀನಾಗರ ಕೊಲ್ಲಿಸಬಾರದಾಗಿತ್ತು," ಎಂದಷ್ಟೇ ನಾಯಕರು ಹೇಳಿದ್ದು!

ತೆಂಗಿನಮರದ ಹತ್ತಿರ ಆಡುತ್ತಿದ್ದ ಮಕ್ಕಳು ಜಗಳಕ್ಕೆ ಶುರುಮಾಡಿದ್ದುವು. ನಾಯಕರು ತೆಪ್ಪಗೇ ಇದ್ದರು. "ಯಾಕ್ರೋ ಜಗಳ ಕಾಯ್ತೀರಿ" ಅಂತ ಕೇಳಿ ಜಗಳ ತಪ್ಪಿಸುಕ್ಕೆ ಅತ್ತ ಕೊತ್ವಾಲರು ಹೋದರು. "ನಂಗೆ ಸಿಕ್ಕಿತು ಇವನು ಕಿತ್ಕೊಂಡ" ಎಂದು ಒಂದು ಮಗು ಹೇಳಿತು. "ಏನೋ ಅದು? ಎಲ್ಲಿ ಸಿಕ್ಕಿದ್ದು?" ಎಂದು ಕೇಳಿದರು ಕೊತ್ವಾಲರು. "ತೆಂಗಿನ ಮರಕ್ಕೆ ಕಟ್ಟಿತ್ತು. ನಂಗೆ ಸಿಕ್ಕಿತು. ಇವ ಕಿತ್ಕೊಂಡಿದಾನೆ ಎಂದ ಒಂದು ಹುಡುಗ ಅಳುತ್ತಾ. ಕೊತ್ವಾಲರು ಅವನ ಬೆರಳು ಬಿಡಿಸಿ ನೋಡಿದರು.

ಭೈರವಿ ತಾಯಿತಿ!

ಎಲಾ! ಜಗ್ಗೋಜಿ ಬಂದಿದ್ದಿರಬಹುದೇ ಈ ಊರಿಗೆ! ಎಂದು ಮನಸ್ಸಿನಲ್ಲೇ ಅಂದುಕೊಂಡರು. ಗಟ್ಟಿಯಾಗಿ ಹೇಳಿ ಊರಿನಲ್ಲಿ ಭಯ ಹುಟ್ಟಿಸುವ ಇಷ್ಟವಿರಲಿಲ್ಲ ಅವರಿಗೆ.

* * * *

ಮೂರು ತಿಂಗಳಾಯಿತು, ಕಳ್ಳ ಪತ್ತೆಯಾಗಲಿಲ್ಲ. ಇಲವಂಜಿ ರಾಯರ ನಿಧಿ ಇದ್ದ ಮನೆ ಹೋಯ್ತು ಅಂತ ಆ ವಂಶದಲ್ಲಿ ಉಳಿದಿದ್ದ ಒಬ್ಬ ಹೈದನಿಗೆ ಹುಚ್ಚು ಹಿಡಿಯಿತು. ಮನೆ ಕೊಂಡವನಿಗೆ ಬೆಪ್ಪು ಬಡಿಯಿತು. ಇನ್ನೇನು ಶಿವಲೀಲೆ ಕಾದಿದೆಯೋ ಎಂದು ಜನರು ಆಡಿಕೊಳ್ಳುತ್ತಿದ್ದರು.

* * * *

ಕೊಂಡೆನಕಪಲ್ಲಿಯ ತುಳಸಿತೋಟದ ಬಳಿಯಲ್ಲಿ ಪೂಜಾರಪ್ಪನು ಅಡ್ಡಾಡುತ್ತಿದ್ದಾಗ ಕನ್ನೋಜಿಯು ಬಂದು ಅಡ್ಡಬಿದ್ದ.

"ಯಾವಾಗ ಬಂದೆ? ಏನೇನು ಮಾಡಿಕೊಂಡು ಬಂದೆ, ಬರಿಗೈಯ್ಯಲ್ಲಿ ಬಂದ ಹಾಗೆ ಇದೆಯಲ್ಲಾ, ಜಗ್ಗು ಎಲ್ಲಿ?" ಎಂದೆಲ್ಲಾ ಪ್ರಶ್ನೆಗಳನ್ನು ಪೂಜಾರಪ್ಪ ಕೇಳಿದ.

ಪುಷ್ಯಮಾಸದ ಹೊತ್ತಿಗೆ ಮುಳಬಾಗಿಲ ಕಡೆಗೆ ಹೋದೆವು. ಮಾರೀಗುಡಿ ಪಡಸಾಲೇಲಿ ಉಳಿದುಕೊಂಡೆವು. ನೀನಿಲ್ಲೇ ಭಿಕ್ಷದವನ ತರಹ ಇರು. ನಾನು ಸುತ್ತಾಡಿಕೊಂಡು ಬರ್ತೀನಿ. ಹಿಂತಿರುಗಿದ ಮೇಲೆ ಏನು ಮಾಡೋದು ಹೇಳ್ತೀನಿ ಅಂದ ಅಣ್ಣ. ಮೂರು ವಾರಗಳು ಅವ ಬರಲೇ ಇಲ್ಲ. ನಾನೂ ಊರೆಲ್ಲಾ ಸುತ್ತಿ ಊರ ಹೊರಗೆಲ್ಲಾ ಅಲೆದೆ. ಕಡೆಗೆ ಅಣ್ಣನಿಗೇನಾದರೂ ಆಗಿರಬಹುದೋ ಎಂದು ಭಯ ಕೂಡ



ಹುಟ್ಟಿತು. ಆಗ ಅಣ್ಣ ಬಂದ. ಏನೇನು ಸುದ್ದಿ ತಿಳಿದೆ ಅಂತ ಕೇಳಿದ. ಹುಣಿಸೇತೋಪಿನ ಮಂಟಪ ಬಲು ಪಸಂದಾಗಿದೆ. ಯಾರಿಗೂ ಕಾಣದ ಹಾಗೆ ಅಲ್ಲಿರಬಹುದು. ಊರಿನಲ್ಲಿ ಕಂಚಾನಾಯಕರು ಭಾಳ ಶ್ರೀಮಂತರು. ಇಲವಂಜಿ ರಾಯರ ಮನೆ ಕೊಂಡಮೇಲೆ ಕರಿನಾಗರ ಇದ್ದ ಬಿಲಕ್ಕೆ ಹೊಗೆ ಹಾಕಿಸಿ ಕೊಲ್ಲಿಸಿದರಂತೆ. ದಿವಾನ್‌ಖಾನೆಯ ಗೋಡೆಯಲ್ಲಿ ನಗನಾಣ್ಯ ಸಿಕ್ಕಿತಂತೆ. ಎಂದು ವಿಚಾರಿಸಿ ತಿಳಿದುಕೊಂಡಿದ್ದನ್ನೆಲ್ಲಾ ಹೇಳಿದೆ. 'ಹಳ್ಳಿಗೆ ಹೋಗಿ ಪುಟ್ಟ ಮಂಗನ್ನ ಕರಕೊಂಡು ಬಾ, ಹುಣಿಸೇ ತೋಪಿನ ಮಂಟಪದಲ್ಲಿ ಬೈರಾಗಿ ವೇಶ ಹಾಕ್ಕೊಂಡಿರು. ವೀರಾಂಜನೇಯನ ಉಪಾಸನೆ ಮಾಡೋನ ಹಾಗಿರು. ಪುಟ್ಟ ಮಂಗನಿಗೆ ಗೋಂದುಂಡೆ ಕಚ್ಚಿಸಿ ಅದು ಬಾಯಿ ಬಿಡದ ಹಾಗೆ ಮಾಡು. ನಾಯಕರನ್ನು ನಿನ್ನ ಬಳಿ ಕಳಿಸ್ತೀನಿ. ಮಿಕ್ಕದ್ದನ್ನೆಲ್ಲಾ ಸಮಯ ಬಂದಾಗ ತಿಳಿಸ್ತೀನಿ ಎಂದು ಅಣ್ಣ ಹೇಳಿ ಹೊರಟುಹೋದ. ಅವನು ಹೇಳಿದಂತೆ ನಾನು ಮಾಡಿದೆ.

ನಾಯಕರು ಒಂದುಸಲ ಬಂದು ಅಂಜನ ಹಾಕ್ಕೊಂಡು ನಿಧಿ ಇದೆಯಾ ಹೇಳುಕ್ಕಾಗುತ್ತಾ ಅಂದರು. ವೀರಾಂಜನೇಯನ ಪೂಜೆಹಾಕಿ ನೋಡ್ಬೇಕು ಎಂದೆ. ಮಾರನೆ ದಿನ ಬಂದರು. ಪುಟ್ಟಮಂಗ ಎಷ್ಟು ಚೆನ್ನಾಗಿ ವಿಗ್ರಹ ಕಡೆದ ಹಾಗೆ ನಿಂತಿತ್ತು ಪೂಜಾರಪ್ಪನೋರೆ! ಅಲ್ಲೇ ತಬ್ಬಿಕೊಂಡು ಬಿಡಲಾ ಅನ್ನಿಸ್ತು.

ಅಣ್ಣ ರಾತ್ರಿ ಬಂದು, ನೀನು ನಾಳೆ ಈ ಪ್ರಸಾದಾನ ನಾಯ್ಕರಿಗೆ ಕೊಡು, ಹೀಗೆ ಹೀಗೆ ಹೇಳು. ಆಮೇಲೆ ಪೂಜಾರಪ್ಪನೋರ ಬಳಿ ಹೊರಟುಹೋಗು ಅಂತ ಹೇಳಿ, ಪುಟ್ಟ ಮಂಗನ್ನ ಭುಜದ ಮೇಲೆ ಕೂರಿಸಿಕೊಂಡು ಹೋದ. "ಅಣ್ಣ ಹೇಳಿದ ಹಾಗೆ ಮಾಡಿದೆ. ಬರೀಗೈಯಲ್ಲಿ ಬಂದೆ" ಎಂದ ಕನ್ನೋಜಿ.

ಒಂದು ವಾರವಾಯಿತು. "ಏನೋ ಕನ್ನು! ಇನ್ನೂ ಜಗ್ಗು ಬರಲಿಲ್ಲವಲ್ಲ. ಇನ್ನೇನೂ ವಿಷಯ ತಿಳಿಯದೇ ನಿನಗೆ" ಎಂದು ಪೂಜಾರಪ್ಪ ಕನ್ನೋಜಿಯನ್ನು ಕೇಳುತ್ತಿದ್ದಾಗ, ದೊಡ್ಡ ರುಮಾಲು ಸುತ್ತಿಕೊಂಡು, ಅದರ ಮೇಲೆ ಪುಟ್ಟ ಮಂಗನ್ನ ಕೂರಿಸಿಕೊಂಡು ಜಗ್ಗೋಜಿ ಬಂದ. ಪುಟ್ಟಮಂಗ ಕನ್ನೋಜಿಯ ತೋಳಮೇಲಕ್ಕೆ ಛಂಗಿ ಕೂತುಕೊಂಡಿತು. ದೊಡ್ಡ ರುಮಾಲನ್ನು ತೆಗೆದು ಪೂಜಾರಪ್ಪನವರ ಪಾದದ ಬಳಿ ಇಟ್ಟು, ಜಗ್ಗೋಜಿ ಅಡ್ಡಬಿದ್ದ.

ಅವನ ತಲೆಯನ್ನು ನೇವರಿಸುತ್ತಾ "ಏನೆಲ್ಲಾ ಮಾಡಿಕೊಂಡು ಬಂದೆ, ಜಗ್ಗು!" ಎಂದು ಪೂಜಾರಪ್ಪ ಕೇಳಿದ.

"ಕನ್ನೂನ ಮುಳಬಾಗಿಲಲ್ಲಿ ಬಿಟ್ಟು, ಏನಾರಾ ಕೆಲಸ ಹುಡುಕುತ್ತಾ ಎರಡು ದಿನ ಓಡಾಡಿದಾಗ ಕೆಂಚಾನಾಯ್ಕರ ವಿಷಯ ತಿಳೀತು. ಇಲವಂಜಿ ರಾಯರ ಕೊಪ್ಪರಿಗೇಲಿದ್ದ ನಿಧಿಯೆಲ್ಲಾ ಕರೀನಾಗರ ಸತ್ತಾಗ ಇಜ್ಜಿಲು ಆಯಿತು ಅಂತ ಜನ ಆಡಿಕೋತಿದ್ದರು. ಈ ನಂಬುಗೇನೇ ಹಿಡಿದು ಇಜ್ಜಲನ್ನು ನಿಧಿ ಮಾಡಿಸ್ತೀನಿ ಅಂದರೆ ನಾಯಕರು ಏನು ಬೇಕಾದರೂ ಮಾಡ್ತಾರೆ ಅಂತ ತಿಳೀತು. ಆವಣೀಲಿ ಜಾತ್ರೆಯಾಗುತ್ತೆ ಅಂತ ತಿಳಿದಾಗ ಅಲ್ಲೂ ಹೋಗಿ ವಿಚಾರವನ್ನೆಲ್ಲಾ ತಿಳಿದುಬಂದು ಕನ್ನೂನ ಹಳ್ಳಿಗೆ ಕಳಿಸಿ ಪುಟ್ಟ ಮಂಗನ್ನ ತಾ ಅಂದೆ.

ಇಲವಂಜಿ ಹೈದನ ಹಾಗೆ ಹುಚ್ಚನಂತೆ ಆಟ ಕಟ್ಟಿದೆ ಆವಣೇಲಿ. ಕೋತಿ ಭಾಷೆ ಕಲಿತಿದ್ದು ತುಂಬಾ ಸಹಾಯ ಆಯಿತು, ಆವಣಿ ಜಾತ್ರೇಲಿ, ಮುಳಬಾಗಿಲಿಗೆ ಬಂದಾಗ ಕೋತಿ ಆಡಿಸೋನೂ ಬಂದಿದ್ದ. ಭೈರವಿ ಒಲಿದಿದ್ದಾಳೆ ಅಂತ ಖಾತರಿಯಾಯ್ತು. ಕನ್ನ ಹೇಳಿದ್ದನ್ನೆಲ್ಲಾ ಬಲು ಚೆನ್ನಾಗಿ ಮಾಡಿದ. ಇಲವಂಜಿ ಹುಚ್ಚನ ಹಾಗೆ ಆಟ ಕಟ್ಟಿ ಮನೆಯೊಳಕ್ಕೆ ನುಗ್ಗಿ ಒಂದು ಬಾರಿ ಕಣ್ಣು ಹೊರಳಿಸಿ ಬಂದೆ.

ಕನ್ನ ಹೊರಟುಹೋದ ಮೂರನೆ ರಾತ್ರಿ ನಾಯಕರ ಕೊಠಡಿ ಗವಾಕ್ಷದ ಹತ್ತಿರ ಬೊಂಬೊಂದನ್ನು ಇಟ್ಟೆ. ಪುಟ್ಟ ಮಂಗ ಹತ್ತಿ, ಗವಾಕ್ಷದೊಳಗೆ ಹೋಗಿ, ಬೀದಿಬಾಗಿಲ ಅಗಳಿ ತೆಗೆಯಿತು. ಏನಾರೂ ಸದ್ದಾಗಿರಬೇಕಲ್ಲ! ಒಳಗೆ ಹೋದೆ. ಸತ್ಯನಾರಾಯಣನ ಪಟ ವಾರೆಯಾಗಿತ್ತು. ಸಂದೂಕ ಕಾಣಿಸ್ತಾ ಇತ್ತು. ಪುಟ್ಟ ಮಂಗ ಗವಾಕ್ಷದಿಂದ ಪಟದ ಮೇಲಕ್ಕೇ ಛಂಗಿರಬೇಕು, ಭೈರವಿ ಒಲಿದರೆ ಕೇಳಬೇಕೇ! ಆ ಹೊತ್ತಿಗೆ ಸರಿಯಾಗಿ ನಾಯಕರು ಹೊರಳಿದರು. ಅರೆಹೊಟ್ಟೇಲಿ ಮೂರು ದಿನದಿಂದ ಇದ್ದ ಅವರು ಪ್ರಸಾದ ತಿಂದಾಗ, ಅದರಲ್ಲಿದ್ದ ಗಾಂಜಾ ಕೆಲಸ ಮಾಡ್ದೇ ಇರುತ್ಯೇ? ಅಂದ ಹಾಗೆ, ಪೂಜಾರಪ್ಪನೋರೇ! ಕೆಂಪುಕಲ್ಲುಸಕ್ಕರೆ ಜಡಿದು ಹಾಕಿದರೆ ಗಾಂಜಾದ ಸುಳಿವೂ ತಿಳಿಯುಲ್ಲ! ಹೊರಳಿದಾಗ ದಿಂಬು ಮೇಲಕ್ಕೆ ಸರಿಯಿತು. ಬೀಗದ ಕೈಗೊಂಚಲು ಸಪ್ಪಳ ಮಾಡಿತು. ಬೇಗ ಸಂದೂಕ ಖಾಲಿಮಾಡಿ, ಬೀಗಹಾಕಿ, ಪಟ ಸರಿಮಾಡಿ, ಬೀಗದ ಕೈಗೊಂಚಲನ್ನು ದಿಂಬಿನ ಕೆಳಗೆ ಇಟ್ಟು, ಬೀದಿ ಬಾಗಿಲಲ್ಲೇ ಹೊರಬಿದ್ದೆ. ಹಿತ್ತಿಲ ಬಾಗಿಲ ಬಳಿಯಲ್ಲೇ ಬೆರಣಿ ಮುದುಕಿ ಮಲಗಿರ್ತಾಳೆ ಅಂತ ಗೊತ್ತಿತ್ತು. ಅದಕ್ಕೇ ಬೀದಿ ಬಾಗಿಲಿಗೆ ಪನುಗು ಹಚ್ಚಿ, ಪುಟ್ಟ ಮಂಗನಿಗೆ ತೋರಿಸಿದ್ದೆ.

ಸೊರಬದಲ್ಲಿ ಕಟ್ಟಿಹಾಕಿದ್ದ ಪ್ಯಾದೆಯೇ ಮುಳಬಾಗಿಲಿಗೆ ಕೊತ್ವಾಲನಾಗಿ ಬಂದಿದ್ದುದುದ ಗೊತ್ತಾಗಿತ್ತು. ಅವರ ಸೋದರ ಮಾವನಿಗೆ ಅರಮನೇಲಿ ತುಂಬಾ ಮೆಹನತ್ತಂತೆ. ಅದಕ್ಕೇ ತೆಂಗಿನ ಮರಕ್ಕೆ ಭೈರವಿ ತಾಯಿತೀನ ಕಟ್ಟಿ ಬಂದೆ. ಹುಡುಕಿದರೆ ಅವನಿಗೂ ಯಾರು ಬಂದಿದ್ದಿರಬಹುದು ಅಂತ ಅನುಮಾನ ಬರಲಿ ಅಂತ.

ಪಾಪ! ಕೋತಿ ಆಡಿಸಿ ಜೀವನ ಹೊರೆಯೋನಿಗೆ ಪ್ಯಾದೆಗಳು ಏನೆಲ್ಲಾ ಗೋಳು ಹುಯ್ದುಕೋತಾರೋ! ಆದರೂ ಅಂಥ ಜಾಣಕೋತೀನ ಹೆದರಿಸಿ ಬೆದರಿಸಿ ಕೋಲು ತೋರಿಸ್ತಾನಲ್ಲ ಅಂತ ನನಗೆ ಬಲು ದುಃಖ ಆಗಿತ್ತು. ಅದಕ್ಕೇ ಅವನೂ ಎರಡು ದಿನ ಅನುಭವಿಸಲಿ ಅಂತ ಸುಮ್ಮನಾದೆ"

ಎಂದು ಜಗ್ಗೋಜಿ ವರದಿ ಒಪ್ಪಿಸಿದ.

ರುಮಾಲು ಬಿಚ್ಚಿದ ಪೂಜಾರಪ್ಪ. ಕಣ್ಣು ಕಣ್ಣು ಬಿಡೋ ಹಾಗಾಯ್ತು! "ಇಲವಂಜಿರಾಯನಿಗೆ ಇಷ್ಟೆಲ್ಲಾ ನಗನಾಣ್ಯ ಇತ್ತು ಅಂತ ಯಾರಿಗೆ ಗೊತ್ತಿತ್ತು! ಇಷ್ಟು ದೊಡ್ಡ ವಜ್ರಗಳನ್ನು ಕಂಡೇ ಇರಲಿಲ್ಲವಲ್ಲ! ಇನ್ನೂ ಹೀಗೇ ಎಷ್ಟೋ ಪಾಳೇಗಾರರ ಹತ್ತಿರ ಏನೇನೆಲ್ಲಾ ಇದ್ದುದು, ಎಲ್ಲೆಲ್ಲಿ ಹುದುಗಿದೆಯೊ ಏನೋ?" ಎಂದು ಪೂಜಾರಪ್ಪ ಹೇಳಿದ.

"ಭೈರವಿ ತಾಯಿಯ ಹರಸುವ ಕೈ ನಿಮ್ಮ ತಲೇ ಮೇಲೆ ಯಾವಾಗಲೂ ಇರಲಿ" ಎಂದು ಪ್ರಾರ್ಥಿಸಿದ.

# "ಕತ್ತಿ ವರಸೆ ಕಾಮಯ್ಯ"

"ಬೆಟ್ಟದಪುರದ ಮಲ್ಲಿಕಾರ್ಜುನಸ್ವಾಮಿ ದೇವಾಲಯದ ಜಾತ್ರೆ ಹೊತ್ತಿಗೆ, ದೇವೇಂದ್ರನೇ ಬಂದು, ಈಶ್ವರನ ಕಾಲಬಳಿಯಲ್ಲಿ ವಜ್ರಾಯುಧವನ್ನು ಅರ್ಪಿಸುತ್ತಾನಂತೆ."

-ಸುಲ್ತಾನನೇ ಮಲ್ಲಿಕಾರ್ಜುನಸ್ವಾಮಿಗೆ ವಜ್ರಪಚ್ಚೆಯ ನಾಗಮುರಿಯನ್ನು ಮಾಡಿಸಿಕೊಟ್ಟಿದ್ದನಂತೆ-

"ಚಿನ್ನ ಬೆಳ್ಳಿ ಕೆಲ್ಸ ಐತ ಮಾಡ್ನೋದು!
ಚಿನ್ನ ಬೆಳ್ಳಿ ಕೆಲ್ಸ ಐತ ಮಾಡ್ನೋದೂ!"

ಎಂದು ಕೂಗುತ್ತಾ, ಹಾದಿ ಚಿನವಾರನೊಬ್ಬ ಬೆಟ್ಟದಪುರದ ತೊಟ್ಟಿಮನೆ ಬೀದೀಲಿ ಬೆಳಿಗ್ಗೆ ಹತ್ತು ಗಂಟೆ ಹೊತ್ತಿನಲ್ಲಿ ನಡೆದುಹೋಗುತ್ತಿದ್ದ. ಹಣೆಯ ಮೇಲೆ ಕಡ್ಡಿ ನಾಮಗಳನ್ನಿಟ್ಟುಕೊಂಡು ತಲೆಯ ಕೂದಲ ಮೇಲೆ ತವರದ ಪೆಟ್ಟಿಗೆಯೊಂದನ್ನು ಹೊತ್ತು, ಕಸೆ ಅಂಗಿ ತೊಟ್ಟು ಕಚ್ಚೆಪಂಚೆಯುಟ್ಟ ಹಾದಿ ಚಿನವಾರನು ಲಕ್ಷಣವಾಗಿಯೇ ಕಾಣುತ್ತಿದ್ದ.

ಸುಲ್ತಾನನ ಕಾಲದಲ್ಲಿ ಮಲ್ಲಿಕಾರ್ಜುನ ದೇವಾಲಯಕ್ಕೆ ಸಾಕಷ್ಟು ಜವಹಿರಿ ಇತ್ತು. ಸುಲ್ತಾನನೇ ವಜ್ರಪಚ್ಚೆಯ ನಾಗಮುರಿಯನ್ನು ಮಾಡಿಸಿಕೊಟ್ಟಿದ್ದನೆಂದೂ ಪ್ರತೀತಿ. ಜವಹಿರಿಗಳೆಲ್ಲಾ ದೇವಸ್ಥಾನದ ಪೇಷ್ಕಾರರ ಸ್ವಂತ ಸುಪರ್ದಿನಲ್ಲಿದ್ದುವು. ದೇವಸ್ಥಾನದ ಆಡಳಿತಕ್ಕೂ ಕೂಡ ಅವರೇ ಜವಾಬ್ದಾರರು. ಬೆಟ್ಟದಪುರದಲ್ಲಿ ವಾಸವಾಗಿದ್ದ ಪೇಷ್ಕಾರರು ಶ್ರೀಮಂತರು: ಊರಲ್ಲಿ ಅವರದೇ ಎರಡಂತಸ್ತಿನ ತೊಟ್ಟಿಮನೆ. ಹದಿನಾರು ಅಂಕಣದ, ನಾಡುಹೆಂಚು ಹಾಕಿದ್ದ, ಆ ಮನೆಗೆ ಜಾತ್ರೆ ಹೊತ್ತಿಗೆ ಸುಣ್ಣ ಬಣ್ಣ ಮಾಡಿ, ನೀಲೀಕಾರಣೆ ಬಳಿದು ರಂಗೋಲಿ ಇಟ್ಟಾಗ, ಎರಡೂ ರಸ್ತೆಗಳಿಂದ ಬಲು ಧಿಕಾವಾಗಿ ಕಾಣುತ್ತಿತ್ತು. ಪೂರ್ವದ ಬಾಗಿಲಿಂದಲೇ ಪೇಷ್ಕಾರರು ಓಡಾಡುತ್ತಿದ್ದರು. ವ್ಯಾಪಾರಿಗಳೂ, ರೈತರೂ, ಇತರರೂ ಉತ್ತರದ ಬಾಗಿಲಿಂದ ಬಂದು ಹೋಗುತ್ತಿದ್ದರು.

ಹಾದಿ ಚಿನವಾರ ಕೂಗುತ್ತ ಬಂದಾಗ, ಉತ್ತರದ ಬಾಗಿಲ ಕಡೆಯಿಂದ ಅವನನ್ನು ಯಾರೋ ಕರೆದರು. ಇವನು ಹೋದಾಗ ಮನೆಯವರೊಬ್ಬರು, "ಕೆಲವು ಹರಳುಗಳು ಬಿದ್ದುಹೋಗಿವೆ, ಸರಿಯಾಗಿ ಮೆಟ್ಟಿ ಕೊಡಬೇಕು. ಸಾಮಾನೆಲ್ಲಾ ಇದೆಯಾ? ಏನು ಕೂಲಿ ಬೇಕು?", ಎಂದು ಕೇಳಿ ಒಡವೆಯೊಂದನ್ನೂ, ಬಿಡಿ ಹರಳುಗಳನ್ನೂ ಇವನೆದುರಿಗೆ ಇಟ್ಟರು. "ಸಾಮಾನೆಲ್ಲಾ ಇದೆ, ಸ್ವಲ್ಪ ಬೆಂಕಿ ಕೊಟ್ಟರೆ ಅಗ್ಗಿಷ್ಟಿಕೆಗೆ ಹಾಕಿ ಇಲ್ಲೇ ಹರಳು ಮೆಟ್ಟಿ ಕೊಡ್ತೀನಿ! ಧಣೀರ ಹತ್ತಿರ ಕೂಲಿ ಕೇಳ್ಬೇಕಾ! ಕೆಲ್ಸ ನೋಡಿ, ಖುಷಿ ಬಂದದ್ದು ಕೊಡೀರಾ" ಎಂದು ತನ್ನ ಸಾಮಾನುಗಳನ್ನೂ ಬಾಗಿಲಬಳಿ ಕಲ್ಲುಕಟ್ಟೆಯ ಮೇಲೆ ಹರಡಿಕೊಂಡ. ಮನೆಯವರು ಒಳಗಿಂದ ಬೆಂಕಿ ತರಿಸಿಕೊಟ್ಟು ಚಿನವಾರನ ಮುಂದೆಯೇ ಕುಳಿತರು. ಚಿನವಾರ ಕೆಲಸಕ್ಕೆ ಶುರುಮಾಡಿದ.

* * * *

"ಬತ್ತಾಸ್ ಬೇಕಾ ಬತ್ತಾಸ್!
ಭರ್ಜರಿ ಬತ್ತಾಸ್!
ಸುಲ್ತಾನ್ಪಸಂದ್ ಬತ್ತಾಸ್!
ಕಾಸಿಗೆಂಟು ಬತ್ತಾಸ್!
ಬತ್ತಾಸ್ ಬೇಕಾ ಬತ್ತಾಸ್!"

ಎಂದು ಕೂಗುತ್ತಾ ಬತ್ತಾಸ್, ಕಲ್ಯಾಣಸೇವೆಗಳ ಬುಟ್ಟಿಯನ್ನು ಅಡ್ಡೆ ಮೇಲೆ

ಹೊತ್ತುಕೊಂಡು ಆ ರಸ್ತೆಯಲ್ಲಿ ಬಂದ. ಚಿನವಾರ ಒಂದುಕ್ಷಣ ಕೆಲಸ ನಿಲ್ಲಿ ಬತ್ತಾಸ್‌ನವನ ಹತ್ತಿರ ಮೂರು ಕಾಸಿನ ಕಲ್ಯಾಣಸೇವೆ ಕೊಂಡುಕೊಂಡ. "ಬಾಯ ಕಲ್ಯಾಣಸೇವೆ ಇದ್ದರೆ ಅಗ್ಗಿಷ್ಟಿಕೆ ಊದುಕ್ಕೆ ಸುಲಭ" ಎಂದು ಮನೆಯವರಿಗೆ ಸಮಾಧಾ ಹೇಳುತ್ತಾ, ಎರಡು ಕಲ್ಯಾಣಸೇವೆ ಕಾಳನ್ನು ಬಾಯಿಗೆ ಹಾಕಿಕೊಂಡ. ಮನೆಯವ ಸ್ವಲ್ಪ ಕೋಪ ಬಂದಂತೆ ಕಾಣಿಸಿತು. "ಬೇಗ ಕೆಲಸ ಮುಗಿಸೋ ಆಚಾರಿ! ಯಜಮಾ ಬರೋ ಹೊತ್ತಾಯ್ತು! ಕಲ್ಯಾಣ ಸೇವೆ ಚೀಪ್ತಾ ಕೂತರೆ ಆಯಿತು ಕೆಲಸ" ಎಂದು ಹ ಸೊಂಟದಿಂದ ನಶ್ಯದ ಡಬ್ಬಿ ತೆಗೆದು ತೆರೆದರು. ಖಾಲಿ! ಅದನ್ನು ಕಂಡ ಬತ್ತಾಸ್‌ನವ "ಧಣೀರಾ! ನಂತಾವೈತೆ ನಶ್ಯ, ಹಸನಾದ ನಶ್ಯ. ನಾನೇ ತಿಕ್ಕಿದ್ದು, ಬೇಕಾರ ಒಂದು ಚಿಟ ನೋಡಿ" ಎಂದು ಹೇಳುತ್ತಾ, ತನ್ನ ಸೊಂಟದಿಂದ, ಒಂದು ಪಟ್ಟೆ ತೆಗೆದು ಬಿಡಿ ಮನೆಯವರ ಎದುರಿಗೆ ಚಾಚಿದ. ಒಂದು ಚಿಟಿಕೆ ತೆಗೆದು ಮೂಗಿಗೆ ಏರಿಸಿ, ಮನೆಯ ಮೆದುವಾದ, "ಎಲಲಾ! ಈ ನಶ್ಯ ಎಲ್ಲಿ ಸಿಕ್ತದೆ! ಹೇಗೆ ತೀಡಿದೆ? ಎಷ್ಟು ಬೆಣ್ಣೆ ಹಚ್ಚಿದ ಎಷ್ಟು ಸುಣ್ಣ!" ಎಂದೆಲ್ಲಾ ಕೇಳಲು ಶುರುಮಾಡಿದ. ಬತ್ತಾಸ್‌ನವನ ಪಟ್ಟೆ ಖಾಲಿಯಾಗೋ ತನಕ ಮಾತು ನಡೆಯುತ್ತಿತ್ತು. ನಂತರ ಬತ್ತಾಸಿನವನು ತನ್ನ ದಾ ಹಿಡಿದುಹೋದ. ಅವನು ಹೋದ ಸ್ವಲ್ಪ ಹೊತ್ತಿನಲ್ಲಿ ಚಿನವಾರ ತನ್ನ ಕೆಲಸ ಮುಗಿಸಿದ.

"ಕೆಳಗೆ ಎತ್ತಿ ಹಾಕಿದರೂ, ಈ ಹರಳುಗಳು ಕಳಚಿಕೊಳ್ಳಲ್ಲ, ಸಾಹುಕಾರ್ರೇ! ಇಷ್ಟು ಪಸಂದ್ ಕೆಲಸ ಮಾಡೋರ್ಯಾರೂ ಸಿಗುಲ್ಲ ರಾಯರೇ! ನಮ್ಮ ತಾತನ ತಾತ ಸುಲ್ತಾನನ ಹತ್ತಿರ ಕೆಲಸ ಮಾಡ್ತಾ ಇದ್ದೋರು. ಕೆಲಸ ಕೆಟ್ಟರೆ ತಲೆ ಹಾರಿಸ್ತಾ ಇದ್ದರು ಸುಲ್ತಾನ್ರು. ಕೆಲಸ ನೋಡಿ ಕೈತುಂಬ ಕೂಲಿ ಕೊಡ್ತೀರಾ ರಾಯ್ರಾ" ಎಂದು ಚಿನವಾರ ಬೇಡಿದ.

ಮನೆಯವನು ಒಡವೆ ಕೈಲಿ ಹಿಡಿದು ನೋಡಿ, ಸಂತಸದ ಕಳೆ ಅವನ ಮುಖದ ಮೇಲೆ ಕಂಡಾಗ, ಚಿನವಾರ ಬೇಡಿಕೆಯನ್ನು ಮುಂದುವರೆಸಿದ.

"ಹತ್ತು ವರಹಾ ಕೊಟ್ಟರೂ ಇಂತ ಕೆಲಸ ಯಾರೂ ಮಾಡುಲ್ಲ. ಮಾರಾಯ್ರು ಐದು ವರಹಾನಾದರೂ ಕೊಡಬೇಕು. ಒಡವೆ ಏನಿಲ್ಲ ಅಂದರೂ ಸಾವಿರ ವರಹಾ ಆಗೋದು! ಏನೆಲ್ಲಾ ವಜ್ರ. ಏನೆಲ್ಲಾ ಪಚ್ಚೆ!" ಎಂದು ಕೇಳಿಕೊಂಡ.

ಗಹಗಹಿಸಿ ನಕ್ಕ ಮನೆಯವ. "ಈ ಒಡವೇಗೆ ಮೂರು ವರಹಾ ಆಗುಲ್ಲ, ಅದೂ ತಿಳಿದೇ ಇರೋ ಚಿನವಾರ ನೀನು, ಐದು ವರಹ ಕೂಲಿ ಬೇಕಾ! ಎಲ ಎಲಾ! ನಾನೇನು ಮಂಕ ಅಂತ ತಿಳಿದೆಯಾ! ಅರಸುಮಗ ಅಂತ ನೆನೆಸಿದೆಯಾ! ತೊಗೋ ನಿನ್ನ ಕೂಲೀನ" ಎಂದು ಎರಡು ದುಗ್ಗಾಣಿ ಅವನ ಕಡೆಗೆ ಎಸೆದು, ಒಡವೆ ತೆಗೆದುಕೊಂಡು ಮನೆಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡ.

"ಬಿಳಿಹರಳು ಕೆಲಸಕ್ಕೆ ಸುಲ್ತಾನ ಕೂಡ ಒಂದೇ ದುಗ್ಗಾಣಿ ಕೊಡ್ತಿದ್ದ. ಇವ ಮನೆ ಮಗನ್ಹಾಗೆ ಕಾಣಿಸುಲ್ಲ. ಮನೆ ಅಳಿಯಾನೇ ಇರಬೋದೇನೋ, ಸಿಕ್ಕಿದ್ದೇ ನನಪುಣ್ಯ" ಎಂದೆಂದುಕೊಂಡು ಚಿನವಾರ ತನ್ನ ಸಾಮಾನು ತುಂಬಿಕೊಂಡು ತವರದ ಪೆಟ್ಟಿಗೆ ಹೊತ್ತುಕೊಂಡು ಹೋರಟ.





"ಚಿನ್ನ ಬೆಳ್ಳಿ ಕೆಲ್ಸ ಐತಾ ಮಾಡ್ತೋದೂ...."

* * * *

ಬೆಟ್ಟದ ಜಾತ್ರೆ ಇನ್ನೂ ಮೂರು ದಿನ ಇರೋವಾಗಲೇ ಬೆಟ್ಟದಪುರದ ಸಂತೆ ಮಾಳದಂಚಿನಲ್ಲಿ ದೊಂಬರಾಟ ಆರಂಭವಾಗಿತ್ತು. ನಿಂತವನ ಎತ್ತರದಷ್ಟೇ ನೆರಳೂ ಬೀಳುತ್ತಿತ್ತು. ಜಾತ್ರೆಗೆ ಬಂದ ಜನವೆಲ್ಲಾ ಆಟನೋಡಲು ಸುತ್ತ ಎಲಡಿಕೆ ಜಗಿಯುತ್ತಾ ಕೂತಿದ್ದರು. ಕಠಾರಿ ಕಚ್ಚೆ ಹಾಕಿ, ಕಿರಿಗೆ ಉಟ್ಟು, ಬಿಗಿ ರವಿಕೆ ತೊಟ್ಟ ಮೂರು ಹೆಣ್ಣು ಮಕ್ಕಳು, 8-10 ವಯಸ್ಸಿನವು, ಹಿಂದೆ ಹಿಂದಕ್ಕೆ ಬಾಗಿ, ಸುರುಳಿಯಾಗಿ ಚಕ್ರ ತಿರುಗಲು ಶುರುಮಾಡಿ, ಮೂರು ಮೂರು ಸುತ್ತು ಪಲ್ಟಿ ಹೊಡೆದವು.

"ಎಲಾ! ಈ ಮಕ್ಕಳಿಗೆ ಮೂಳೇನೇ ಇಲ್ವಾ. ಹೆಂಗೆ ಅಂದರೆ ಹಂಗೆಲ್ಲಾ ಬಗ್ಗುತ್ತವೆ."

"ತೊಟ್ಟಿಲಿನಾಗಿಂದ ಹಿಂಗೆ ಹಂಗೆ, ಮತ್ತೆಂಗೆಲ್ಲಾ ಬಗ್ಗಿಸಿ ಬಗ್ಗಿಸಿ ತರಪೇತು ಮಾಡ್ತಾರ್ಲ್ಲಾ."

"ಬೆಳೆದ ಮೇಲೆ ಬದುಕು ಮಾಡುಕ್ಕೆ ಆಗುತ್ತಾ."

ಸುತ್ತ ನೆರೆದಿದ್ದ ಜನರಲ್ಲಿ ಕೆಲವರು ಹೀಗೆಲ್ಲಾ ಆಶ್ಚರ್ಯಪಡುತ್ತಾ ಮಾತನಾಡಿಕೊಂಡರು.

ಡೋಲ್ ಬಾರಿಸುತ್ತಿದ್ದವ ರಾಗರಾಗವಾಗಿ ಹೇಳಲಾರಂಭಿಸಿದ.

"ಎಲ್ಲಾರೂ ನೋಡಿ! ಈಗ ಕತ್ತಿವರಸೆ ತೋರಿಸ್ತೀವಿ. ನಿಮ್ಮ ಕಣ್ಣು ಕಂಡಿದ್ದು ನೀವು ನಂಬೋಕಾಗುಲ್ಲ. ಹೆಂಗುರುಳ್ಳೋರು, ಹೆತ್ತ ಹೆಣ್ಮಕ್ಕಳು, ಹಾರವರೂ ನೋಡೋದು ಬೇಡ. ಪಟ್ಟಣದಲ್ಲಿ ಇದು ಆಡಿದಾಗ ಅಂಚೆ ಭಕ್ಷಿಯವರೇ ಮೂರ್ಛೆ ಹೋದರು, ಹುಷಾರ್!

ಬರ್ತಾನೆ ಕತ್ತಿವರಸೆ ಕಾಮಯ್ಯ! ನೋಡಿ ನೋಡಿ! ಬರ್ತಾನೆ ಕಾಮಯ್ಯ.

ಛಿಗೀತಾ, ನೆಗೀತಾ ಬತ್ತಾನೆ! ನೋಡಿ ನೋಡಿ! ಅಕೋ ಬಂದ ಕಾಮಯ್ಯ.

ಬಂದೇ ಬಂದ ಕಾಮಯ್ಯ-ದುರ್ಗಿಗುಡಿಯಿಂದ ಬಂದ ನಂಕಾಮಯ್ಯ!"

ಅಂತ ಕೂಗ್ತಾ ಇರುವಾಗಲೇ, ಪಡುವಲ ಕಡೆಯಿಂದ ಜನರ ಮಧ್ಯದಿಂದ ಕಾಮಯ್ಯ ನುಗ್ಗಿ ಬಂದು ಢೋಲಿನವನೆದುರಿಗೆ ನಿಂತ. ಕೆಂಪು ಚಚ್ಚೌಕಳಿಯ ಮಗುಟವನ್ನು ಕಠಾರಿ ಕಚ್ಚೆಹಾಕಿ ಉಟ್ಟಿದ್ದಾನೆ. ಬೆತ್ತಲೆ ಎದೆಯ ಮೇಲೆ ಹುಲಿಯುಗುರು ಹಾಕಿದ ತಾಯಿತಿ ಕರಿದಾರದಿಂದ ತೂಗಿಬಿದ್ದಿದೆ. ಬಲ ಕಣಕೈಗೆ ಅರಿಶಿನದ ಕಂಕಣ ಕರಿಕಂಬಳಿ ದಾರದಲ್ಲಿ ಕಟ್ಟಿದೆ. ಬಲಗೈಲಿ ಹೊಳೆಯುತ್ತಿರುವ ಕತ್ತಿ ಇದೆ. ಡೋಲು ಬಾರಿಸುವವ, "ಢರ್-ಢಂ-ಡರ್ ಡರ್ ಢಂ-ಢಂ-ಢಂ ಢರ್ ಢಖ್-ಢಂ" ಬಾರಿಸತೊಡಗಿದ. ತಾಳಕ್ಕೆ ಸರಿಯಾಗಿ ವೀರಹೆಜ್ಜೆ ಹಾಕುತ್ತಾ, ಗೆಜ್ಜೆ ಕಟ್ಟಿದ ಕಾಲಿನಿಂದ ಧ್ವನಿತಾಳ ಕೂಡಿಸುತ್ತಾ ಕಾಮಯ್ಯ ಕತ್ತಿವರಸೆ ಪ್ರದರ್ಶಿಸುತ್ತಾ ಕುಣಿಯಹತ್ತಿದ. ನಾಲ್ಕು ಸುತ್ತು ಕುಣಿದಿರಬಹುದು. ಕತ್ತಿಯನ್ನು ತಿರುಗಿಸುತ್ತಾ ಮೇಲಕ್ಕೆಸೆದ. ಎರಡು ಹೆಜ್ಜೆ

ಮುಂದಕ್ಕೆ ಹಾಕಿದ. ಒಂದು ಹೆಜ್ಜೆ ಹಿಂದಕ್ಕೆ ಝೋಕು ಹೊಡೆದ. ಬಲು ಮೇಲ್ ತಿರುಗಿ ತಿರುಗುತ್ತಾ ಬೀಳುತ್ತಿದ್ದ ಕತ್ತಿಯ ಹಿಡಿಯನ್ನು ಬಲಗೈಯಿಂದ, ತಲೆಯ ಮೇಲೆ ಸರಿಯಾಗಿ ಚಾಚೂ ತಪ್ಪದೆ ಹಿಡಿದ. "ಜೈ ದುರ್ಗಿ ತಾಯಿ!" ಎಂದೊಮ್ಮೆ ಸುದ್ದಿ ಡೋಲು ಬಾರಿಸುವವನು ಢಂ ಢಂ ಢಂ ಢಂ ನಿಲ್ಲಿಸಿದ್ದ. ಮೆಲ್ಲಗೆ ಸರ್ ಸರ್ ಸರಿ ಸ ಎನ್ನುವಂತೆ ಡೋಲಿನ ಮೇಲೆ ಕೋಲಿನಿಂದ ಸವರುತ್ತಿದ್ದ.

ಕೂತಿದ್ದ ಜನರೆಲ್ಲಾ ಎದ್ದು ನಿಂತು ಚಪ್ಪಾಳೆ ತಟ್ಟಿದರು.

ಡೋಲಿನವನು ಢರ್ ಢಂ ಶುರುಮಾಡಿದ. ಕಾಮಯ್ಯ ಸುಮ್ಮನೆ ನಿಂತ.

"ಈಗ ನೋಡಿರ್ಲಾ! ಕಾಮಯ್ಯನ ಕೈ ಛಳಕಾನ" ಎಂದ ಡೋಲಿನವ.

"ಅದೇನ್ಲಾ ಅಂತ ಛಳಕ, ನಾನೂ ನೋಡೀನೀ" ಎಂದು ಪಲುಕು ನುಡಿಯುತ್ತಾ 20-22ರ ಪ್ರಾಯದ ತುಂಬು ಬೆಳೆದ ಹೆಣ್ಣೊಂದು ಮೂಡಲ ದಿಕ್ಕಿನಿಂದ ಬಂದು ಕಾಮಯ್ಯನೆದುರಿಗೆ ನಿಂತಳು. ಹಸಿರು ಪಟ್ಟೆಯನುಟ್ಟು, ಕೆಂಪು ಚೌಕಳಿ ರವಿಕೆಯ ತೊಟ್ಟು, ಅರಿಶಿನ ಹಚ್ಚಿದ ಗಲ್ಲವನ್ನು ಮುಂದೆ ಚಾಚಿ, ಕಿವಿಯ ಬೆಳ್ಳಿ ಬಾವಲಿಗಳನ್ನು ಕುಣಿಸುತ್ತಾ, ಮೂಗಿನ ಮುಖರವನ್ನು ಹೊಳಪಿಸುತ್ತಾ ಆ ಹೆಣ್ಣು ಝೋಕಿನಿಂದ ನುಡಿದಾಗ ಜನಸಂದಣಿಯಲ್ಲಿದ್ದ ಮುದುಕರು ಕೆಲವರು, "ಎಂತ ಅನ್ಯಾಯ ಮಾಡಿದ್ರಾ ನಮಗೆ ದೇವ್ರು. ಮೂವತ್ತು ವರ್ಷ ಹಿಂದೇನೇ ಹುಟ್ಟಿದ್ದು ತಪ್ಪಾತು. ಡೊಂಬರಾಟ ಕಲೀದೇ ನೆಲ ಉಳುಕ್ಕೆ ಹೋಗಿದ್ದೇ ತಪ್ಪಾತು" ಎಂದು ಮನಸ್ಸಿನಲ್ಲೇ ಮರುಗಿದರು.

"ಕಾಮಯ್ಯನ ಕೈ ಛಳಕ ನೋಡಬೇಕಾ? ಅಷ್ಟು ಎದೆ ಇದೆಯಾ ನಿಂಗೆ?" ಎಂದ ಡೋಲಿವನ. "ಬೆದರಿ ಬಿದ್ದು ಪೆಟ್ಟಾದರೆ ನಂತಪ್ಪಲ್ಲಾ" ಎಂದು ಸೇರಿಸಿದ.

"ನಾನಾ ಬೆದರಿ ಬೀಳೋಳು! ಪೆಟ್ಟು ತಿನ್ನೋಳು! ಹಟ್ಟೀಗೆ ಚಿರತೆ ಬಂದಾಗ ಹಿಟ್ಟು ಬೇಯಸ್ತಿದ್ದ ನಾನು ಹಿಟಿನ ಮಡಕೇನೇ ಅದರ ಮುಖಕ್ಕೆ ಮುಚ್ಚಿ ಓಡಿಸ್ದೋಳಲ್ವಾ! ನಂಗಾ ಹೆದರಿಕೆ!" ಎಂದು ಕೋಕಿಲದನಿಯ ಆ ಹೆಣ್ಣು ಕಾಡು ಮರುದನಿ ಕೊಡುವಂತೆ ಹೇಳಿದಳು.

ಕಾಮಯ್ಯ ಅವಳನ್ನೊಮ್ಮೆ ನೋಡಿದ. ಸುತ್ತಲಿದ್ದ ಜನ ಜಾತ್ರೆಯನ್ನು ನೋಡಿದ. ಡೋಲಿನವನ ಕಡೆ ನೋಡಿದ. ಕುಣಿತಕ್ಕೆ ಶುರುಮಾಡಿದ, ಡೋಲಿನವನು ಡರ್ ಢಂ ಡರ್ ಡರ್ ಡಂ. ಢರ್ ಡು ಢರ್ ಡರ್ ಮೆಲ್ಲಮೆಲ್ಲನೆ ಆರಂಭಿಸಿದಾಗ ಕತ್ತಿಯನ್ನು ಇತ್ತ ಅತ್ತ ಎತ್ತೆತ್ತ, ಹಿಂದೆ ಮುಂದೆ, ತಲೆಯ ಮೇಲೆ ಝುಳಪಿಸುತ್ತಾ ಆ ಹೆಣ್ಣಿನ ಮುಂದೆ ಮುಂದಕ್ಕೆ ಹೆಜ್ಜೆ ಹಾಕಿದ.

ಆ ಹೆಣ್ಣು ಹೆದರದೆ ಬೆದರದೆ, ಮುಖದ ಮೇಲೆ ಮೂದಲಿಸುವ ಹುಸಿ ನಗೆಯನ್ನು ತೋರಿಸುತ್ತಾ ನಿಂತೇ ಇದ್ದಳು. ಅವಳ ಮುಖದ ಮುಂದೆ ಕತ್ತಿಯನ್ನು ಝುಳಪಿಸಿ ನೀವಾಳಿಸಿದ. ಆಕೆ ನಿಂತೇ ಇದ್ದಳು. ಕೂತಿದ್ದ ಜನರೆಲ್ಲಾ ಅರೆ ಎದ್ದು ನಿಂತರು. ಅವಳ ಮೂಗು ಮುಖದ ಮೇಲೆ ಇತ್ತು. ಜನತೆ ಉಸಿರಾಡಿತು - ಆದರೆ! ಮೂಗಿಗೆ ಹಾಕಿದ್ದ ಮುಖರ ಕೆಳಗೆ ಬಿದ್ದಿತ್ತು.



ಹರಿತವಾದ ಕತ್ತಿಯ ಅಲುಗನ್ನು ತಾನು ಉಗುರು ತುದಿಯಿಂದ ಪರೀಕ್ಷಿಸಿದ. ತಿರುಗಿ ಒಮ್ಮೆ ಕತ್ತಿಯನ್ನು ಝುಳಪಿಸಿ ಅವಳ ತಲೆಯ ಹಿಂಭಾಗದತ್ತ ಸೆಳೆದು ನೀವಾಳಿಸಿದ. ಹೆಣ್ಣು ನಿಂತೇ ಇದ್ದಳು. ಸುತ್ತಲಿದ್ದ ಜನರು ಅವಳ ಹೆರಳು ಇದ್ದುದನ್ನೂ ನೋಡಿದರು. ಹೆರಳ ಮೇಲೆ ಇದ್ದ ಕೆಂಡಸಂಪಿಗೆಯ ಹೂ ಗೊಂಚಲನ್ನು ಕಂಡರು. ತಿರುಗಿ ಉಸಿರು ಆಡಿದರು.

"ಇದೇನಾ ನಿನ್ನ ಕೈ ಛಳಕ" ಎಂದಳು ಆ ಹೆಣ್ಣು, ಮೂದಲಿಸುವ ದನಿಯಲ್ಲಿ.

"ಇದಕ್ಕೇನೇನಾ ಬೆದರಿ ಬೀಳೋದು?" ಎಂದಳು ಆ ಹೆಣ್ಣು, ಡೋಲಿನವನ ಕಡೆ ನೋಡಿ.

ಆಗ ಕಾಮಯ್ಯ ಕತ್ತಿಯನ್ನು ಡೋಲಿನವನ ಕಾಲಬಳಿ ಇರಿಸಿದ. ಮೆಲ್ಲಗೆ ನಡೆದು ಬಂದ. ಹೆಣ್ಣಿನ ತುರುಬಿನ ಕಡೆಗೆ ಹೆಬ್ಬೆರಳು ಮೊದಲ ಬೆರಳನ್ನು ಚಾಚಿದ. ಹೆರಳನ್ನೂ ಹೆರಳಿನ ಮೇಲಿನ ಕೆಂಡಸಂಪಿಗೆಯ ಹೂ ಗೊಂಚಲನ್ನು ಹಿಡಿದ. ಮೆಲ್ಲಗವುಗಳನೆತ್ತಿದ. ಅವನ್ನು ಆಕೆಯ ಮುಖದ ಮುಂದೆ ಹಿಡಿದು ತೋರಿಸಿದ. "ಹೆರಳು ಕತ್ತರಿಸಿದ್ದು ನಿನಗೆ ತಿಳಿಯಲಿಲ್ಲವಾ, ನನ್ನ ಕೈ ಛಳಕಾ ನೋಡಿದೆಯಾ" ಎಂದು ಹೇಳಿದ.

ಜನರಿಗೆ ರೇಗಿತು, ಕೂಗಿದರು. "ಚಂಡಾಲಾ! ಹೆಣ್ಣುಮಗಳ ಹೂ ಮುಡಿದ ತುರುಬನ್ನೇ ಕತ್ತರಿಸಿದ್ದಾನೆ. ಇವನ್ನ ಒದೀರೋ! ಕೈ ಛಳಕ ಅಂತೆ! ನಮ್ಮ ಕಾಲು ಛಳಕ ತೋರಿಸೋಣ! ಚಪ್ಪಲಿ ಚಳಕ ತಾಕಿಸೋಣ" ಅಂತೆಲ್ಲಾ ಕೂಗಲು ಶುರುಮಾಡಿದರು.

ಆ ಹೆಣ್ಣು ಆಗ, ಬಲುಬೇಗ, ಮಂಜುಳ ದನಿಯಲ್ಲಿ ಹೇಳಲಾರಂಭಿಸಿದಳು. ಬಲಗೈಯ್ಯಿಂದ, ತಲೆಯ ಹಿಂದೆ, ಸಿಕ್ಕುಬಿಡಿಸಿ, ಕಟ್ಟಿಟ್ಟ ಜಡೆಯನ್ನು ಸಡಿಲಿಸಿ ಬೀಳ್ಬಿಡುತ್ತಾ, "ಕಾಮಯ್ಯ! ನಿನ್ನ ಕೈ ಛಳಕ ನೋಡಿ ಸುಸ್ತಾದೆ. ಇಲ್ಲಿದ್ದವರೆಲ್ಲರಂತೆಯೇ, ಆದರೆ ನಿನ್ನ ಕಣ್ಛಳಕ ಇವರಾರೂ ಕಾಣರು, ನನ್ನ ಹಾಗೆ. ಚೌರಿ ಹೆರಳು ತೆಗೆದೆ ದಿಟ! ಆದರೆ ಹುಟ್ಟು ಜಡೆ ಉಳಿದೇ ಇದೆ, ಬಾ! ಕಾಮಯ್ಯ! ಬಾ, ಕೈಲಿ ಕೈ ಹಿಡಿದು ಇವರೆಲ್ಲರ ಆಶೀರ್ವಾದ ಪಡೆದು ಹೊಸಮನೆ ಕಟ್ಟೋಣ, ಬಾ!" ಅಂತ ಕಾಮಯ್ಯನ ಕೈ ಹಿಡಿದು ಜನರತ್ತ ಸೆರಗುಹಿಡಿದು ಕಾಣಿಕೆಗಾಗಿ ನಡೆದು ಹೊರಟಳು. ಸುತ್ತ ನಡೆದು ಬಂದಾಗ ಮಡಿಲಲ್ಲಿ ಇಪ್ಪತ್ತು ವರಹಗಳಷ್ಟು ಸಂಪಾದನೆ ಆಗಿತ್ತು. ಕಾಮಯ್ಯ ಹೇಳಿದ, "ಇನ್ನೊಂದು ಚೌರಿ ಕಟ್ಟಿಸಿ ಒಂದು ಅಡ್ಡ ತೆಗೆದಿಟ್ಟರೂ, ಈ ಹಣದಲ್ಲಿ ಮನೆ ಕಟ್ಟಿಕೊಂಡು ನಾವು ನಾವೇ ಸುಖವಾಗಿರಬಹುದು ಇನ್ನು ಮೇಲೆ" ಎಂದು ಪಿಸುಮಾತಿನಲ್ಲಿ.

ಡೋಲಿನವ ಢರ್ ಢಂ ಶುರುಮಾಡಿದ ಜೋರಾಗಿ. "ಗಣೆಮರದ ಆಟ ತೋರಿಸ್ತೀವಿ ನೋಡ್ರಲಾ! ನಮ್ಮ ಮಾದನ ಹಾಗೆ ಯಾರೂ ಗಣೆಮರ ಹತ್ತಲಾರರು" ಅಂತ ಹೇಳುತ್ತಾ ಡೋಲು ಬಾರಿಸಿದ.

ಹದಿನಾರು ಹದಿನೆಂಟು ವರ್ಷ ಹರೆಯದ ಹುಡುಗನೊಬ್ಬ ಗಣೆಮರದ ಹತ್ತಿರ ಬಂದು ನಿಂತ. ತಲೆಗೆ ಸುತ್ತಿದ್ದ ಶಾಯಿಗಂಬಿ ಪಂಚೆಯನ್ನು ಸೊಂಟಕ್ಕೆ ಕಟ್ಟಿದ. ಡೋಲಿನವನ ಹತ್ತಿರ ಬಂದು ಅವನ ಕಾಲಿಗೆ ನಮಸ್ಕರಿಸಿದ. "ಮಗಾ! ಗಣೆಮರದ ಮೇಲೆ ಕಣ್ಣಿರಲಿ" ಎಂದ ಡೋಲಿನವ. ನಂತರ ಗಣೆಮರದ ಹತ್ತಿರ ಬಂದು ನಮಸ್ಕರಿಸಿ,

ಹತ್ತಲಾರಂಭಿಸಿದ. ಎರಡು
ಅಂಗೈ ಅಂಗಾಲುಗಳಿಂದಲೇ ನುಣ್ಣಗಿದ್ದ ಗಣೆಮರವನ್ನು ಭೇದಿಸಿಕೊಂಡು
ಮಾರು ಎತ್ತರ ಹತ್ತಿರಬಹುದು. ಮೂಡಲ ದಿಕ್ಕಿಂದ ಜನರ ಗುಂಪು "ಇಳೀಲಾ!
ಜಂಗಮಯ್ಯನೊಬ್ಬ ಸರಸರ ನಡೆದುಬಂದು ಗಣೆಮರದ ಹತ್ತಿರ ನಿಂತು ಅಂತ
ಹೈದ! ಗಣೆಮರ ವಾಲ್ತಾ ಇದೆ. ನಿನ್ನ ಭಾರ ತಡಿಯುಲ್ಲ. ಬೇಗ ಇಳೀ," ಡೋಲನ್ನು
ಕಾತರನಾಗಿ ಅರಚಿಕೊಂಡ. ಮಾದ ಬೇಗ ಜಾರಿ ಇಳಿದ. ಡೋಲಿನವನು ಅಡ್ತಾಗ,
ನೆಲದ ಮೇಲೆ ಬಿಟ್ಟು, ಎದ್ದು ಬಂದ. "ನಿನ್ನೆ ತಾನೇ ಇದೇ ಗಣೆಮರದ ಮೇಲೆ ನುಡಿದ್ರಿ
ಚೆಂದಾಗೇ ಇತ್ತು. ಇವತ್ತೇನಾಗೈತೆ! "ನೀವ್ಯಾಕಲ್ಲಾ ಹೀಗೆ ಅಪಶಕುನ ಹತ್ತಿದಾಗಲೇ
ಜಂಗಮಯ್ಯ!" ಎಂದು ಸ್ವಲ್ಪ ಬಿರುಸಾಗಿಯೇ ಹೇಳಿದ. "ಎರಡೇ ಮಾರು ಪರೀಕ್ಷೆ
ಗಣೇಮರ ಬಲು ವಾಲಾಡ್ತಾ ಇದೆ. ಶಿವ ಎಚ್ಚರ ಕೊಟ್ಟದಾನೆ, ಗಣೆಮರ ಬಿಚ್ಚಿ ಹೇಳಿದರೂ
ಮಾಡಿ ತಿರುಗಿ ಕಟ್ಟಿ ಆಡಿ," ಎಂದ ಜಂಗಮಯ್ಯ. ಜಂಗಮಯ್ಯ ಏನು ಕಟ್ಟುಗಳನ್ನು
ದೊಂಬರಿಗೆ ಪಥ್ಯ, ಶಿವನೇ ಮಾತನಾಡ್ತಾನೆ ಅಂತಲೇ ನಂಬಿಕೆ. ಗಣೆಮರದ ಎತ್ತರ
ಬಿಚ್ಚಿ, ಮರ ಇಳಿಸಿದರು. ನಾಲ್ಕು ನಾಲ್ಕು ಆಳು ಎರಡು ತುದಿಗಳನ್ನು ಭುಜದ ಬಾರಿ
ಹೊತ್ತು ನಿಂತರು. ಮಾದ ಮರದ ಮಧ್ಯವನ್ನು ಹಿಡಿದುಕೊಂಡು ಎರಡು
ಝೋಕಾಲಿ ಆಡಿದ. ಚಟಪಟ ಶಬ್ದ ಆಯ್ತು. ಮರ ಸೀಳುಬಿಟ್ಟಿತು.

ಡೋಲು ಬಾರಿಸುತ್ತಿದ್ದವ ಜಂಗಮಯ್ಯನ ಕಾಲಿಗೆ ಅಡ್ಡಬಿದ್ದ. "ಅಯ್ಯಾ, ನೀವು
ಬಂದು ನನ್ನ ಒಬ್ಬನೇ ಮಗನ ಪ್ರಾಣ ಉಳಿಸಿದ್ರಿ. ಹದಿನಾರು ಮಾರು ಗಣೆಮರ ಇದು.
ಅಲ್ಲಿಂದ ಕೆಳಕ್ಕೆ ಬಿದ್ದಿದ್ದರೆ ನನ್ನ ಮಗ ಉಳೀತಿತ್ತಿಲ್ಲ. ಎಡಗಣ್ಣು ಹಾರ್ತಾ ಇತ್ತು. ಆದರೂ
ತೆಪ್ಪಗಿದ್ದೆ. ಬಾ ಮಾದ, ಅಯ್ಯನೋರ ಕಾಲು ಹಿಡಿ, ಜೀವ ಉಳಿಸ್ದೋರಿಗೆ ಅಡ್ಡಬೀಳು"
ಎಂದು ಹೇಳುತ್ತಾ ಮಗನ ಕೈಲಿ ಜಂಗಮಯ್ಯನಿಗೆ ಸಾಷ್ಟಾಂಗ ಹಾಕಿಸಿದ.

ಬೇರೆ ಗಣೆಮರ ತಂದು ಕಟ್ಟುಕ್ಕೆ ಶುರುಮಾಡಿದರು. ಡೋಲಿನವನ ಬಾಯೆಲ್ಲಾ
ಒಣಗಿಹೋಗಿತ್ತು. "ಬತ್ತಾಸ್‌ನೋನು ಇತ್ತ ಬಂದರೆ ಕರೀಲಾ ಬಾಯಾರ್ತಾ ಇದೆ"
ಎಂದು ಡೋಲಿನವ ಡೊಂಬರ ಹುಡುಗನಿಗೆ ಹೇಳಿದ. "ಎರಡು ದಿನಗಳಿಂದಲೂ ಅವ
ಪತ್ತೇನೆ ಇಲ್ಲ. ಕಲ್ಯಾಣ ಸೇವೆ ಕೊಳ್ಳೋಣ ಅಂತ ಹುಡುಕಿದೆ" ಎಂದು ಹುಡುಗ ಹೇಳಿದ.

ಪರೀಕ್ಷೆ ಮಾಡಿದ ಮೇಲೆ ಗಣೆಮರ ಕಟ್ಟಿ ಮಾದ ಹತ್ತಿ ಹೊಟ್ಟೆ ಮೇಲೆ ಮರದ
ತುದೀಲಿ ಅಡ್ಡಡ್ಡಲಾಗಿ ತಿರುಗಿದ. ಕೆಳಗಿಂದ ಎಸೆದ ಬಾಕು, ಚಾಕು, ಎಲಡಿಕೆ ಗಂಟು,
ಎಲ್ಲವನ್ನೂ ತಿರುಗುತ್ತಾ ಎರಡೂ ಕೈಗಳಿಂದ ಹಿಡಿದು ಸೊಂಟಕ್ಕೆ ಕಟ್ಟಿದ್ದ ಚೀಲಕ್ಕೆ ಸೇರಿಸಿ,
ನಂತರ ಕಳಗಿಳಿದಾಗ ಜನರೆಲ್ಲಾ ಹುಚ್ಚು ಹುಚ್ಚಾಗಿ ಚಪ್ಪಾಳೆ ತಟ್ಟಿದರು.

ಡೋಲಿನವನ ಕಾಲಬಳಿ ಸುಮಾರು ಹಣ ಎಸೆದು ಬಂದುಬಿದ್ದುವು.

* * * *

ದೇವಸ್ಥಾನದಲ್ಲಿ ಮಂಗಳಾರತಿ ಹೊತ್ತಿಗೆ ಜನಗಳ ನೂಕುನುಗ್ಗಲು
ವಿಪರೀತವಾಗಿತ್ತು. ಪೇಷ್ಕಾರರು, ಕಾವಿ ಧರಿಸಿದ ಸಾಧುಸಂತರು, ಅರಮನೆಯ
ಪ್ರತಿನಿಧಿಗಳಾದ ವೈದೀಕರು ಇಷ್ಟು ಜನರಿಗೆ ಮಾತ್ರ, ಗರ್ಭಗುಡಿಯ ಎದುರು
ಅಂಕಣದಲ್ಲಿ ನಿಲ್ಲಲು ಏರ್ಪಾಡಾಗಿತ್ತು. ಮಲ್ಲಿಕಾರ್ಜುನನ ಪೂರ್ಣ ಅಲಂಕಾರವನ್ನು



ಕಣ್ಣು ತುಂಬ ನೋಡುವ ಪುಣ್ಯ ಅವರದಾಗಿತ್ತು. ಹಿಂದೆ ನವರಂಗದಲ್ಲಿ ನಿಂತ
ಯಾತ್ರಾರ್ಥಿಗಳಿಗೆ ಕಂಡಷ್ಟೇ ಪುಣ್ಯ. ಮಂಗಳಾರತಿ ಮುಗಿದು ಶಿವಕೂಟದಲ್ಲಿ ಪ್ರಸಾದ
ಹಂಚುವ ವೇಳೆಗೆ ಆಕಾಶದಲ್ಲಿ ಕಾರ್ಮೋಡಗಳು ಗುಂಪು ಕಟ್ಟುತ್ತಿದ್ದುವು. ಜನರಿಗೆಲ್ಲಾ
ಪ್ರಸಾದ ಹಂಚಿದ ಒಂದೆರಡು ಘಳಿಗೆಗಳಲ್ಲೇ ತುಂತುರು ಮಳೆ ಬೀಳಲಾರಂಭಿಸಿತು.
ಹಠಾತ್ತನೆ ಸಿಡಿಲು ಬಡಿಯಿತು. ದೇವಾಲಯದಿಂದ ಇಳಿದು ಬರುವ ಮೆಟ್ಟಲುಗಳು
ಪಕ್ಕದಲ್ಲಿದ್ದ, ತೆಂಗಿನಮರಕ್ಕೆ ಸಿಡಿಲು ಬಡಿಯಿತು. ಮರ ಹತ್ತಿ ಉರಿಯತೊಡಗಿತು.
ಎರಡು ಮೂರು ಮಾರು ದೂರದಲ್ಲೇ ಕುಳ್ಳ ಮಾವಿನ ಮರದ ಕೆಳಗೆ ನಿಂತಿದ್ದ
ಜಂಗಮಯ್ಯ "ಶಿವನ ಕರುಣೆ" ಎಂದು ಕೈಮುಗಿದ.

* * * *

ಜಾತ್ರೆಯ ಕೊನೆಯ ದಿನ ದೇವಾಲಯದಲ್ಲಿ ಪೇಷ್ಕಾರರ ಕೈಂಕರ್ಯ, ಪೇಷ್ಕಾರರು
ಮನೆಯಲ್ಲಿ ಹೆಂಡತಿ ಮಕ್ಕಳು ಮೊಮ್ಮಕ್ಕಳನ್ನು ಅವಸರಪಡಿಸುತ್ತಿದ್ದರು.

"ಲೇ! ಸರಸೂ! ನಿನ್ನ ಗಂಡ ಸಿದ್ದನಾಗಿದಾನೇನೇ" ಎಂದು, ಮೊದಲ ಮಗಳು
ಅಲಂಕಾರ ಮುಗಿಸಿಕೊಂಡು ಹಜಾರಕ್ಕೆ ಬಂದಾಗ ಕೇಳಿದರು.

"ನಿನ್ನೆ ಸಂಜೇನೇ ಹುಣಸೂರಿಗೆ ತುರ್ತಾಗಿ ಹೋಗಬೇಕು ಅಂತ ಕುದುರೆ
ಹತ್ತಿಕೊಂಡು ಹೊರಟುಹೋದರು. ಇನ್ನಿಲ್ಲಾ ಅಂತ ಕೇಳಿಕೊಂಡೆ, ನಾಳೆ ನಮ್ಮನೆ
ಕೈಂಕರ್ಯ ದೇವಸ್ಥಾನದಲ್ಲಿ, ನಾಡಿದ್ದು ಹೋಗಿ ಅಂತ-ಆಗುಲ್ಲ ಹೊಗಲೇಬೇಕು ಎಂದು
ಹೊರಟೇಹೋದರು" ಎಂದಳು ಸರಸು.

"ಅಂತಹದೇನೇ ತುರ್ತು ಕೆಲಸ ಹುಣಸೂರಲ್ಲಿ? ವರ್ಷವೆಲ್ಲಾ ಇಲ್ಲೇ ಠಿಕಾಣಿ
ಹಾಕಿದ್ದೋನು ಈ ಹೊತ್ತಿನಲ್ಲೇ ಹೋಗಬೇಕಾದರೆ ಏನಾದರೂ ವಿಶೇಷ ಇರಬೇಕು,
ನಿನಗೆ ತಿಳಿಯದೇ ?" ಎಂದು ಕೇಳಿದರು ಪೇಷ್ಕಾರರು.

"ಇವರಿಗೆ ಇನ್ನೇನು ತುರ್ತು ಕೆಲಸ! ಹುಣಸೂರಲ್ಲಿ ಇವತ್ತು ಟಗರಿನ ಕಾಳಗ ಇದೆ.
ಬಾಜಿ ಕಟ್ಟಿ ಹಣ ಸಂಪಾದಿಸಬಹುದು ಅಂತ, ಶೃಂಗಾರ ಮಾಡಿಕೊಂಡು, ಗುಡುಗುಡು
ಅಂತ ಹೊರಟಿದ್ದಾರೆ. ಮಲ್ಲಿಕಾರ್ಜುನನೇ ಅವರಿಗೆ ಬುದ್ಧಿ ಕೊಡಬೇಕು.
ಮನಃಪೂರ್ತಿಯಾಗಿ ದೇವರ ಸೇವೆ ಮಾಡ್ತೇನೆ. ಬನ್ನಿ ಅಪ್ಪ, ಅಮ್ಮನ್ನೂ ಕರೀತೀನಿ"
ಎಂದಳು ಸರಸು.

ಸರಸು ಮುಖ ನೋಡಿ ಪೇಷ್ಕಾರರ ಮನಸ್ಸು ಖಿನ್ನವಾಯಿತು. ಕೈ ಮಿಂಚಿದ್ದಕ್ಕೆ
ಕೈಲಾಸಾಧಿಪತಿಯ ಮರೆ ಹೋಗುವುದೊಂದೇ ಮಾರ್ಗ. "ಬನ್ನಿ ಎಲ್ಲರೂ ಹೊತ್ತಾಯ್ತು
ದೇವಸ್ಥಾನಕ್ಕೆ. ನಾವು ಹೋಗೋ ತನಕ ಪೂಜೆ ಶುರು ಮಾಡುಲ್ಲ" ಎಂದು
ಚಡಪಡಿಸಿದರು.

ಕಮಲು ಆಗ ಗಂಡನೊಂದಿಗೆ ಮಹಡಿ ಮೇಲಿಂದ ಹಜಾರಕ್ಕೆ ಇಳಿದುಬಂದಳು.
ಎರಡನೆ ಮಗಳನ್ನು ನೋಡಿ ಪೇಷ್ಕಾರರ ಮುಖ ಸ್ವಲ್ಪ ಸಂತಸಗೊಂಡಿತು. "ನಿನ್ನ ಗಂಡನ್ನ
ನೋಡಿದರೆ ಕೊತ್ವಾಲರ ಕಳೆಯೇ ಕಾಣಿಸುಲ್ಲವಲ್ಲೇ ಕಮಲೂ, ಪಂಚಕಚ್ಚೆ ಉಟ್ಟು

ವಿಭೂತಿ ಧರಿಸಿ, ರುದ್ರಾಕ್ಷಿಮಾಲೆ ಹಾಕಿಕೊಂಡು ನಿಂತರೆ, ವೈದಿಕ ಬ್ರಾಹ್ಮಣರ ಕಳೆ ಇದೆಯಲ್ಲೇ!" ಎಂದರು ನಗುತ್ತ ಪೇಷ್ಕಾರರು.

"ಮಾವಯ್ಯ, ಆಟಕ್ಕೆ ತಕ್ಕ ಬಹಿರೂಪ ಇರಬೇಕಲ್ಲಾ! ನಮ್ಮ ಕಸುಬಿನಲ್ಲಿ ಅದು ಬಲು ಮುಖ್ಯ" ಎಂದರು ಪೇಷ್ಕಾರರ ಎರಡನೇ ಅಳಿಯಂದಿರು.

"ಅದಕ್ಕೇ ಇವರಿಗೆ ಭಡ್ತಿ ಕೊಟ್ಟು ಸರ್ಕಾರದವರು ಜಿಲ್ಲಾ ಜವಾಬ್ದಾರಿಯನ್ನೆಲ್ಲಾ ಹೊರಿಸಿದ್ದಾರೆ. ದಿನಕ್ಕೆ ಎರಡುತಾಸು ಮನೇಲಿರೊಲ್ಲ. ಈಗಲೇ ಒಂದು ವಾರ ಮನೇಲಿ ನನ್ನ ಕೈಗೆ ಸಿಕ್ಕಿ ಹಾಕಿಕೊಂಡಿದ್ದಾರೆ" ಎಂದು ಕಮಲು ಸ್ವಲ್ಪ ಜಂಬದ ದನಿಯಲ್ಲೇ ಹೇಳಿದಳು, ಗಂಡನ ಕಡೆಗೆ ಕಿಲಕಿಲ ನಗು ಹಾಯಿಸುತ್ತಾ.

ಅಷ್ಟು ಹೊತ್ತಿಗೆ ಮನೆಯಾಕೆ ಸರಸು ಮಕ್ಕಳ ಕೈ ಹಿಡಿದುಕೊಂಡು ಹಜಾರಕ್ಕೆ ಅಡಿಗೆ ಮನೆ ಕಡೆಯಿಂದ ಬಂದಳು. "ಯಾರೇ ಇದು ಸುಲ್ತಾನನ ಮನೆ ಹುಡುಗಿ ಹಾಗೆ ಕಾಣುತ್ತೆ" ಎಂದು ಹೇಳುತ್ತಾ ಪೇಷ್ಕಾರರು ದೊಡ್ಡ ಮೊಮ್ಮಗಳು ಶಾರಿಯ ಕೆನ್ನೆ ಚಿವುಟಿದರು. ಎಂಟು ವರ್ಷದ ಚೆಲುವು ಹುಡುಗಿಗೆ ಮಹಮ್ಮದೀಯರ ಇಜಾರ ಹಾಕಿ, ಉದ್ದನೆ ತೆಳು ಜುಬ್ಬಾ ತೊಡಿಸಿ, ಅಂಗವಸ್ತ್ರ ಹೊದಿಸಿ, ವಾರೆ ಬೈತಲೆಗೆ ಗುನ್ನಾಂಪಟ್ಟೆ ಧೂಳು ಹಚ್ಚಿ, ಕಣ್ಣಿಗೆ ಕಾಡಿಗೆ ತುಂಬಿ ಶೃಂಗಾರ ಮಾಡಿದ್ದರು. "ಕಮಲು ಕೆಲಸ ಇದು, ಬೇಡಾ ಅಂದರೂ ಕೇಳಲಿಲ್ಲ" ಎಂದಳು ಮನೆಯಾಕೆ. ಪೇಷ್ಕಾರರಿಗೆ ಕೋಪ ಬಂತೋ ಎಂಬ ಹೆದರಿಕೆ, ತನಗೇನೋ ಇಷ್ಟ,ಕಮಲು ಮೇಲೆ ಹಾಕಿದರೆ ಕೋಪ ಇಳಿಯುತ್ತೆ ಎಂಬ ಭರವಸೆ, ಹಾಗಾಗಿ ಮನೆಯಾಕೆ ತಪ್ಪನ್ನು ಮಗಳ ಮೇಲೆ ಹಾಕಿದಳು.

ಹಣ್ಣು ಹಂಪಲು ತೆಂಗಿನಕಾಯಿ ಅರಿಸಿನ ಕುಂಕುಮದ ತಟ್ಟೆಗಳನ್ನು ತೆಗೆಸಿಕೊಂಡು ಮನೆಯಾಕೆ ಪೇಷ್ಕಾರರ ಜತೆಗೆ ದೇವಸ್ಥಾನಕ್ಕೆ ಹೊರಟಾಗ, ಸರಸು, ಕಮಲೂ, ಕೊತ್ವಾಲರು ಎಲ್ಲರೂ ಹಿಂದೆ ನಡೆದರು.

* * * *

ಹಿಂದಿನ ದಿನ ಅಪರಾಹ್ನದಲ್ಲಿ ಕುದುರೆ ಹತ್ತಿ ಹುಣಸೂರಿನ ಕಡೆಗೆ ಹೊರಟ ಸರಸು ಗಂಡನಿಗೆ ಬಲು ಖುಷಿ. ರೇಷ್ಮೆ ಕಸೆ ಅಂಗಿ ತೊಟ್ಟು, ಸರಿಗೆ ಪಾಗು ಕಟ್ಟಿಕೊಂಡು, ಸೊಂಟದ ಪಟ್ಟಿಯನ್ನು ಮುಟ್ಟಿಮುಟ್ಟಿ ನೋಡಿಕೊಂಡು, ಎಲಡಿಕೆ ಅಗಿಯುತ್ತಾ ಹೊರಟವನಿಗೆ ಹುಣಸೂರಿನ ಟಗರಿನ ಕಾಳಗವೇ ಕಣ್ಣಿಗೆ ಕಟ್ಟಿದಂತಿತ್ತು. ನಾಗಯ್ಯನ ಟಗರಿನ ಮೇಲೆ ಬಾಜಿ ಕಟ್ಟಿದರೆ ಖಂಡಿತ ಹಣ ಬರುತ್ತೆ ಎಂದು ನಂಬಿಕೆಯಿತ್ತು. ನಾಗಯ್ಯನ ತಂಗಿಯೇ ಹೇಳಿತ್ತಿಲ್ಲವೇ, ಮೂರು ವಾರಗಳ ಹಿಂದೆ, ನಾಗಯ್ಯನ ಟಗರಿಗೆ, ಕುರಿ ರಕ್ತ ಕುಡಿಸಿ ಕಾಳಗ ಅಭ್ಯಾಸ ಮಾಡಿಸಿದ್ದಾರೆ ಅಂತ. ಎಷ್ಟೆಷ್ಟು ಬಾಜಿ ಕಟ್ಟಿದರೆ ಅಷ್ಟೂ ಬೇಗ ಲಕ್ಷ್ಮಿ ಒಲಿಯುತ್ತಾಳೆ ಅಂತ. ಬಾಜಿ ದಳ್ಳಾಳಿ ನಂಜಯ್ಯ ಕೂಡ ನಾಗಯ್ಯನ ಟಗರ ಮೇಲೆ ಎಲ್ಲರ ಹತ್ತಿರಾನೂ ಬಾಜಿ ತೊಗೊಳ್ಳಲ್ಲ. ಬೇಕಾದವರ ಹತ್ತಿರ ಮಾತ್ರ ತೆಗೆದುಕೊಳ್ಳುತ್ತೇನೆ. ಇಲ್ಲದೆ ಇದ್ದರೆ ಮನೆ ಹಾಳಾಗಿಹೋಗುತ್ತೆ. ನಾನೂ ಕೂಡ ನಾಗಯ್ಯನ ಟಗರಿನ ಮೇಲೆ ಷೇಕ್ ಅಬ್ದುಲ್ಲನ ಹತ್ತಿರ, ಆದಷ್ಟು ಬಾಜಿ ಕಟ್ಟುತ್ತೇನೆ ಅಂತ. ಬಾಜಿ-ಟಗರು-ನಾಗಯ್ಯನ ತಂಗಿ-ಬೆಳದಿಂಗಳಂತೆ ನಗು-ಎಲ್ಲವನ್ನೂ ಹಗಲು ಕನಸು



ಕಾಣುತ್ತಾ ಸರಸು ಗಂಡ ಸೊಂಟದ ಪಟ್ಟಿಯನ್ನು ಮುಟ್ಟಿ ನೋಡಿಕೊಂಡು ನಸು ನಕ್ಕ. ಬಾಜಿ ಕಟ್ಟೋದಕ್ಕೆ ಬೇಕಾದಷ್ಟು ಹಣ ಈ ಒಡವೆಯಿಂದ ಸಿಕ್ಕೇ ಸಿಗುತ್ತೆ ಎಂಬ ಯೋಚನೆ ಹೊಳೆದಾಗ, ಮೆಲುದನಿಯಲ್ಲಿ ಹಾಡಲಾರಂಭಿಸಿ, ಕುದುರೆ ಕತ್ತಿನ ಮೇಲಿನ ಜಡೆಯನ್ನು ನೇವರಿಸಿದ.

ಸೂರ್ಯ ಮುಳುಗೋ ಹೊತ್ತು. ಹುಣಸೂರು ಇನ್ನೂ ಎರಡು ಗಾವುದ ಇದೆ. ರಸ್ತೆಯಲ್ಲಿ ತಾಳೆ ಹೂವಿನ ಗೊಂಚಲುಗಳನ್ನು ಹಿಡಿದುಕೊಂಡು ಹಳ್ಳಿಯವನೊಬ್ಬ ನಿಂತಿದ್ದ. "ಧಣೀರಾ! ತಾಳೇ ಹೂವು ಕೊಂಡುಕೊಳ್ಳಿರ್ಲಾ! ದುಗ್ಗಾಣಿಗೆ ಮೂರು ಬೊಂತೆ ಕೊಡ್ತೀನಿ" ಎಂದು ಅವ ರಸ್ತೆ ಮಧ್ಯಕ್ಕೆ ಬಂದು ಹೇಳಿದ.

ಕುದುರೆ ನಿಲ್ಲಿಸಿ "ಒಂದಾರು ಬೊಂತೆ ಕೊಡ್ಲಾ" ಎಂದ ಸರಸು ಗಂಡ. ಹಳ್ಳಿಯವ ಆರು ಬೊಂತೆ ಎಣಿಸಿ ತೆಗೆದುಕೊಟ್ಟ. ಅವನ ಬೆರಳಮೇಲಿದ್ದ ದೊಡ್ಡ ಪಚ್ಚೆ ಉಂಗುರ ಸರಸು ಗಂಡನ ಕಣ್ಣಿಗೆ ಬಿತ್ತು. ಏನಿಲ್ಲಾ "ಅಂದರೂ ಹತ್ತು ವರಹಾ ಬಾಳೋ ಉಂಗುರ ಇವನ ಬೆರಳ ಮೇಲೆ ಹೇಗೆ ಬಂತು?" ಎಂದು ಸ್ವಲ್ಪ ಸಂಶಯ ಬಂತಾದರೂ ಹಳ್ಳಿಮುಕ್ಕ ಇವ ತೆಳ್ಳಗೆ ಬಡಕಲಾಗಿದ್ದಾನೆ. ಒದ್ದರೆ ಕೆಳಗೆಬಿದ್ದು ಸಾಯೋ ಹಾಗೆ ಕಾಣ್ತಾನೆ ಏಕೆ ಹೆದರಬೇಕು ಎಂತಲೂ ಅನ್ನಿಸಿತು. "ನಿಂಗೆಲ್ಲಾ ಸಿಕ್ತು ಆ ಉಂಗುರ?" ಎಂದು ಕೇಳಿದ. ತಾಳೆ ಹೂವಿನವ "ನನ್ನ ಮದ್ವೀಲಿ ನಮ್ಮಾವ ಇದನ್ನು ಕೊಟ್ಟ, ಅವನ ತಾತ ಸುಲ್ತಾನನ ಸೈನ್ಯದಲ್ಲಿ ನೂರಾಳಿನ ನಾಯ್ಕನಾಗಿದ್ದ, ಸಿರಾ ಯುದ್ಧದಲ್ಲಿ ಅವರಿಗೆ ಸಿಕ್ಕಿದ್ದು," ಎಂದ. "ಮಾರ್ತಿಯೇನ್ಲಾ ಉಂಗುರಾನ?" ಎಂದ ಸರಸು ಗಂಡ. "ಹಳ್ಳಿಮುಕ್ಕ ನಂಗ್ಯಾಕೆ ಉಂಗುರ. ಹಂಗೂ ನನ್ನ ಹೆಂಡ್ರು ಮಾರೀಗೆ ತುತ್ತಾಗಿ ಸತ್ತಮ್ಯಾಗ? ಸರಿಯಾದ ಬೆಲೆ ಕೊಟ್ಟರೆ ಮಾರುಕ್ಕೆ ಸೈ" ಎಂದ ತಾಳೆ ಹೂವಿನವ. "ಎಷ್ಟು ಬೇಕ್ಲಾ ಉಂಗುರಕ್ಕೆ, ತೆಕ್ಕೊಡು ನೋಡೋಣ" ಎಂದ ಸರಸು ಗಂಡ. ಉಂಗುರವನ್ನು ತೆಗೆದುಕೊಡುತ್ತಾ" "ಎರಡು ವರಹಾ ಕೊಟ್ಟರೆ ನಾ ಕೊಡೋದು. ಇಲ್ದೆ ಇದ್ರೆ ಅದರ ಮಾತೇ ಬೇಡ" ಎಂದು ಬಿರುಸಾಗಿ ಹೇಳಿದ ತಾಳೆ ಬೊಂತೆಯವ.

"ಹಳ್ಳಿಮುಕ್ಕ, ಹಿಡಿದ ಹಠ ಬಿಡುಲ್ಲ. ಇದರ ಬೆಲೆ ಅವನಿಗೆ ಗೊತ್ತಿಲ್ಲ" ಎಂದುಕೊಂಡು ಎರಡು ವರಹಾ ಎಣಿಸಿಕೊಟ್ಟು ಉಂಗುರ ತನ್ನ ಬೆರಳಿಗೆ ಹಾಕಿಕೊಂಡ.

"ತಾಳೇ ಹೂವಿಗೆ ಕಾಸೇನೂ ಬೇಡ ಧಣೀರಾ" ಎಂದ ಹಳ್ಳಿಯವ.

"ಛೇ! ಛೇ! ವ್ಯಾಪಾರ ಅಂದರೆ ವ್ಯಾಪಾರ. ತೊಗೋ" ಅಂತ ಎರಡು ದುಗ್ಗಾಣಿಗಳನ್ನೂ ಕೊಟ್ಟ.

"ಇಂತ ಒಡವೆ ಇನ್ನೂ ಮೂರು ಐತೆ ನನ್ನ ಗುಡಿಸಲಾಗೆ, ಬೇಕಾರ ತೋರಿಸ್ತೀನಿ" ಎಂದ ಹಳ್ಳಿಯವ. "ಆದರೆ ನಾ ಹೇಳಿದ ಬೆಲೆ ಕೊಡಲೇಬೇಕು. ಚೌಕಾಷಿ ಅಂದರೆ ನನಗಾಗುಲ್ಲ" ಎಂದು ಸೇರಿಸಿದ.

ಸರಸು ಗಂಡನಿಗೆ ದುರಾಶೆ ಹುಟ್ಟಿದ್ದು ಸ್ವಾಭಾವಿಕ. "ಎಷ್ಟು ದೂರ ಇದೆ ನಿನ್ನ ಗುಡಿಸಲು?" ಎಂದು ಕೇಳಿದ.

"ತಾಳೆ ಪೊದೆ ಅಚೆ! ಇಲ್ಲೇನೇ!" ಎಂದು ಉತ್ತರ ದಿಕ್ಕಿಗೆ ಬೆರಳು ತೋರಿಸಿದ. "ನಡೀಲಾ! ನೋಡೋಣಾ" ಎಂದ ಸರಸು ಗಂಡ.

ಹಳ್ಳಿಯವ ಮುಂದೆ ಹೊರಟ. ಕುದುರೆ ಮೇಲೆ ಸರಸು ಗಂಡ ಹಿಂದೆ ನಡೆದ.

ತಾಳೆ ಪೊದೆ ಸಿಕ್ಕಿತು. ಹಳ್ಳಿಯವ ತಾಳೆ ಗಿಡಗಳ ಮಧ್ಯೆ ತೂರಿ ಹೋದಾಗ ಕುದುರೆ ಬೆದರಿತು. ಕೆನೆಯುತ್ತಾ ನಿಂತಿತು. ಹಳ್ಳಿಯವ ಹಿಂದಕ್ಕೆ ಬಂದ. "ಧಣೀರಾ! ತಾಳೆ ಪೊದೇಲಿ ಸರ್ಪದ ವಾಸನೆ ಇರ್ತದೆ. ಕುದುರೆ ಬೆದರುತ್ತೆ. ಇಲ್ಲೇ ಈಚಲಮರಕ್ಕೆ ಕಟ್ಟಿಹಾಕಿ ನಡೆದು ಬನ್ನಿ" ಅಂತ ಹೇಳಿದ.

ಕುದುರೆಯನ್ನು ಮರಕ್ಕೆ ಕಟ್ಟಿ, ಹಳ್ಳಿಯವನ ಹಿಂದೆ ಸರಸು ಗಂಡ ಹೊರಟ. ಸೊಂಟದಲ್ಲಿದ್ದ ಬಾಕುವನ್ನು ತೆಗೆದು, ಕೈಲಿ ಹಿಡಿದುಕೊಂಡು, "ನಡೀಲಾ, ಬಾಕು ನೋಡಿದಿಯೆಲ್ಲಾ, ಎಂತ ಸರ್ಪಬರಲಿ, ಎಂತಹ ಕಳ್ಳನೇ ಬರಲಿ, ಒಂದೇ ಏಟಿಗೆ ಮುಗಿಸಬಲ್ಲೆ! ನಡೀಲಾ" ಎಂದ ಸರಸು ಗಂಡ.

"ಅಯ್ಯಯ್ಯಪ್ಪಾ! ನಾನೊಬ್ಬನೇ ಇದೀನಲ್ಲಪ್ಪಾ! ಒಡವೆ ಎಲ್ಲಾ ತೋರಿಸಿದ ಮೇಲೆ ನನ್ನ ಇರಿದು ಎಲ್ಲಾ ತೆಗೆದುಕೊಂಡು ಹೊರಟುಹೋದರೆ ನನ್ನ ಗತಿ ಏನಪ್ಪಾ! ಆ ಬಾಕು ಎಸೀವೇ ಇದ್ದರೆ ನಾನು ಮುಂದೆ ಹೆಜ್ಜೆ ಹಾಕುಲ್ಲ" ಎಂದು ಹೇಳುತ್ತಾ ಹಳ್ಳಿಯವ ಹೆದರಿ ತಾಳೆಪೊದೆ ಮಧ್ಯೆ ಅಡ್ಡಡ್ಡ ಓಡಹತ್ತಿದ.

ಸರಸು ಗಂಡನಿಗೆ ಬಲು ಖುಷಿಯಾಯ್ತು. ಈ ಹಳ್ಳಿಮುಕ್ಕನಿಗೆ ಅನುಮಾನಪಟ್ಟೆನಲ್ಲಾ ಎಂದು ಅನ್ನಿಸಿತು. "ಬಾರ್ಲಾ... ಬಾಕೂನ ಬೇಕಾರೆ ಕುದುರೆ ಜೀನಿನಲ್ಲಿ ಸಿಕ್ಕಿಸಿ ಬರ್ತೇನೆ, ಯಾಕ್ಲಾ ಹೆದರ್ತೀ" ಎಂದು ಹಳ್ಳಿಯವನ ಕಡೆಗೆ ಕೂಗಿದ. ಹಳ್ಳಿಯವ ಹೆದರಿ ಬೆದರಿ ಬಂದು ಮುಖ ತೋರಿಸಿ, "ಹಂಗೆ ಮಾಡಿದರೆ ಸೈ" ಎಂದ. ಹಿಂದಕ್ಕೆ ಹೋಗಿ ಕುದುರೆ ಜೀನಿಗೆ ಬಾಕು ಸಿಕ್ಕಿಸಿ, ಇಬ್ಬರೂ ತಾಳೆ ಪೊದೆಯ ಕಡೆಗೆ ನಡೆದು ಬಂದರು. ತಾಳೆಪೊದೆ ದಾಟಿದ ಮೇಲೆ ಬಯಲು ಕಂಡಿತು. ದೂರದಲ್ಲಿ ಬೆಳಕೊಂದು ಕಂಡಿತು. "ಅದೇ ನನ್ನ ಗುಡಿಸಲು" ಎಂದ ಹಳ್ಳಿಯವ. ನಾಲ್ಕು ಹೆಜ್ಜೆ ಹಾಕಿದರು. ತಿರುಗಿ ತಾಳೆ ಪೊದೆ ಸಿಕ್ಕಿತು. ಹಠಾತ್ತನೆ ಹಳ್ಳಿಯವ ಕಿರುಚಿದ. "ಘಟಸರ್ಪ!" ಎಂದು. "ಎಲ್ಲಿ ಎಲ್ಲಿ", ಅಂತ ಪಕ್ಕದಲ್ಲಿ ಬಂದು ನಿಂತ ಸರಸು ಗಂಡ.

ಹೊಟ್ಟೆಗೆ ಒನಕೇಲಿ ಹೊಡೆದ ಹಾಗಾಯ್ತು, ಕತ್ತಿನ ಮೇಲೆ ಗುಂಡುಕಲ್ಲು ಬಿದ್ದಹಾಗೆ ಆಯಿತು. ಸರಸು ಗಂಡ ಹೊಟ್ಟೆ ಮೇಲೆ ಮಡಿಕೆ ಹಾಕಿಕೊಂಡು ಬಿದ್ದ. ಹಳ್ಳಿಯವ ಅವನ ಬಾಯಿಗೆ ತಾಳೆ ಬೊಂತೆ ತುಂಬಿ ಬಟ್ಟೆ ಕಟ್ಟಿದ. ಕೈಕಾಲುಗಳನ್ನು ತಾಳೆಪಟ್ಟೇಲಿ ಕಟ್ಟಿಹಾಕಿದ, ಬಲಗೈ ಬೆರಳುಗಳನ್ನು ಸವರಿಕೊಳ್ಳುತ್ತಾ, ಹೊಟ್ಟೆ ಮೇಲೆ ಮುಷ್ಟಿಬಿಗಿದು ಹೊಡೆದರೆ ಇಷ್ಟು ಬೇಗ ಬವಳಿ ಬರುತ್ತೆ ಅಂತ ನಂಗೂ ಗೊತ್ತಿತ್ತಿಲ್ಲ ಎಂದುಕೊಂಡ. ಬಿದ್ದವನ ಸೊಂಟದ ಪಟ್ಟಿ ಬಿಚ್ಚಿ, ಬೆರಳಿನಲ್ಲಿದ್ದ ಉಂಗುರ ಕಳಚಿಕೊಂಡು, ಹಳ್ಳಿಯವ ಬೇಗ ಬೇಗ ಹಿಂದಿರುಗಿ ಕುದುರೆ ಹತ್ತಿಕೊಂಡು ಹುಣಸೂರು ರಸ್ತೆಯಲ್ಲಿ ನಾಗಾಲೋಟ ಓಡಿದ.

* * * *



ಕೈಂಕರ್ಯ ನಡೆಸಿದ ಸಂಜೆ, ಪೇಷ್ಕಾರರ ಮನೆಯಲ್ಲಿ ದೇವಸ್ಥಾನದಿಂದ ಬಂದ ಪ್ರಸಾದವನ್ನು ತಿಂದೇ ಸುಸ್ತಾಗಿದ್ದರು. ಅಡಿಗೆ ರಂಗಮ್ಮ ಬೇರೆ ಗಸಗಸೆ ಹಾಕಿ ಬಿಸಿಬಿಸಿ ಗುಳಪಾವಟೆ ಮಾಡಿದ್ದಳು. ಹೊಟ್ಟೆ ತುಂಬಿದ್ದರೂ, ರುಚಿಯಾಗಿದ್ದರಿಂದ, ಸಂಜೆ ಗುಳಪಾವಟೇನೂ ಮುಗಿಸಿದ್ದರು. ರಾತ್ರಿ ಅವರೆಕಾಯಿ ಹುಳಿ, ಹುರುಳಿ ಹಪ್ಪಳ, ಹಸುವಿನ ಮೊಸರು ಊಟ ಮಾಡಿದ್ದರು. ಹಿಂದಿನ ಮಾತನ್ನೆಲ್ಲಾ ಜ್ಞಾಪಿಸಿಕೊಳ್ಳುತ್ತಾ, ಆ ಮಾತು ಈ ಮಾತು ಆಡುತ್ತಾ ಮಲಗುವ ಹೊತ್ತಿಗೆ ಮಧ್ಯರಾತ್ರಿ ಮೀರಿತ್ತು.

ಬೆಳಿಗ್ಗೆ ಬೇಗ ಮೊದಲೆದ್ದವರು, ರಂಗಮ್ಮ ಉಪ್ಪಿಟ್ಟು ಕಡಲೆ ಉಸಲಿ ಮಾಡಿದ್ದರು ಬೆಳಗಿನ ಉಪಹಾರಕ್ಕೆ. ನಂತರ ಎದ್ದವರು ಪೇಷ್ಕಾರರು. ಸ್ನಾನ ಮಾಡಿ ಸಂಧ್ಯೆ ಮುಗಿಸಿ, ಹಜಾರದಲ್ಲಿ ಬಂದು ಕೂತಾಗ ದೇವಸ್ಥಾನದಲ್ಲಿ ಪೂಜೆ ಮುಗಿದು ಮಂಗಳಾರತಿಗೆ ಹೊಡೆಯುವ ದೊಡ್ಡ ಗಂಟೆ ಶಬ್ದ ಕೇಳಿಸಿತು. ಮೆಲ್ಲಮೆಲ್ಲನೆ ಸರಸು,ಕಮಲೂ, ಕಮಲು ಗಂಡ, ಮಕ್ಕಳು ಎಲ್ಲರೂ ಬಂದು ಹಜಾರದಲ್ಲಿ ಕುಳಿತರು. ಅಡಿಗೆ ಮನೆಯಿಂದ ಮನೆಯಾಕೆ ಶಾರೀನ ಕೂಗಿದರು. "ಶಾರೀ! ಅಟ್ಟಕ್ಕೆ ಹೋಗಿ ದೊನ್ನೆಕಟ್ಟು ತೊಗೊಂಡು ಬಾ, ಫಲಾರ ಕೊಡುಕ್ಕೆ ರಂಗಕ್ಕನಿಗೆ ಬೇಕು" ಅಂತ ಕೂಗಿ ಹೇಳಿದರು.

ಅಟ್ಟಕ್ಕೆ ಹತ್ತಿ ಹೋಗುವಾಗ, ಶಾರಿಯ ಕಾಲ ಗೆಜ್ಜೆಯ ಕಿಣಿಕಿಣಿ ಶಬ್ದ ಮಂದಗಮನದಲ್ಲಿ ಕೇಳಿಸುತ್ತಿತ್ತು. ಅಟ್ಟ ಹತ್ತಿದ ಮೇಲೆ ಕೇಳಿಸಲಿಲ್ಲ. ತಿರುಗಿ ಕೇಳಿಸಿತು. ತೀವ್ರ ಗಮನದಲ್ಲಿ-

"ಅಮ್ಮಾ! ಅಮ್ಮಾ ಅಟ್ಟದ ಮೇಲೆ ಹೆಂಚು ತೆಗೆದಿದೆ, ಹಗ್ಗ ತೂಗಿ ಬಿದ್ದಿದೆ" "ಆ" ಎಂದು ಪೇಷ್ಕಾರರು ಅಟ್ಟದ ಕಡೆ ಓಡಿದರು. ಅಳಿಯ ಕೊತ್ವಾಲರು ಹಿಂದೇಲೆ ಜಿಗಿದು ಓಡಿದರು. ಸರಸು,ಕಮಲೂ ಕೂಡ ಓಡಿದರು. ಮನೆಯಾಕೆಯೂ ಏದುಬ್ಬಸಪಡುತ್ತಾ ಓಡಿದರು. ಅಟ್ಟದ ಮೇಲೆ ಹತ್ತಿಪ್ಪತ್ತು ಹೆಂಚುಗಳು ತೆಗೆಯಲ್ಪಟ್ಟಿವೆ, ದೊಡ್ಡ ತರಾಯಿಗೆ ಕಟ್ಟಿದ ಎರಡು ಮಾರು ಹಗ್ಗ ತೂಗಿಬಿದ್ದಿದೆ.

"ಏನಾರಾ ಸಾಮಾನು ಕಳುವಾಗಿದೆಯೇ ನೋಡೇ" ಅಂದರು ಪೇಷ್ಕಾರರು.

"ಸರಸೂ ನಿನ್ನ ಒಡವೆ ವಸ್ತು, ಪೆಟ್ಟಿಗೆ, ಎಲ್ಲಾ ಸರಿಯಾಗಿದೆಯೋ ನೋಡಮ್ಮಾ" ಎಂದರು ಪೇಷ್ಕಾರರು.

"ಕಮಲೂ, ನಿನ್ನ ಕೊಠಡೀಲಿ ಕಳುವಾಗಿದೆಯೇ ನೋಡಮ್ಮಾ ಅಟ್ಟದಿಂದ ಮಹಡೀಗೆ ಬರೋದು ಬಲು ಸುಲಭ!" ಎಂದರು ಪೇಷ್ಕಾರರು.

"ಸದ್ಯ! ದೇವಸ್ಥಾನದಿಂದ, ಜವಾಹಿರಿ ಪೆಠಾರಿ ನಮ್ಮನೆಗೆ ಬಂದಿಲ್ಲ. ಅದೂ ಬಂದಿದ್ದರೆ, ಅದು ಕಳುವಾಗಿದ್ದರೆ, ನನ್ನ ತಲೇನೇ ಹೋಗ್ತಿತ್ತು. ದೇವರ ದಯ!" ಎಂದರು ಪೇಷ್ಕಾರರು ನಿಟ್ಟುಸಿರುಬಿಡುತ್ತಾ,

"ಏನೂ ಹೋಗಿಲ್ಲ ಅಂದ್ರೆ!", "ನಂದೇನೂ ಕಳುವಾಗಿಲ್ಲಪ್ಪಾ," "ನನ್ನ ಸಾಮಾನೆಲ್ಲಾ ಸರಿಯಾಗೇ ಇದೇಪ್ಪಾ" ಎಂದು ಸ್ವಲ್ಪ ಹೊತ್ತಿನ ಮೇಲೆ ಎಲ್ಲರೂ ಬಂದು ವರದಿ ಒಪ್ಪಿಸಿದರು.

"ದೇವರಿಗೊಂದು ತುಪ್ಪದ ದೀಪ ಹಚ್ಚಿಡೇ" ಎಂದರು ಪೇಷ್ಕಾರರು.

"ಅದನ್ನು ಮಾಡೇ ಬಂದೆ" ಎಂದರು ಮನೆಯಾಕೆ. ಇದನ್ನೂ ಹೇಳಬೇಕೇನ್ರೋ ಇವರು ಎನ್ನುವ ಮನೋಭಾವ ತೋರಿಸುತ್ತಾ.

"ತೂಗಿಬಿದ್ದಿರೋ ಹಗ್ಗ ಆದವಾನಿ ಕಡೆ ನೂಲು ಹಗ್ಗ. ನಮ್ಮ ಪ್ರಾಂತ್ಯದಲ್ಲಿ ಸಿಗ್ತೋ ಹಗ್ಗ ಅಲ್ಲ ಅಮ" ಎಂದರು ಕೊತ್ವಾಲ ಅಳಿಯಂದಿರು.

"ನಮ್ಮಪ್ಪನ ಮನೇಲಿ. ವಿಶ್ರಾಂತಿ ಪಡೀತಾ ನನ್ನ ಜತೇಲಿರಲಿ ಅಂತ ಕರಕೊಂಡು ಬಂದರೆ, ನಿಮ್ಮಪ್ಪ ನೆಟ್ಟಿಟ್ಟ ಕೆಲಸಾನ ಇಲ್ಲೂ ಮಾಡಬೇಕಾಯ್ತಲ್ಲ ಅಂದ್ರೆ" ಅಂತ ಕಮಲು ಕುಗ್ಗಿದ ದನಿಯಲ್ಲಿ ಅಂದಳು.

"ನಮ್ಮಂಥೋರು ಕೆಲಸಮಾಡ್ತಾ ಇರೋವಾಗಲೇ ಸುಖ ಕಣೇ" ಎಂದು ಕೊತ್ವಾಲರು ಹೇಳಿ, ಎತ್ತಕಡೆಯಿಂದ ಕಳ್ಳ ಬಂದಿರಬಹುದು ನೋಡೋಣ, ಮನೆ ಹೊರಗೆ ಹೋಗಿ, ಎಂದು ಹೊರಕ್ಕೆ ನಡೆದು ಬಂದರು. ಅಟ್ಟ ಇದ್ದ ಭಾಗ ದಕ್ಷಿಣ ಮುಖವಾಗಿತ್ತು. ನೇರನೆ ಗೋಡೆ ಮೇಲೆ ಸೂರಿನ ಎತ್ತರ ಸುಮಾರು ಹತ್ತು ಮೊಳ ಇತ್ತು. ಈ ಗೋಡೆ ಹತ್ತೋದು ಯಾವ ಕಳ್ಳನಿಗೂ ಅಸಾಧ್ಯ? ನಯಗಾರೆ ಮಾಡಿಸಿದ ಗೋಡೆ. ಬೆಲ್ಲದ ಅಚ್ಚಿನ ಹಾಗಿದೆ ಮನೆ, ಎತ್ತ ಕಡೆಯಿಂದ ಬಂದಿರಬಹುದು? ಎಂದು ಯೋಚಿಸಿದರು. ಅಕ್ಕಪಕ್ಕದಲ್ಲಿ ತೆಂಗಿನಮರ, ಅಡಿಕೆಮರ, ಮತ್ಯಾವ ಎತ್ತರದ ಮರಗಳೂ ಇರಲಿಲ್ಲ. ಸೂರಿನ ಮೇಲಕ್ಕೆ ಹೇಗೆ ಬಂದ ಅಂತ ಯೋಚಿಸಹತ್ತಿದರು. ಕಮಲೂನೂ ಪೇಷ್ಕಾರರೂ ಬಂದು ಸೇರಿದರು. ಶಾರೀನೂ ಬಂದಳು. ಗೋಡೆ ಮೇಲೆ ಹತ್ತಿ ಸೂರು ಸೇರಿದ್ದರೆ, ಗೋಡೆ ಮೇಲೆ ಹೆಜ್ಜೆ ಗುರುತಿರಬೇಕು. ನಿನ್ನೆ ತಾನೆ ಮಳೆ ಬಿದ್ದಿದೆ, ಸುಣ್ಣ ಹೊಡೆಸಿ ಇನ್ನೂ ಹತ್ತು ಹದಿನೈದು ದಿನಗಳೂ ಆಗಿಲ್ಲ," ಎಂದು ಪೇಷ್ಕಾರರು ಅಂದರು. "ಕಾಲು ತೊಳೆದುಕೊಂಡು, ಒಣಗಿಸಿಕೊಂಡು ಗೋಡೆ ಹತ್ತಿದರೆ ಹೆಜ್ಜೆ ಗುರ್ತು ಯಾಕೆ ಕಾಣಬೇಕು" ಅಂದಳು ಜಾಣೆ ಕಮಲು.

"ಚೊಂಬು ಬಿಸಿನೀರು, ಟವಲು ಹಿಡಿದುಕೊಂಡು ಗೋಡೆ ಅಂಚಲ್ಲಿ ಕಳ್ಳನ ಹೆಂಡತಿ ಕಾದಿರ್ತಾಳೆ? ಹೌದು" ಎಂದು ಮೂದಲಿಸುವ ದನಿಯಲ್ಲಿ ಕೊತ್ವಾಲರು ಹೇಳಿದಾಗ ಶಾರಿ ನಕ್ಕಳು.

"ನಿಂಗೇನು ಗೊತ್ತಾಯ್ತೆ ನಗುಕ್ಕೆ?" ಎಂದು ಕಮಲು ಶಾರಿ ಕೆನ್ನೆಗೆ ಮುತ್ತಿಟ್ಟಳು. "ದೊಡ್ಡ ಬೊಂಬೊಂದನ್ನು ಗೋಡೆಗೆ ಒರಗಿಸಿ ಅದರ ಮೇಲೆ ಹತ್ತಿದರೆ ಸೂರು ಸೇರಬಹುದು. ದೊಂಬರ ಹುಡುಗ ಮೈದಾನದ ಆಟದಲ್ಲಿ ನೆಟ್ಟಗೆ ನಿಂತ ಉದ್ದಾನೆ ಗಣೆಮರಾನ ಕೋತಿ ಹತ್ತಿದ ಹಾಗೆ ಎಷ್ಟು ಬೇಗ ಹತ್ತಿದ ಅಂತೀರೀ!" ಎಂದು ಶಾರಿ ರಾಗ ರಾಗವಾಗಿ ಅಭಿನಯಿಸೇಬಿಟ್ಟಳು.

"ಬಲು ಚೂಟಿ ಕಣೆ ಶಾರಿ!" ಎಂದು ಕೊತ್ವಾಲರು ಕೆನ್ನೆ ಚಿವುಟಿದರು. "ಊರ ತಳವಾರನಿಗೆ ಹೇಳಿಕಳಿಸೋಣ ನಂತರ ಮಿಕ್ಕ ಕ್ರಮ ಕೈಕೊಳ್ಳೋಣ" ಎಂದರು ಪೇಷ್ಕಾರರು.

ಎಲ್ಲರೂ ಒಳಗೆ ಹೋಗಿ ಉಪ್ಪಿಟ್ಟು, ಉಸಲಿ, ಕಾಫಿ ಮುಗಿಸೋ ಹೊತ್ತಿಗೆ



ಕೊತ್ವಾಲರು ಬಂದಿದ್ದಾರೆಂದು ತಿಳಿದ ಊರ ತಳವಾರ ತನ್ನ ಸಿಬ್ಬಂದಿ ಜತೆಗೆ ಪೇಷ್ಕಾರರ ಮನೆಗೆ ಬಂದ. ಕೊತ್ವಾಲರು ಎಲ್ಲ ವಿಷಯಗಳನ್ನು ತಿಳಿಸಿದರು. "ಮನೇಲಿ ಯಾವ ಯಾವ ಸಾಮಾನು ಕಳುವಾಗಿವೆ ಅನ್ನೋದು ಇನ್ನೂ ಗೊತ್ತಿಲ್ಲ. ಹೆಂಚು ತೆಗೆದು ಹಗ್ಗಕಟ್ಟಿ ಕಳ್ಳ ಮನೆಯೊಳಕ್ಕೆ ಇಳಿದಿದ್ದಾನೆ. ಮಧ್ಯ ರಾತ್ರಿ ತನಕ ನಾವೆಲ್ಲಾ ಮಾತಾಡ್ತಾ ಇದ್ದೆವು. ಅಂದರೆ ರಾತ್ರಿ ಮೂರನೆಯ ಝಾವದಲ್ಲಿ ಇದು ನಡೆದಿರಬೇಕು. ದೊಂಬರಾಟದ ಗುಂಪಿನೋರ ಕೆಲಸ ಇದ್ದ ಹಾಗೆ ಕಾಣುತ್ತೆ. ಅವರನ್ನ ಮೊದಲು ಸುತ್ತುಗಟ್ಟಿ ಹೆದರಿಸಿ ಬೆದರಿಸಿ ವಿಚಾರಣೆ ಮಾಡಿದರೆ ಒಳ್ಳೇದು. ಅವರು ಇಳಿದುಕೊಂಡಿರೋ ಪಾಳಯದ ಸುತ್ತ ಕಾವಲು ಹಾಕಿಸಿರಿ. ತನಿಖೆ ಮಾಡೋ ಹೊತ್ತಿಗೆ ಹೇಳಿಕಳಿಸಿ, ನಾನೂ ಬರ್ತೀನಿ ನಿಮ್ಮ ಸಹಾಯಕ್ಕೆ" ಎಂದು ಹೇಳಿ ಊರ ತಳವಾರನ್ನ ಕಳಿಸಿಕೊಟ್ಟರು.

ಸಂಜೆ ಮುಂಚೆ ಕೊತ್ವಾಲರನ್ನು ಬರಮಾಡಿಕೊಂಡು ದೊಂಬರ ವಿಚಾರಣೆಯನ್ನು ತಳವಾರರು ಠಾಣೆಯಲ್ಲೇ ನಡೆಸಿದರು. ದೊಂಬರ ಪಾಳಯದಲ್ಲಿ ತಲಾಷು ಮಾಡಿದಾಗ ಸಂದೇಹಾಸ್ಪದವಾದ ಯಾವುದೊಂದು ಸಾಮಾನೂ ಸಿಗಲಿಲ್ಲ. ಗೆಣೆಮರ ಹತ್ತೋ ಮಾದ ಮತ್ತು ದೊಂಬರ ಪಾಳಯದ ನಾಯಕನಾದ ಡೋಲಿನವನನ್ನು ಠಾಣೆಗೆ ಕರೆದುತಂದಿದ್ದರು. ಗಣೆಮರದ ಮೇಲೆ ಆಡೋರು ಇನ್ನಾರೂ ಇಲ್ಲವೆಂದೇ ದೊಂಬರನಾಯಕ ಹೇಳಿದ್ದ. ಠಾಣೆಗೆ ಬಂದ ಮೇಲೆ ಕೊತ್ವಾಲರೇ ತನಿಖೆಗೆ ಆರಂಭಿಸಿದರು.

"ಇಲ್ಲಿಗೆ ಆಡಲು ಬರುವ ಮೊದಲು ಯಾವ ಊರಿನಲ್ಲಿ ಆಟ ಆಡಿದ್ದಿರಿ?"

ದೊಂಬರನಾಯಕ ಹೇಳಿದ, "ಮಡಕೇರೀಲಿ ಪಾಳಯ ಹೂಡಿದ್ದೆವು."

"ಅದಕ್ಕೆ ಹಿಂದೆ ಎಲ್ಲಿ?"

"ಮಂಗಳೂರು ಕಡೆಯಿಂದ ಕಡಲಂಚಿನಲ್ಲೇ ಕಳೆದ ಒಂದು ವರ್ಷದಿಂದ ಅಲ್ಲಲ್ಲಿ ಜಾತ್ರೆ, ಪರಸೆ, ಸಂತೆಗೂಡಿದಲ್ಲಿ ಆಟ ಹೂಡಿ ಇಲ್ಲಿಗೆ ಬಂದೆವು. ಮಾದ ಮೂರು ವರ್ಷದ ಹಿಂದೆ ಕಾಯಿಲೆಬಿದ್ದಾಗ ಮನೆದೇವರು ಮಲ್ಲಿಕಾರ್ಜುನಂಗೆ ಹರಕೆ ಹೊತ್ತಿದ್ದೆ. ಈ ವರ್ಷನಾದರೂ ಹರಕೆ ತೀರಿಸಲೇಬೇಕು, ಇಲ್ಲದೆ ಇದ್ದರೆ ಮಲ್ಲಿಕಾರ್ಜುನಂಗೆ ಕೋಪ ಬಂದಾತು ಅಂತ ಹೆದರಿಕೆಯಾಯ್ತು, ಬಂದೆವು."

"ಮತ್ತೆ ಈ ಹಗ್ಗ ಎಲ್ಲಿ ಸಿಕ್ತು. ಯಾವೂರಲ್ಲಿ ಕೊಂಡಿರಿ?" ಕೊತ್ವಾಲರು ಕೇಳಿದರು.

"ಈ ಹಗ್ಗ ನಾವು ನೋಡೇ ಇಲ್ಲ. ನಾರಿನ ಹಗ್ಗಾನೇ ನಾವು ಬಳಸೋದು" ಡೋಲಿನವ ಉತ್ತರಿಸಿದ.

"ಮಾದ! ನೀನು ನೋಡು ಈ ಹಗ್ಗಾನ. ಎಲ್ಲಿ ಕೊಂಡಿದ್ದು ನೆನಪಿದೆಯಾ?" ಕೊತ್ವಾಲರು ಕೇಳಿದರು.

"ಇಂತ ಹಗ್ಗ ನಾನು ನೋಡಿದ್ದೇ ಇಲ್ಲ, ಒಡೆಯರಾ!" ಎಂದ ಮಾದ.

"ಗಣೆಮರ ಕಟ್ಟಬೇಕಾದರೆ ಏನೆಲ್ಲಾ ಹುಷಾರು ನೋಡ್ತೀರಿ?" ಎಂದು ಕೇಳಿದರು.

"ಮರ ಪರೀಕ್ಷೆ ಮಾಡಿ ಗುಂಡಿ ತೋಡಿ ಹೂಳುತ್ತೇವೆ. ನಾಲ್ಕು ದಿಕ್ಕಿಗೂ ನಾರಿನ

ಹಗ್ಗ ಬಿಗಿದು ಗೂಟ ಹೊಡೆದು ಕಟ್ತುತ್ತೇವೆ. ಎರಡಾಳೆತ್ತರದಲ್ಲಿ, ನಾಲ್ಕಾಳೆತ್ತರದಲ್ಲಿ ಹೀಗೆ ಎರಡು ಮಟ್ಟದಲ್ಲಿ ಹಗ್ಗ ಬಿಗಿದು ಕಟ್ತುತ್ತೇವೆ" ಎಂದ ಡೋಲಿನವ.

"ಗಣೆಮರಾನ ಗೋಡೇಗೇ ಒರಗಿಸಿಟ್ಟು ಹತ್ತುಕ್ಕಾಗುತ್ತಾ" ಎಂದು ಕೇಳಿದರು.

"ಅದೇನು ಸುಲಭ" ಎಂದ ಡೋಲಿನವ.

"ಹ್ಞಾ... ಗಾ!" ಎಂದರು, ಕಿರುನಗೆ ತೋರುತ್ತಾ, ಕೊತ್ವಾಲರು ನಿಧಾನವಾಗಿ, ಊರ ತಳವಾರನ ಕಡೆ ನೋಡುತ್ತಾ.

"ಎರಡಾಳು ಸಿಕ್ಕರೆ ಗಣೆಮರ ಹೊತ್ತು ಗೋಡೇಗೆ ವಾಲಸಿ ಹಿಡಕೊಂಡ್ರೆ ಆಗಬಹುದು" ಎಂದ ಮಾದ.

ಊರ ತಳವಾರ ಕೊತ್ವಾಲರ ಕಡೆ ನೋಡಿದ. ಡೋಲಿನವ ಇಬ್ಬರ ಕಡೆಗೂ ನೋಡಿ, ಮಾದನ ಕಡೆಗೆ ದೃಷ್ಟಿ ಹಾಯಿಸಿದ.

"ದೊಡ್ಡ ಬೊಂಬೊಂದನ್ನು ಗೋಡೆಗೆ ವಾಲಿಸಿಟ್ಟು, ಹತ್ತಲು ಬರುತ್ತಾ" ಕೊತ್ವಾಲರು ಕೇಳಿದರು.

"ಮೂರು ಮಣ ತೂಕ ಹೊರೋ ಬೊಂಬಾದರೆ ಅದು ಸಾಧ್ಯ" ಎಂದ ಡೋಲಿನವ.

"ಪೇಷ್ಕಾರರ ಮನೆ ಹತ್ತಿರ ಸುಣ್ಣ ತೊಡೆಯುಕ್ಕೆ ಅಂತ ಸಾರ್ವೆ ಕಟ್ಟುವ ಬೊಂಬಿನ ರಾಶಿ ಬಿದ್ದಿದೆಯಲ್ಲ, ಆ ಬೊಂಬಾಗಬಹುದಾ? ಸಾರ್ವೆ ಕಟ್ಟಿದರೆ ನಾಲ್ಕಾಳು ಭಾರ ತಡೆಯುತ್ತೆ" ಎಂದರು ಕೊತ್ವಾಲರು.

"ಸಾರ್ವೆ ಕಟ್ಟಿದಾಗ ನಾಲ್ಕಾಳು ಭಾರ ತಡೆದರೆ, ಅಂತ ಬೊಂಬು ಮೂರು ಮಣ ತೂಕ ತಡೆದೀತೇನೋ" ಎಂದ ಡೋಲಿನವ.

"ಬೊಂಬಿನ ಮೇಲೆ ಮಾರಿಗೆರಡು ಗಂಟಿರುತ್ತೆ. ಗಣೆಮರ ಹತ್ತೋರು ಬೊಂಬನ್ನು ಹತ್ತಲು ಆಗೋದೇ ಇಲ್ಲ" ಎಂದ ಮಾದ.

ಮಾದನ ಕಡೆ ಡೋಲಿನವ ನೋಡಿದ. ನೆಟ್ಟದೃಷ್ಟೀಲಿ ನೋಡಿದ.

"ಹೌದ್ಹೌದು ಮಾದ! ಮರೆತಿದ್ದೆ. ಅಂಗೈ ಅಂಗಾಲಿನಲ್ಲಿ ಝೋಕು ಹೊಡೆದುಕೊಂಡು ಹತ್ತೋರು ಗಂಟು ಸಿಕ್ಕಿದರೆ ಕೈಕಾಲು ಎಲ್ಲಾ ತರಚಿಕೋತಾರೆ, ಅಂದ ಹಾಗೇ ನಿನ್ನ ಕೈ ತೋರು" ಎಂದರು ಕೊತ್ವಾಲರು.

ಎರಡೂ ಅಂಗೈಗಳನ್ನು ಮಾದ ಎದುರಿಗೆ ಚಾಚಿದ.

"ಸೂಲಗಿತ್ತಿ ಅಂಗೈ ಇದ್ದ ಹಾಗಿದೆಯಲ್ಲಾ ಮಾದ" ಎಂದರು ಕೊತ್ವಾಲರು.

"ಗಣೆಮರ ಬಲು ನುಣುಪು; ಹಸುಮಕ್ಕಳ ಕೆನ್ನೆ ಇದ್ದ್ಹಂಗೆ" ಎಂದ ಮಾದ ಕಿರುನಗೆ ತೋರುತ್ತಾ.

ಕೊತ್ವಾಲರು ಸ್ವಲ್ಪ ಬಿರುಸುಗೊಂಡರು. ಊರ ತಳವಾರನಿಗೆ ಆಣತಿ ಇತ್ತರು.

"ದೊಂಬರ ಪಾಳ್ಯದ ಮೇಲೆ ಕಣ್ಣಿರಲಿ, ಪಾಳಯ ಎತ್ತಿ ಬೇರೆ ಊರಿಗೆ



ಹೋಗೋಕೆ ಮುಂಚೆ ಠಾಣೆಯಲ್ಲಿ ಅನುಮತಿ ಪಡೆದು ಹೋಗಬೇಕು ಎಂದು ಹುಕುಂ ಹೊರಡಿಸಿ" ಎಂದರು.

ಊರ ತಳವಾರರು ಡೋಲಿನವನ ಕಡೆ ತಿರುಗಿ, "ಕೇಳಿಸ್ತಾ?" ಎಂದ.

"ಈಗ ಪಾಳಯಕ್ಕೆ ಹೊರಡಬಹುದಾ, ಪೂಜೆ ಹೊತ್ತಾಯ್ತು" ಎಂದ ಡೋಲಿನವ.

"ಹ್ಞೂ" ಎಂದು ಕೊತ್ವಾಲರು ಹೇಳಿದ ಮೇಲೆ ಡೋಲಿನವ ಮಾದನನ್ನು ಹಿಂದೆ ಹಾಕ್ಕೊಂಡು ಹೊರಟುಹೋದ.

* * * *

"ಮಾದ ಏನನ್ನೋ ಮರೆಮಾಚ್ತಾ ಇದಾನೆ. ಆದರೆ ಅವನನ್ನ ಹಿಡಿಯಲು ಏನೂ ಸಾಕ್ಷ್ಯ ಸಿಕ್ಕಿಲ್ಲ" ಎಂದರು ಕೊತ್ವಾಲರು.

"ನನಗೂ ಹಾಗೇ ಅನ್ನಿಸ್ತು. ಡೋಲಿನವನ ಕಡೆ ನೋಡ್ತಾ ಇದ್ದೆ. ಅವನಿಗೂ ಹಾಗೇ ಅನ್ನಿಸಿದ ಹಾಗೆ ಕಾಣಿಸಿತು. ಆದರೆ ತಾವು ಅಂದ್ಹಂಗೆ, ಸುಬೇದಾರ್ರೆದುರಿಗೆ ಕಚೇರೀಲಿ ರುಜುವಾತು ಇಲ್ಲದೆ ಇದ್ದರೆ ನಾವೇನೂ ಮಾಡೋ ಹಂಗಿಲ್ಲ" ಎಂದ ಊರ ತಳವಾರ.

"ಕಣ್ಣಿಟ್ಟಿರಿ ನೀವೆಲ್ಲಾ! ಕಳ್ಳನ ಹೆಂಡತಿ ಎಂದಿದ್ದರೂ...." ಎಂದು ಕೊತ್ವಾಲರು ಹೇಳಿ ಪೇಷ್ಕಾರರ ಮನೆಕಡೆ ಹೊರಟರು.

* * * *

ದೊಂಬರ ಪಾಳೆಯದಂಚಿನಲ್ಲಿದ್ದ ಆಲದಮರ ಸಿಕ್ಕಿದಾಗ ಡೋಲಿನವ ನಿಂತ. ಹಿಂದೆ ಬರುತ್ತಿದ್ದ ಮಾದನನ್ನು, "ಮಗ! ಇತ್ತ ಬಾ. ಎದುರಿಗೆ ನಿಂತುಕೋ" ಎಂದ. ಮಾದ ಎದುರಿಗೆ ಬಂದು ತಲೆ ತಗ್ಗಿಸಿ ನಿಂತ.

"ನಿನ್ನೆ ರಾತ್ರಿ ಏನಾತು ಹೇಳು! ಕೊತ್ವಾಲರು ಕೇಳಿದಕ್ಕೆಲ್ಲಾ ನಾನೇ ಉತ್ತರ ಕೊಡುತ್ತಿದ್ದೆ. ಮಧ್ಯೆ ಮಧ್ಯೆ ನೀನೂ ಜವಾಬುಕೊಟ್ಟೆ. ಅದನ್ನು ಕಂಡು ನನಗೆ ಅನುಮಾನ ಬಂದಹಾಗೇ ಅವರಿಗೂ ಬಂದಿರಬೇಕು? ನನ್ನ ಹತ್ತಿರ ಹೇಳುಕ್ಕೆ ಹಿಂತೆಗೆಯೋದಾ!" ಎಂದ ಡೋಲಿನವ.

"ಅಪ್ಪಾ ಈ ಸಂಜೆ ಪೂಜೆ ಮಾಡಿದಮ್ಯಾಗ, ನಿನ್ನ ಕಾಲಿಗೆ ಅಡ್ಡಬಿದ್ದಾಗ, ಹೇಳೋಣ ಅಂತಿದ್ದೆ. ಮುಂಜಾನೆ ಎಲ್ಲಾ ಕಾಮಯ್ಯನ ಜತೆಗಿದ್ದೆ. ಮಧ್ಯಾಹ್ನ ಯಾರಾರೋ ಬಂದಿದ್ದರು. ಅದಕ್ಕೇ ಮೊದಲು ಹೇಳಲಾಗಲಿಲ್ಲ; ನಿಂಗೆ ಹೇಳದೆ ಯಾರ ಹತ್ತಿರ ಹೇಳಿಕೊಳ್ಳಲ್ಲಪ್ಪಾ! ಏನು ತಪ್ಪು ಮಾಡಿದರೂ ನೀನೊಪ್ಪಿಕೋತಿ ಅಂತ ಗೊತ್ತು ನಂಗೆ. ಹೇಳ್ತೀನಿ ಕೇಳು. ಮೊನ್ನೆ ಮಧ್ಯಾಹ್ನ ಗಣೆಮರ ಹತ್ತೋವಾಗ ಜಂಗಮಯ್ಯ ಬಂದು ಎಚ್ಚರಿಕೆ ಕೊಟ್ಟಾಗ, ನನ್ನ ಪ್ರಾಣ ಉಳಿಸ್ದಾಗ, ನೀನು ಅವನ ಕಾಲಿಗೆ ಅಡ್ಡಬಿದ್ದೆ. ನಾನು ಸುಂಕೆ ನಿಂತಿದ್ದೆ. ಆ ಸಂಜೆ ಅವನ ಪಾದಕ್ಕೆ ಅಡ್ಡಬೀಳೋಣ, ಅಂತ ಅವನ ಹಿಂದೇನೇ ಹೋದೆ. ಊರಾಚೆ ಸುಡುಗಾಡು ದಾರೀ ಮಂಟಪಕ್ಕೆ ಹೋಗಿ ಕುಳಿತಾಗಲೇ ಅವನ

ನನಗೆ ಸಿಕ್ಕಿದ್ದು. ಅವನ ಕಾಲು ಹಿಡಿದು ನಮಸ್ಕಾರ ಮಾಡಿದೆ. ಅವನ ಹರಕೆ ಬೇಡಿದೆ. 'ನಮ್ಮಪ್ಪ ಇರೋಗಂಟ ನನ್ನ ಕೈಕಾಲು ಚೆಂದಾಗಿರೊ ಹಂಗೆ ಹರಸಯ್ಯಾ, ಅಮ್ಯಾಗೆ ನನ್ನ ಕರ್ಮಕ್ಕೆ ಶಿಕ್ಷೆಯನ್ನು ನಗುತ್ತಾ ಅನುಭವಿಸ್ತೀನಿ' ಎಂದು ಅಡ್ಡಬಿದ್ದು ಬೇಡಿದೆ. ಜಂಗಮಯ್ಯ ನನ್ನ ತಲೆಮ್ಯಾಗೆ ಕೈಯಾಡಿಸಿ, 'ಹೈದಾ! ನಿನಗಂತ ಪುಣ್ಯಾ ಸಿಗೋ ಹಂಗೆ ನಿಮ್ಮಪ್ಪ ನೊಂದು ಬೆಂದು ಪುಣ್ಯಾನ ಸಂಪಾದಿಸಿದಾನೆ. ಅದು ನಿನ್ನ ತಲೆ, ಕೈಕಾಲು, ಕಾಯುತ್ತೆ. ನನ್ನಿಂದ ಏನೂ ಆಗಬೇಕಾಗಿಲ್ಲ' ಅಂದ. 'ನೀವು ಏನು ಹೇಳಿದರೆ ಅದು ಮಾಡ್ತೀನಿ. ಪ್ರಾಣ ಉಳಿಸಿದೋರು-ಏನಾರ ಸೇವೇಗೇ ಅವಕಾಶ ಕೊಡಿ' ಅಂದೆ ನಾನು. 'ಏನು ಹೇಳಿದರೂ ಮಾಡೀಯಾ?' ಅಂದ ಜಂಗಮಯ್ಯ. 'ಹ್ಞೂ' ಅಂದೆ ತಕ್ಷಣ. 'ಹಂಗಾರ ಈ ರಾತ್ರಿ ಉದ್ದಾನೆ ಬೊಂಬು ಹಿಡಿದು ಹಾರಿ ಪೇಷ್ಕಾರರ ಮನೆ ಸೂರನ್ನ ಪಡುವಣ ದಿಕ್ಕಿಂದ ಏರು. ಎಂಟು ಹೆಂಚು ತೆಗೆದು, ಈ ಹಗ್ಗಾನ ತರಾಯಿಗೆ ಕಟ್ಟಿ ಇಳಿಬಿಟ್ಟು, ಆ ಮ್ಯಾಗೆ ಪಾಳಯ ಸೇರು. ಯಾಕೆ ಅಂತ ಕೇಳಬೇಡ. ಯಾರಾದರೂ ಕೇಳೋತನಕ ಹೇಳಬೇಡ' ಎಂದ ಜಂಗಮಯ್ಯ. ಮೂರನೆ ಝಾವದಲ್ಲಿ, ಬೊಂಬು ಹಿಡಿದು ಓಡಿಬಂದು, ಝೋಕು ಕೊಟ್ಟು ಪೇಷ್ಕಾರರ ಮನೆ ಸೂರಿಗೆ ಹಾರಿದೆ. ಬೊಂಬು ಗೋಡೆಗೆ ಆತುಕೊಂಡು ನಿಂತಿತು. ಜಂಗಮಯ್ಯ ಹೇಳಿದ್ದಾಗೆ ಅವ ಕೊಟ್ಟ ಹಗ್ಗಾನ ಹಂಚು ತೆಗೆದು ತರಾಯಿಗೆ ಕಟ್ಟಿ ಇಳಿಬಿಟ್ಟು, ಸರಿದು ಬಂದು ಬೊಂಬು ಹಿಡಿದು ಇಳಿದೆ. ಬೊಂಬನ್ನು ತೆಗೆದು ಅದರ ರಾಶಿಗೆ ಸೇರಿಸಿ ಪಾಳಯಕ್ಕೆ ಬಂದೆ. ಇಷ್ಟೇ ಜಂಗಮಯ್ಯ ಹೇಳಿದ್ದು. ಇಷ್ಟೇ ನಾನು ಮಾಡಿದ್ದು. ಪೇಷ್ಕಾರರ ಮನೇಲಿ ಕಳ್ಳತನ ಆಗುತ್ತೆ ಅಂತ ನಂಗೆ ಗೊತ್ತಿಲ್ಲ. ಅಲ್ಲಿ ಕಳುವಾಗಿರೋದೇನೋ ಅದೂ ನಂಗೆ ಗೊತ್ತಿಲ್ಲ. ಜಂಗಮಯ್ಯನಿಗೆ ದಾಸೋಹ! ಅಷ್ಟೇ ಮಾಡಿದೆ. ನಿಂಗೆ ಮೊದಲು ಹೇಳದೇ ಮಾಡಿದ್ದು ನಂತಪ್ಪು, ಆದರೆ ಜಂಗಮಯ್ಯ ಹೇಳಿದ ಹಾಗೆ ಮಾಡಿದೆ" ಎಂದು ಮಾದ ಹೇಳಿ ಡೋಲಿನವನ ಕಾಲು ಹಿಡಿದುಕೊಂಡ.

ಮಾದ ಕಾಲು ಬಿಟ್ಟನಂತರ ಡೋಲಿನವ ಪಾಳಯವನ್ನು ಸೇರಿದ. ಮಗ ಮಾದನಿಗೆ ಏನು ಹೇಳಲೂ ಅವನ ಗಂಟಲು ದಾರಿ ಬಿಡಲಿಲ್ಲ.

* * * *

ಹುಣಸೂರು ಕಡೆಯಿಂದ ಬೆಟ್ಟದಪುರಕ್ಕೆ ಬರುತ್ತಿದ್ದ ಭತ್ತದ ಗಾಡಿಗಳು ತಾಳೆ ತೋಪಿನ ಹತ್ತಿರ ಬಂದಾಗ, ಮೊದಲ ಗಾಡಿಯವನಿಗೆ ಏನೋ ನರಳಾಟ ತೋಪಿನಿಂದ ಕೇಳಿಸಿ ಬಂತು. ಗಾಡಿ ನಿಲ್ಲಿಸಿದ. ಹಿಂದಿದ್ದ ಗಾಡಿಯವರೆಲ್ಲಾ, "ಏನ್ಲಾ" ಅಂತ ಕೇಳುತ್ತ ಹತ್ತಿರ ಬಂದರು. ನರಳಾಟ ಅವರಿಗೂ ಕೇಳಿಸಿತು. ಕೇಳಿ ಬಂದ ಕಡೆಗೆ ಹೊರಟರು. ಚಿರತೆಗಿರತೆ ಏನಾರೂ ಯಾರನ್ನಾದರೂ ಗಾಯ ಮಾಡಿದೆಯೋ ನೋಡೋಣ, ಸಿದ್ಧವಾಗಿರೋಣ ಎಂದು ದೊಣ್ಣೆ ಮಚ್ಚುಕತ್ತಿ ಸಿದ್ಧಮಾಡಿಕೊಂಡೇ ಹೊರಟರು. ತಾಳೆ ಪೊದೆಯಾಚೆ ಕೈಕಾಲು ಕಟ್ಟಿದ್ದವನೊಬ್ಬ ನರಳುತ್ತ ಮಲಗಿದ್ದ. ಕಟ್ಟು ಬಿಚ್ಚಿ ಅವನನ್ನು ಗಾಡಿಯ ಹತ್ತಿರ ತಂದು ಮುಖಕ್ಕೆ ನೀರಾಡಿಸಿ ಜ್ಞಾನ ಬಂದಮೇಲೆ ಅವನು ಬೆಟ್ಟದಪುರದ ಪೇಷ್ಕಾರರ ಅಳಿಯನೆಂದೂ, ಹುಣಸೂರಿಗೆ ಹಿಂದಿನ ದಿನ ಹೋಗುತ್ತಿದ್ದಾಗ ದಾರಿಯಲ್ಲಿ ಕಳ್ಳರು ಅವನನ್ನು ಹಿಡಿದು ಹೊಡೆದು ಕೈಕಾಲು ಕಟ್ಟಿಹಾಕಿ



ಪೊದೆಯಾಚೆ ಹಾಕಿದರೆಂದೂ, ಇದ್ದ ಹಣವನ್ನೆಲ್ಲಾ ದೋಚಿಕೊಂಡು ಹೋದರೆಂದೂ, ತಿಳಿಯಬಂದಿತು.

ಗಾಡಿಯವರು ಪೇಷ್ಕಾರರ ಮನೆಗೆ ಅಳಿಯಂದಿರನ್ನು ತಂದುಬಿಟ್ಟರು. ಪಂಡಿತರಿಂದ ಪರೀಕ್ಷೆ ಮುಗಿದು, ಸರಸೂ ಗಂಡನ ಜೀವಕ್ಕೆ ಅಪಾಯವಿಲ್ಲವೆಂದು ತಿಳಿದ ಮೇಲೆ, ಕೊತ್ವಾಲರು ಷಡ್ಡಕನ ಹತ್ತಿರ ಕುಳಿತು ವಿಚಾರಿಸಿದರು. ಯಾರು ಏನು ಮಾಡಿದರು, ಎಲ್ಲಿ ಎತ್ತ ಎಂದು, ಸರಸು ಗಂಡ ನಡೆದುದನ್ನೆಲ್ಲಾ ಹೇಳುವಂತಿರಲಿಲ್ಲ, ಇಷ್ಟೇ ಹೇಳಿದ. "ಹುಣಸೂರಿಗೆ ತುರ್ತಾಗಿ ಹೋಗಬೇಕಾಗಿತ್ತು. ಬಾಕಿ ಕೊಡಬೇಕಾಗಿದ್ದ ಶೆಟ್ಟರು ಅಲ್ಲಿಗೆ ಆ ದಿನ ಬರುವುದಾಗಿ ಬರೆದಿದ್ದರು. ಪಚ್ಚೆ ಉಂಗುರ ಹಾಕಿಕೊಂಡ ಹಳ್ಳಿಮುಕ್ಕ ಒಬ್ಬ ತಾಳೆ ಬೊಂತೆ ಮಾರುಕ್ಕೆ ಬಂದ. ಉಂಗುರ ಅವನ ಹತ್ತಿರ ಹೇಗೆ ಬಂತು, ಕಳ್ಳ ಇರಬಹುದೇ ಅಂತ ಸಂಶಯ ಬಂತು. ಆದರೂ ಬಾಕು ನನ್ಹತ್ತಿರ ಇತ್ತು. ಕುದುರೆ ಇತ್ತು. ಅವ ತೆಳ್ಳಗಿದ್ದ, ಕೆಮ್ಮಿದರೆ ಕೆಳಗೆ ಬೀಳೋಹಾಗೆ ಕಂಡ. ಅದಕ್ಕೇ ಕುದುರೆಯಿಂದ ಇಳಿದು ಉಂಗುರ ನೋಡೋಣ ಕೊಡು ಎಂದೆ. ಯಾವುದೋ ಮಾಯದಲ್ಲಿ ಹೊಟ್ಟೆಗೊಂದು ಬಲವಾಗಿ ಮಡಗಿದ. ಅಷ್ಟೇ ನನಗೆ ಜ್ಞಾಪಕ. ಗಾಡಿಯೋರು ಬಂದು ಕಟ್ಟುಗಳನ್ನು ಬಿಚ್ಚೋತನಕ ಏನೊಂದೂ ಗೊತ್ತಾಗಲಿಲ್ಲ. ಹಳ್ಳಿಮುಕ್ಕ, ಸಾಮು, ಗರಡಿ ಮಾಡಿದವನಿರಬೇಕು" ಎಂದ.

ಕೊತ್ವಾಲರು ಯೋಚನೆ ಮಾಡಿದರು. "ಮನೇಲಿ ಏನೂ ಕಳುವಾದ ಹಾಗೆ ಕಾಣಿಸುಲ್ಲ. ಬೆಲೆಬಾಳುವ ಒಡವೆ ವಸ್ತು ಎಲ್ಲಾ ಸರಿಯಾಗೇ ಇದೆ. ದೊಂಬರ ಮೇಲೆ ಅನುಮಾನ ಬರೋ ಹಾಗೆ ಯಾರಾದರೂ ಹೀಗೆಲ್ಲಾ ಮಾಡಿದ್ದಾರೋ ಏನೋ... ತಪ್ಪಿಸಿಕೊಳ್ಳುಕ್ಕೆ ಕಾಲಾವಕಾಶ ಸಿಗಲಿ ಅಂತ ಕಳ್ಳ ಹೀಗೇನಾದರೂ ಮಾಡಿರಬಹುದೇ? ಕಳ್ಳ ಏನು ಕದ್ದಿದ್ದಾನೆ? ಕಳ್ಳನಿಗೂ ದೊಂಬರಿಗೂ ಏನು ಸಂಬಂಧ ಇರಬಹುದು? ಚಿಲ್ಲರೆ ಪಲ್ಲರೆ ವಸ್ತುವಿನ ಕಳ್ಳ ಹೀಗೆಲ್ಲಾ ಮಾಡಿರಲಾರ. ಭಾರಿ ಬೆಲೆಯುಳ್ಳ ಯಾವುದೋ ವಸ್ತುಗಳಿಗೆ ಎಲ್ಲವನ್ನೂ ತಿಳಿದುಕೊಂಡ ಯಾವನೋ ಒಬ್ಬ ಹೀಗೆಲ್ಲಾ ಮಾಡಿರಬೇಕು. ಷಡ್ಡಕ ಎಲ್ಲ ವಿಷಯಗಳನ್ನೂ ಹೇಳುತ್ತಿಲ್ಲ. ಅಂದಮೇಲೆ ಅವನೂ ಈ ವಿಷಯದಲ್ಲಿ ಅಪರಾಧಿಯಾಗಿರಲೇಬೇಕು. ದೊಂಬರ ಮಾದ ಕೂಡ ತನಗೆ ತಿಳಿದ ವಿಷಯಗಳನ್ನೂ ಕೂಡ ಹೇಳಿಲ್ಲ. ಅವನ ಮೇಲೆ ರುಜುವಾತು ಮಾಡಲು ಏನೂ ಸೂಕ್ಷ್ಮವಿಲ್ಲ. ಅಂದಮೇಲೆ ಇದರ ವಿಚಾರ ಮಾಡೋದು ಹುಚ್ಚು ಕೆಲಸ. ಕರೀ ಕೋಣೇಲಿ, ಕರೀ ಬೆಕ್ಕನ್ನು, ಅಮಾವಾಸ್ಯೆ ರಾತ್ರಿ ಕಿವುಡ ಹುಡುಕಿದಂತೇ ಸರಿ. ಇದನ್ನು ಮರೆತು ಮೂರು ದಿನ ಸುಖವಾಗಿರೋಣ" ಎಂದು ತೀರ್ಮಾನಿಸಿದರು.

ಮಾರನೆ ದಿನ ಸಂಜೆ ಕೊತ್ವಾಲರು ಅಡ್ಡಾಡಲಿಕ್ಕೆಂದು ಬೆಟ್ಟದ ಕಡೆಗೆ ಹೊರಟರು. ಯಾರೋ ಹಿಂಬಾಲಿಸಿದಂತೆ ಅವರಿಗೆ ಅನುಮಾನ ಬಂತು. ತಿರುಗಿ ನೋಡಿದರೆ ಯಾರೂ ಇಲ್ಲ. ಕೋಳಿ ಕೂಗು ಕೇಳುವಷ್ಟು ದೂರ ನಡೆದ ಮೇಲೆ ಅನುಮಾನ ಹೆಚ್ಚಾಯ್ತು. ತಿರುಗಿ ನೋಡಿದರು. ದೊಂಬರ ನಾಯಕ ಹಿಂದೆ ಬರುತ್ತಿದ್ದ. "ಯಾಕ್ಲಾ ನನ್ನ ಹಿಂದೆ ಹಿಂಗೆ ಬರುತ್ತಿದ್ದೀ?" ಎಂದರು. ದೊಂಬರ ನಾಯಕ ಬಂದು ಕಾಲಬಳಿ

ಅಡ್ಡಬಿದ್ದ. "ಧಣೇರಾ! ದೊಂಬರಾಟ ಆಡೋ ನಾವು, ಸಾವಿನ ಕೂಡ ದಿನಾ ಸರ ಆಡ್ತೀವಿ. ಸುಳ್ಳು ಹೇಳಿದರೆ ತಲೆ ಹೋಗುತ್ತೆ. ಅದಕ್ಕೂ ಹೆಚ್ಚಾಗಿ ಕೈಕಾಲು ಮುರಿಯುತ್ತೆ. ಅದಕ್ಕೇ ನಿಂತಾವ ಬಂದು ಎಲ್ಲಾ ಹೇಳೋಣ ನೀವೊಬ್ಬರೇ ಇರೋವಾಗ ಅಂತ ನಿ ಹಿಂದೆ ಬಿದ್ದೆ. ಒಬ್ಬನೇ ಮಗ ನಂಗೆ, ಮೊದಲ ಹುಟ್ಟಿದ ಹಬ್ಬದ ಹೊತ್ತಿಗೆ ತಬ್ಬಲಿಯಾದ ಮಗ, ಬಲು ಒಳ್ಳೇ ಹೃದ. ಎಲ್ಲಾ ನಿಮಗೆ ಹೇಳೋಣ ಅಂತ ಬಂದಿದ್ದೀನಿ" ಎಂದು ಪೀಠಿಕೆ ಹಾಕಿ ಮಾದ ಹೇಳಿದ್ದನ್ನೆಲ್ಲಾ ಹೇಳಿದ.

ಕೊತ್ವಾಲರು ಡೋಲಿನವನ ಕಡೆ ನೋಡಿದರು. "ಅಂತಾ ಮಗನ್ನ ಪಡೆದ ನೀನೇ ಪುಣ್ಯವಂತನೋ, ನಿನ್ನಂಥಾ ಅಪ್ಪನ್ನ ಪಡೆದ ಅವನೇ ಪುಣ್ಯವಂತನೋ ಹೇಳುಕ್ಕೆ ಬರಲ್ಲ. ಆದರೆ ಜಂಗಮಯ್ಯನೇ ನಿಮಗೆ ದೇವರು, ಅವನೇ ಇನ್ನಾರಿಗೋ ಕಳ್ಳ. ನನ್ನ ಷಡ್ಡಕನೇ ಕಳ್ಳನೋ ಅಂತ ಅನುಮಾನ. ಹೇಗೇ ಇರಲಿ, ಇದೆಲ್ಲಾ ಬಿಚ್ಚು ಮನಸ್ಸಿನಿಂದ ಹೇಳಿದ್ದಕ್ಕಾಗಿ ನಿನಗೆ ಶರಣಾರ್ತಿ ಹೇಳಬೇಕು. ನಿಮ್ಮ ಮೇಲೆ ಅನುಮಾನ ಪಟ್ಟು, ಇಷ್ಟೆಲ್ಲಾ ಮಾಡುವಂತೆ ಮಾಡುವ ಕಳ್ಳ ಯಾಕಾರೂ ಕದ್ದ; ಏನನ್ನು ಕದ್ದ! ಅದು ತಿಳಿಯೋತನಕ ಸುಮ್ಮನಿರಬೇಕು" ಎಂದರು.

ಡೋಲಿನವನ ಜತೆಯಲ್ಲೇ ಕೊತ್ವಾಲರು ಮಾವನ ಮನೆಗೆ ಹಿಂತಿರುಗಿದರು.

* * * *

ಕೊಂಡನಕಪಲ್ಲಿಯಲ್ಲಿ ಭೈರವಿ ಪೂಜೆಯನ್ನು ಆಗ ತಾನೇ ಮುಗಿಸಿ, ಗುಡಿಯ ಹೊರಗೆ ಬಂದು ಅಶ್ವತ್ಥಮರದ ದೊಡ್ಡ ಬೀಳಲೊಂದಕ್ಕೆ ಬೆನ್ನು ಕೊಟ್ಟು ಪೂಜಾರಪ್ಪನು ಹುಲಿ ಚರ್ಮದ ಮೇಲೆ ಕೂತಿದ್ದಾನೆ. ಹಣೆಯ ಮೇಲೆ ಅಡ್ಡಡ್ಡಲಾಗಿ ಬಳಿದ ವಿಭೂತಿ ಪಟ್ಟೆಗಳು, ಮಧ್ಯದಲ್ಲಿ ಹೆಬ್ಬೆರಳಗಲದ ಕುಂಕುಮ, ರುದ್ರಾಕ್ಷಿ ಸರಗಳು ಹೊರವಾಗಿ ಕೂದಲು ಬೆಳೆದ ಎದೆಯ ಮೇಲೆ ಹರಿದಾಡುತ್ತಿವೆ. ಕಟ್ಟುಮಸ್ತಿನ ಮುಪ್ಪಿನಾಳು, ಅರವತ್ತಾಗಿದ್ದರೂ ಕೂದಲು ಇನ್ನೂ ನರೆತಿದ್ದಿಲ್ಲ. ಮರ್ಯಾದೆ ಹುಟ್ಟಿಸುವ ಮೂರ್ತಿ!

ಯುವಕರಿಬ್ಬರು ಬಂದು ಪೂಜಾರಪ್ಪನ ಕಾಲಿಗೆ ಅಡ್ಡಬಿದ್ದರು. ನಂತರ ತೊಟ್ಟಿದ್ದ ಕಸೆ ಅಂಗಿಯನ್ನು ಬಿಚ್ಚಿ ಅಂಗಿಯ ಬೆನ್ನಾಗದಲ್ಲಿದ್ದ ದೊಡ್ಡ ಜೇಬಿನಿಂದ ಹಿರಿಯವನು ವಜ್ರ ಪಚ್ಚೆಯ ನಾಗಮುರಿಯೊಂದನ್ನೂ, ಪಚ್ಚೆ ಉಂಗುರವನ್ನೂ ತೆಗೆದು ಪೂಜಾರಪ್ಪನ ಕಾಲಬಳಿ ಇಟ್ಟ.

"ಮೂರು ತಿಂಗಳಾತು, ಜಗ್ಗು, ಲಕ್ಕು, ನೀವು ಊರ ಬಿಟ್ಟು ಹೊರಟು, ಈ ವರ್ಷ ದಕ್ಷಿಣ ದಿಕ್ಕಿನ ಕಡೆ ಹೊರಟಿದ್ದಿರಲ್ಲವಾ? ಬೆಟ್ಟದ ಮೇಲಿನ ಮಲ್ಲಿಕಾರ್ಜುನ ಸ್ವಾಮೀನ ನೋಡಿ ಬಂದಿರಾ? ಇಪ್ಪತ್ತು ವರ್ಷಗಳ ಹಿಂದೆ ನಾನು ಹೋಗಿದ್ದಾಗ ಚಿರತೆ ಜತೆಗೆ ಕಾದಾಡಬೇಕಾಯ್ತು. ಅಮ್ಮನ ಪೂಜೇಗೆಂತ ಮೀಸಲಾಗಿದ್ದ ಕಿರುಕಠಾರಿ ಕೈಲಿತ್ತು. ಚಿರತೆಯ ತೆರೆದ ಬಾಯಿಗೆ ಅದನ್ನು ಜೋರಾಗಿ ಎಸೆದೆ. ಅಮ್ಮನ ಆಶೀರ್ವಾದ, ಕಠಾರಿ ಬಾಯಿ ಹೊಕ್ಕು ತಲೆಯ ಆ ಕಡೆ ಕಾಣಿಸಿಕೊಂಡಿತು. ಆಗಿನ್ನೂ ನಲವತ್ತರ ಪ್ರಾಯ, ಕೆಚ್ಚಿತ್ತು. ಈಗ ನೆನೆಸಿಕೊಂಡರೆ ಸ್ವಲ್ಪ ಹೆದರಿಕೆ ಆಗ್ತದೆ" ಎಂದ ಪೂಜಾರಪ್ಪ.



"ನಿಮಗಾ! ಹೆದರಿಕೆ!! ಹಾಗಂತ ನನ್ನ ನಂಬು ಅಂತೀರಾ?" ಎಂದ ಹುಸಿನಗುತ್ತಾ ಜಗ್ಗೋಜಿ.

"ನೀವೇನೇನ್ಮಾಡಿದ್ರಿ ಅಂತ ಕೇಳೋಕ್ಕೆ ಹೋದೋನು, ನಾನು ಎಂದೋ ಮಾಡಿದ್ದನ್ನ ಹೇಳುಕ್ಕೆ ಶುರುಹಚ್ಚಿದೆನಲ್ಲ! ಅರಳುಮರಳು ಅಂತ ಕಾಣುತ್ತೆ. ಒಂದು ಮಂಡಲ ಕಠಿಣವ್ರತ ಮಾಡಿದರೆ ಅಮ್ಮ ಬುದ್ಧೀನ ನೆಟ್ಟಗೆ ಮಾಡ್ತಾಳು! ಈ ವರ್ಷದ ಕಸುಬು ಹೇಗೆ ಮಾಡಿದ್ರಿ ಹೇಳಿ," ಎಂದ ಪೂಜಾರಪ್ಪ. "ಆರಾಮಾಗಿ ಕೂತುಕೊಂಡು ಹೇಳಿ" ಎಂದು ಅನುಮತಿ ಇತ್ತ ಪೂಜಾರಪ್ಪ.

ಜಗ್ಗೋಜಿ ನಮ್ರತೆಯಿಂದ ತುಸು ದೂರದಲ್ಲಿ ಕುಳಿತುಕೊಂಡು ಹೇಳಲಾರಂಭಿಸಿದ. ಲಕ್ಕೋಜಿಯೂ ಅಲ್ಲೇ ಕುಳಿತುಕೊಂಡ. "ಮೂರು ತಿಂಗಳ ಹಿಂದೆ ನೀವು ಹೇಳಿದಂತೆ ದಕ್ಷಿಣದತ್ತ ಹೊರಟು ಶ್ರಾವಣ ಮಾಸದ ಹೊತ್ತಿಗ ಬೆಟ್ಟದ ಪುರ ಸೇರಿದೆವು. ಮಲ್ಲಿಕಾರ್ಜುನನ ಉತ್ಸವಕ್ಕೆ ಇನ್ನೂ ಹತ್ತು ಹದಿನೈದು ದಿನಗಳಿದ್ದುವು. ಊರಾಚೆ ಮಾರಿ ಗುಡಿ ಯಾವುದೂ ಸಿಗಲಿಲ್ಲ. ಬಸವನ ಕೊಳವಾಗಲಿ, ಮಂಟಪವಾಗಲಿ ಕಾಣಲಿಲ್ಲ. ಸುಡುಗಾಡು ದಾರೀಲಿ ಹಳೇ ಮಂಟಪವೊಂದು ಸಿಕ್ಕಿತು. ಅಲ್ಲೇ ಉಳಿದುಕೊಂಡೆವು. ಎರಡು ದಿನ ಊರಲೆಲ್ಲಾ ನಾನು ಓಡಾಡಿದಾಗ ಮಾಂಧಾತನ ಮಿಠಾಯಿ ಅಂಗಡೀಲಿ ಮುದುಕ ಒಬ್ಬನೇ ಮಿಠಾಯಿ ಮಾಡೋದು, ಮಾರೋದು ಎಲ್ಲಾ ಮಾಡ್ತಾನೆ ಅಂತ ಗೊತ್ತಾಯಿತು. ಜಾತ್ರೆ ಹೊತ್ತಿಗೆ ನಾನು ಅಡ್ಡೆ ಮೇಲೆ ಅವನ ಬತ್ತಾಸು ಕಲ್ಯಾಣಸೇವೆಗಳನ್ನು ಮಾರಿಕೊಂಡು ಬರ್ತೀನಿ, ಹೊಟ್ಟೆಗೆ ಹಾಕಿ ಏನಾರ ಕೂಲಿ ಕೊಟ್ಟರೆ ಆಯಿತು ಎಂದು ಮಾಂಧಾತನಿಗೆ ಹೇಳಿದೆ. ಅವ ಒಪ್ಪಿದ. ಬತ್ತಾಸ್ ಕಲ್ಯಾಣಸೇವೆ ಮಾರುಕ್ಕೆ ಅಂತ ಬೆಟ್ಟದಪುರದಲ್ಲೆಲ್ಲಾ ನಾಲ್ಕಾರು ದಿನ ಮನೆಮನೆಗಳ ಪರಿಚಯವನ್ನೆಲ್ಲಾ ಮಾಡಿಕೊಂಡೆ. ಪೇಷ್ಕಾರರ ಮನೆ ಹತ್ತಿರ ಎಂಟು ವರ್ಷದ ಹುಡುಗಿ ಮುದ್ದು ಮುದ್ದಾಗಿ ಮಾತಾಡುತ್ತಾ ಬಂದು ಒಂದು ಹೊಸ ಹೊಸ ಕಾಸು ಕೊಟ್ಟು ಬತ್ತಾಸುಕೊಂಡಾಗ ವರತರೇಖಿನ ತಿಲಕ ಹಣೇಲಿದ್ದುದನ್ನು ಕಂಡು 'ಯಾರಮ್ಮ ಕೊಟ್ಟರು, ನಿನ ಗಂಡಾನಾ' ಅಂತ ತಮಾಷೆಗೆ ಕೇಳಿದೆ. 'ಅಪ್ಪ ಕೊಟ್ಟರು, ಟಗರು ಕಾಳಗಕ್ಕೆ ಹೋದಾಗ ತಂದುಕೊಟ್ಟರು. ಅಪ್ಪನ ಹತ್ತಿರ ಯಾವಾಗಲೂ ಹೂವಿನ ವಾಸನೆ ಬರುತ್ತೆ. ಎಂತೆಂತಾ ಕತೆ ಹೇಳ್ತಾರೆ ಅಂತಿ ನಮ್ಮಪ್ಪ!' ಎಂದೆಲ್ಲಾ ಮಣಿಮಣಿಯಾಗಿ ಹೇಳಿದಳು. ಉತ್ಸವಕ್ಕೆ ಮೂರು ದಿನ ಮುಂಚೆ ಪೇಷ್ಕಾರರ ಮನೆ ಹತ್ತಿರ ಹೋಗುತ್ತಿದ್ದಾಗ ಹಾದಿ ಚಿನವಾರ ಕೆಲಸ ಮಾಡುತ್ತಿದ್ದುದನ್ನು ಕಂಡೆ. ಅಲ್ಲಿಗೆ ಹೋದಾಗ ಬಿಳಿ ಹರಳಿನ ಬಲು ಅಗ್ಗದ ನಾಗಮುರಿಗೆಯೊಂದಕ್ಕೆ ಅವನು ಹರಳು ಮೆಟ್ಟುತ್ತಿದ್ದ. ಪೇಷ್ಕಾರರಂತಹವರ ಮನೇಲಿ ನವರಾತ್ರಿ ಬೊಂಬೆಗಳಿಗಿಡೋ ಇಂತಹ ಒಡವೇನ, ಯಾಕೆ ಇಟ್ಟಿದ್ದಾರು ಅಂತ ಅನುಮಾನ ಬಂತು. ಸರಿಮಾಡಿಸುತ್ತ ಕೂತಿದ್ದ ಮನೆಯವರು ಮನೆ ಅಳಿಯಂದಿರು ಅನ್ನೋದನ್ನೂ, ಆತ ಪುಟಾಣಿ ಹೆಣ್ಮಗುವಿನ ಅಪ್ಪನೇ ಇರಬಹುದೆಂದೂ ಊಹಿಸಿದೆ. ಆಗ ಸುಡುಗಾಡು ದಾರಿಯ ಮಂಟಪಕ್ಕೆ ಬಂದು, 'ಲಕ್ಕ-ಪೇಷ್ಕಾರರ ಮೊದಲಳಿಯಂದಿರು ಹುಣಸೂರಿಗೆ ಹೋಗೋರು. ನೀನು ಈಗಲೇ

ಆ ರಸ್ತೇಲಿ ಹೋಗಿ ತಾಳೆ ತೋಪಿನ ಬಳಿ ಇರು. ಅವರು ಬಂದರೆ ಹೀಗೆ ಹೀಗೆ ಮಾಡು ಎಂದು ಎಲ್ಲ ವಿವರಗಳನ್ನೂ ಹೇಳಿದೆ. ನಂತರ ಬೆಟ್ಟದ ಮೇಲಿನ ಮಲ್ಲಿಕಾರ್ಜುನನನ್ನು ದರ್ಶನಮಾಡಲು ಹೊರಟೆ. ಉತ್ಸವಕ್ಕಾಗಿ ಅಲಂಕಾರಮಾಡಿದ ಮಲ್ಲಿಕಾರ್ಜುನ ಸ್ವಾಮಿಯನ್ನು ಚೆನ್ನಾಗಿ ನೋಡಲು ಮೊದಲ ಅಂಕಣದಲ್ಲಿ ನಿಂತರೆ ಚೆಂದ, ಅಲ್ಲಿ ನಿಲ್ಲಲು ಸಾಧುಸಂತರಿಗೆ ಅವಕಾಶ ಎಂದು ತಿಳಿದಾಗ ಜಂಗಮಯ್ಯನ ವೇಷ ಹಾಕಿಕೊಂಡು ಹೊರಟೆ. ದಾರೀಲಿ ದೊಂಬರ ಗಣೆಮರ ವಾಲಾಡ್ತಾ ಇದ್ದುದು ಕಂಡು, ನಾನು ಹುಡುಗನಾಗಿದ್ದಾಗ ನೀವು ಹೊಟ್ಟೆ ಮೇಲೆ ಗಣೆಮರ ಇಟ್ಟುಕೊಂಡು ನನ್ನ ಆ ತುದಿಯಲ್ಲಿ ತಿರುಗಿಸುವುದನ್ನು ಕಲಿಸಿದಾಗ, ಗಣೆಮರ ಇಷ್ಟು ವಾಲಬಾರದು ಅಂತ ಹೇಳಿದ್ದು ಚೆನ್ನಾಗಿ ನೆಪ್ಪಿ ಇತ್ತು. ಅವರಿಗೆ ಎಚ್ಚರಿಕೆ ಕೊಟ್ಟು ದೇವಸ್ಥಾನಕ್ಕೆ ಹೋದೆ. ಕಣ್ಣು ತುಂಬಾ ಮಲ್ಲಿಕಾರ್ಜುನನನ್ನು ನೋಡಿದೆ. ಏನೆಲ್ಲಾ ಜವಹಿರಿ ಹಾಕಿದ್ದರು ಅಂತೀರಿ! ಅರಮನೆ ಕಡೆಯೋರು ನನ್ನ ಪಕ್ಕದಲ್ಲೇ ನಿಂತಿದ್ದರು, ಜತೇಲಿದ್ದ ಹೆಣ್ಣುಮಗಳಿಗೆ ಒಡವೆಗಳನ್ನು ತೋರಿಸಿ ಇಷ್ಟಿಷ್ಟು ಬೆಲೆ, ಇಂತಿಂತವರ ಸೇವೆ ಎಂದೆಲ್ಲಾ ಹೇಳುತ್ತಿದ್ದರು. ದೇವರ ಬಲತೋಳಿಗೆ ತೊಡಿಸಿದ್ದ ವಜ್ರಪಚ್ಚೆಯ ನಾಗಮುರಿಗೆ ಹತ್ತುಸಾವಿರ ಹೊನ್ನು ಬಾಳುವುದೆಂದೂ, ಬಡಾಸುಲ್ತಾನನ ಕಾಣಿಕೆಯೆಂದೂ ಹೇಳಿದಾಗ, ನನ್ನ ಕಿವಿ ಎದ್ದು ನಿಂತಿತು. ದೇವರಿಗೆ ತೊಡಿಸಿದ್ದ ನಾಗಮುರಿ, ಬಿಳಿಹರಳಿನದು ಅಂತ ಖಂಡಿತ ಮಾಡಿಕೊಂಡೆ. ಪೇಷ್ಕಾರರ ಷೋಕಿ ಅಳಿಯಂದಿರು ಇಂತಹದೇ ನಾಗಮುರಿಗೇನ ಸರಿಪಡಿಸುತ್ತಿದ್ದುದೂ ಈಗ ಅರ್ಥವಾಯಿತು. ಬೇಗ ಹೊರಕ್ಕೆ ಪ್ರಸಾದ ತೆಗೆದುಕೊಳ್ಳದೇನೇ ಬಂದೆ. ಬೆಟ್ಟ ಇಳಿಯುತ್ತಿದ್ದಾಗ ಮಳೆ ಬಂತು. ಪಕ್ಕದಲ್ಲಿದ್ದ ಮಾವಿನಮರದ ಕೆಳಗೆ ನಿಂತೆ. ಎರಡು ಮಾರು ದೂರದಲ್ಲೇ ಇದ್ದ ತೆಂಗಿನಮರಕ್ಕೆ ಸಿಡಿಲುಬಡಿದು ಅದು ಉರಿಯಹತ್ತಿತು. ನನಗೇನೂ ಆಘಾತ ಆಗಲಿಲ್ಲ. ನಿಮ್ಮ ಹರಕೆ, ಶಿವನ ಕೃಪೆ ಎಂದುಕೊಂಡೆ. ಈಗ ನೀನ್ಮಾಡಿದ್ದು ಹೇಳ್ಲಾ ಲಕ್ಕ" ಎಂದ. ಲಕ್ಕ ಹೇಳಿದ. "ಹುಣಸೂರಿನಲ್ಲಿ ನಡೆಯಲಿದ್ದ ಟಗರು ಕಾಳಗಕ್ಕೆ ಪೇಷ್ಕಾರರ ಅಳಿಯಂದಿರು ಹೊರಡುತ್ತಾರೆ ಅಂತ ಅಣ್ಣ ಹೇಳಿದ. ಬಡಾಸುಲ್ತಾನನ ಕಾಣಿಕೆಯಾದ ನಾಗಮುರಿಗೆಯನ್ನು ಪೇಷ್ಕಾರರ ಅಳಿಯಂದಿರು, ಮನೆಯಲ್ಲೇ ಇದ್ದುಕೊಂಡು ಲಪಟಾಯಿಸಿ ಅದರ ಹಾಗೇ ಇರುವ ಅಗ್ಗದ ಒಡವೆಯನ್ನು ಮಾಡಿಸಿ ಪೆಠಾರಿಗೆ ಹಾಕಿದ್ದರೆಂದೂ ಹೇಳಿದ. ಹುಣಸೂರು ಮಾರ್ಗ ಹೊರಟೆ. ತಾಳೆಪೊದೆ ಹತ್ತಿರ ಹಳ್ಳಿಮುಕ್ಕನ ಹಾಗೆ ತಾಳೆಹೂ ಹಿಡಿದು ಮಾರುಕ್ಕೆ ನಿಂತೆ. ವರತರೇಕಿನ ಪಚ್ಚೆ ಉಂಗುರ ನೋಡಿದ ಅವ, ಮಿಕ್ಕ ಒಡವೆಗಳ ಆಸೆಗೆ ನನ್ನೊಡನೆ ಬಂದಾಗ, ನೀವು ಕಲಿಸಿಕೊಟ್ಟಿದ್ದಿರಲ್ಲಾ ಬಿಗಿದ ಬಲಮುಷ್ಟೀಲಿ ಹೊಕ್ಕಳ ಮೇಲೆ ಹೊಟ್ಟೆಗೆ ಬಲವಾಗಿ ಹಠಾತ್ತನೆ ಮಡಗೋದು, ಅದೇ ಹೊತ್ತಿಗೆ ಎಡ ಮುಷ್ಟೀಲಿ, ಮಡಶಿರದ ಮೇಲೆ ಭಾರವಾಗಿ ಎಕ್ಕೋದು, ಅದನ್ನು ಮಾಡಿದೆ. ಆಸಾಮಿ ಮಡಿಕೆ ಹಾಕ್ಕೊಂಡು ಬಿದ್ದ. ಅವನ ಸೊಂಟದಲ್ಲಿದ್ದ ಬಡಾಸುಲ್ತಾನನ ಕಾಣಿಕೆಯಾದ ನಾಗಮುರಿಕೆಯನ್ನೂ, ಪಚ್ಚೆ ಉಂಗುರವನ್ನೂ, ಮಿಕ್ಕ ಹಣವನ್ನೂ ತೆಗೆದುಕೊಂಡು ಅವನ ಕುದುರೆ ಹತ್ತಿ ಹುಣಸೂರು ರಸ್ತೇಲಿ ಎರಡು ಮೈಲಿ ಹೋಗಿ, ಕುದುರೇನ ಓಡಿಸಿಬಿಟ್ಟು, ಕಾಲು ದಾರಿ ಹಿಡಿದು



ನಡೆಯುತ್ತಾ ನೇರವಾಗಿ ಹುಣಸೂರಿನ ಮಾರಿ ಗುಡಿಗೆ ಹೋದೆ. ಅಲ್ಲಿಗೆ ಅಣ್ಣ ಬಂದಾಗ ಮೂರು ದಿನ ಮುಗಿದಿತ್ತು ಇಬ್ಬರೂ ನಡೆದು ಇಲ್ಲಿಗೆ ಹಿಂತಿರುಗಿದೆವು.

ಈಗ ಮುಂದುವರಿಸು ಅಣ್ಣಾ ಎಂದ ಲಕ್ಕೋಜಿ. ಜಗ್ಗೋಜಿ ಹೇಳಲಾರಂಭಿಸಿದ. "ಹದಿನೈದು ದಿನದ ಪ್ರಯಾಣ, ಮೊದಲನ್ನಿಸಿತು. ದೇವರ ಒಡವೆ, ಅಲ್ಲೇ ಕೊಟ್ಟುಬಿಡೋಣವಾ ಅಂತ, ಆಮೇಲೆ ಅನ್ನಿಸ್ತು. ದೇವರಿಗೆ ಬೇಕಿತ್ತಿಲ್ಲವೇನೋ ಅದಕ್ಕೇ ಕಳುವಿಗೆ ಅನುಕೂಲ ಮಾಡಿಕೊಟ್ಟ ಅಂತ. ಅದಕ್ಕೇ ನಿಮ್ಮ ಕಾಲ ಹತ್ತಿರ ಹಾಕಿ, ನೀವು ಹೇಳಿದ್ಹಂಗೆ ಮಾಡೋಣ ಅಂತ ಬಂದುಬಿಟ್ಟೆ" ಎಂದು.

"ನೀ ಮಾಡಿದ್ದು ಸೈ ಜಗ್ಗೋಜಿ. ಆ ದೇವರಿಗೆ ಅಲ್ಲಿ ಈಗ ಬೇಡವಾಗಿದೆ, ಇಲ್ಲಿನ ದೇವರೂ ಎರಡು ದಿನ ಹಾಕ್ಕೊಳ್ಳಲಿ ಅಂತಲೇ ನಿನಗೆ ಒಲಿದು ಇತ್ತ ಕಳಿಸಿದ್ದಾನೆ ನಾಗಮುರಿಯನ್ನ. ಹತ್ತು ಸಾವಿರ ಹೊನ್ನು ಕೊಟ್ಟರೂ ಈಗ ಇಂತಹ ವಜ್ರ ಪಚ್ಚೆ ಸಿಗೋಹಾಗಿಲ್ಲ" ಎಂದು ಜಗ್ಗೋಜಿ ಲಕ್ಕೋಜಿಯ ತಲೆಯನ್ನು ನೇವರಿಸಿ, ಹರಸುತ್ತಾ, ಪೂಜಾರಪ್ಪ ಹೇಳಿದ. ಆಗ ಲಕ್ಕೋಜಿ, "ಪೂಜಾರಪ್ಪನೋರ ಮಲ್ಲಿಕಾರ್ಜುನಸ್ವಾಮಿ ಸೇವೆಮಾಡಿ, ಅಣ್ಣ ಬಂದ. ಅಣ್ಣ ಹೇಳಿದ ಹಾಗೆ ಮಾಡೋ ನನಗೆ ಆ ದೇವರ ಸೇವೆ, ದರ್ಶನ ಪುಣ್ಯಾನೇ ಸಿಗಲಿಲ್ಲ - ಮುಂದಿನ ವರ್ಷ ಅಲ್ಲಿಗೆ ನನ್ನ ಕಳಿಸೀರಾ" ಎಂದು ಕೇಳಿದ.

"ಕಿರಿಯವರಿಗೆ ದೇವರನ್ನು ಹುಡುಕೋ ಗೋಜೇ ಇರುಲ್ಲ ಲಕ್ಕ-ಅವರ ಹಿರಿಯರೇ ಕಣ್ಣೆದುರಿಗೆ ಕಾಯುತ್ತಾ ಇರ್ತಾರಲ್ಲ" ಎಂದ ಪೂಜಾರಪ್ಪ.

## "ಮುತ್ತು ಉದುರಿಸ್ತೀನಿ;-
## -ಪ್ರೇತದ ಕೈಲಿ ಮಾತಾಡಿಸ್ತೀನಿ"

ಹಿರಿಯೂರು ತಾಲ್ಲೂಕು, ಮತ್ತೋಡಿ ಹೋಬಳಿಯ ಅರಸಿನಗುಂಡಿ, ಚಿಕ್ಕಬ್ಯಾಲದ ಕೆರೆ, ಹಳ್ಳಿಗಳಲ್ಲಿ ಲಾಗಾಯ್ತಿನಿಂದಲೂ ಕಬ್ಬಿಣದ ಕುಲುಮೆಗಳಿದ್ದವು. ಮತ್ತೋಡಿನಲ್ಲಿ ಗಾಜಿನ ಬಳೆಗಳನ್ನು ತಯಾರಿಸುತ್ತಿದ್ದರು.

-ಬ್ಯಾಡರ ಮಾಚಿಯು ರೂಪಸ್ಥೆ, ಯೌವನಸ್ಥೆ. ಸುಮಾರು ಜನ ಶ್ರೀಮಂತ ಯುವಕರು ಪತಂಗಗಳಂತೆ ಅವಳ ಸುತ್ತ ಒದ್ದಾಡುತ್ತಿದ್ದರು-

ಬ್ಯಂಜಾರಿಗಳಿಗೆಲ್ಲಾ ಬಲು ಖುಷಿಯಾಗಿತ್ತು. ಚಿಕ್ಕ ಬ್ಯಾಲದಕೆರೆ ಸಂತೆಗೆ ಮೂಟೆಗಟ್ಟಲೆ ದವಸಧಾನ್ಯಗಳು ಬಂದಿತ್ತು. ಅಗ್ಗದ ದರದಲ್ಲಿ ಇವರಿಗೆ ಸಿಕ್ಕೂ ಇತ್ತು. ಹಿರಿಯೂರಿಗೆ ಹೋಗಿ ಆದವಾನಿ, ಬಳ್ಳಾರಿ ಕಡೆ ದಳ್ಳಾಳಿಗಳಿಗೆ ಮಾರಿದರೆ ಕೈತುಂಬ ಹಣ ಸಿಗುವ ಹಾಗಿತ್ತು. ಇನ್ನು ಕೇಳಬೇಕೇ ಇವರುಗಳ ಮೋಜನ್ನ? ಮಧ್ಯಾಹ್ನವೇ ಹೊಟ್ಟೆಬಿರಿಯ ಬುತ್ತಿ ಉಂಡು, ಗಾಡಿ ಕಟ್ಟಿಸಿಕೊಂಡು ಹಿರಿಯೂರು ದಾರೀಲಿ ಹಾಡುತ್ತಾ ಹೊರಟರು.

ಒಂದು ಗಾವುದದಷ್ಟು ದೂರ ನಡೆದಿರಬಹುದು. ಗಾಡಿಗಳ ಮುಂದೆಯೇ ಒಬ್ಬ ಹಳ್ಳಿಯವ ನಿಂತುಕೊಂಡ. "ದಾರಿಬಿಟ್ಟು ನಡೆಯೋ" ಎಂದು ಮೊದಲ ಗಾಡಿಯವ ಕೂಗಿದ. ಬಡ ಹಳ್ಳಿಯವ, "ನಡೆದೂ ನಡೆದೂ ದಣಿವಾಗ್ಯೆತೆ, ಹತ್ತಿರದ ಹಳ್ಳಿಗಂಟ ನನ್ನೂ ಕರ್ಕೊಂಡು ಹೋಗೀಪ್ಪಾ!" ಎಂದು ಬೇಡಿಕೊಂಡ.

ಅಷ್ಟು ಹೊತ್ತಿಗೆ ಎಲ್ಲಾ ಗಾಡಿಗಳೂ ನಿಂತಿದ್ದುವು. ಗಾಡಿ ಹೊಡೆಯುವರೆಲ್ಲರೂ ಇಳಿದು ಬಂದು ಗುಂಪು ಕೂಡಿಕೊಂಡರು. ಎದುರಿಗಿದ್ದವನೊಬ್ಬನೇ ಬಡಹಳ್ಳಿಯವ. ಕಣ್ಣು ದೃಷ್ಟಿ ಹಾಯಿಸೋ ಅಷ್ಟು ದೂರ ಎಲ್ಲ ಕಡೆಗಳಲ್ಲೂ ನೋಡಿದರೂ ಬಟ್ಟಬಯಲು. ಕಳ್ಳರು ಕಾಕರು ಮಾಡಿದ ಉಪಾಯವಲ್ಲ ಅಂತ ತಿಳಿಯಿತು. "ಕಡೆ ಗಾಡೀಲಿ ಹೋಗಿ ಕೂತುಕೋ! ಲಕ್ಕ ಒಬ್ಬನೇ ಗಾಡಿ ಹೊಡೀತಾ ಇದಾನೆ. ಅವನಿಗೆ ಜತೆ ಆದ ಹಾಗೆ ಆಯ್ತು. ಹರಿದಾರಿ ನಡೆದರೆ ಅರಿಸಿನಗುಂಡಿ ಸಿಕ್ತದೆ. ಅಲ್ಲಿ ಬೇಕಾರ ಇಳಿದು ಸುಧಾರಿಸ್ಕೊ" ಎಂದು ಹೇಳಿ, ಲೊಟ್ಟೆ ಹೊಡೆದು ಎತ್ತುಗಳಿಗೆ ಎಚ್ಚರಿಕೆ ಕೊಟ್ಟು, ಗಾಡಿಗಳನ್ನು ಮುಂದಕ್ಕೆ ನಡೆಸಿದರು.

ಲಕ್ಕನಿಗೆ 16-18ರ ಪ್ರಾಯ. ಜತೆ ಬೇಕು ಎಂದು ಅನ್ನಿಸಲಿಕ್ಕೆ ಶುರುವಾಗುವ ವಯಸ್ಸು. ಹಳ್ಳಿಯವ ಜತೆಗೆ ಬಂದು ಕೂತಾಗ ಅವನಿಗೆ ಖುಷಿಯೇ ಆಯಿತು. ಬಂದವನನ್ನು ಯಾರು ನೀನು, ಯಾವ ಊರ ದಾಸಯ್ಯ ಅಂತಲೂ ಕೇಳದೇ ತನ್ನ ಪ್ರತಾಪವನ್ನೇ ಹೇಳಿಕೊಳ್ಳಲು ಪ್ರಾರಂಭಮಾಡಿದ. "ನೋಡ್ಲಾ! ಮೊನ್ನೆ ಕವಣೆ ಕಟ್ಟಿ ಹೊಡೆದು ಹಾರ್ತಿದ್ದ ಗಿಣೇನ ಕೆಳಕ್ಕುರುಳಿಸಿದೆ, ಬೆಣಚುಕಲ್ಲು ಚೂರನ್ನ ಕವಣೇಲಿಟ್ಟು ಹಲಸಿನ ಹಣ್ಣನ್ನು ಬೀಳಿಸ್ಬಲ್ಲೆ! ಅದಕ್ಕೇ ನನ್ನ ಕವಣೆಲಕ್ಕ ಅಂತ ಎಲ್ಲರೂ ಕರೀತಾರೆ. ಕಡೇ ಗಾಡೀ ಹೊಡೆಯುಕ್ಕೆ ನನ್ನೇ ನೇಮಿಸ್ತಾರೆ" ಎಂದು ಹೇಳಿದ.

ಕಾರಣ ಇಷ್ಟೇ! ಬಡ ಹಳ್ಳಿಯವ ಕೂತುಕೊಂಡಾಗ ಕವಣೆ ಮೇಲೆ ಕೂತ. "ನಿಂದಾ ಕವಣೆ?" ಎಂದು ಹೇಳಿ ಅದನ್ನು ತೆಗೆದು ಲಕ್ಕನ ಕೈಲಿ ಇಟ್ಟ: "ಕೂಲಿನಾಲಿ ಮಾಡ್ಕೊಂಡು ಕಾಲ ಹಾಕೋನು ನಾನು. ಕವಣೆ ಮುಟ್ಟಿದ್ದು ಇವತ್ತೇ. ನಂಗ್ಯಾತಕ್ಕೆ ಹೇಳ್ತೀಪ್ಪಾ! ಹತ್ತಿರ ಯಾವ ಹಳ್ಳಿ ಸಿಕ್ತದೆ ಹೇಳು. ಅಲ್ಲಿ ಇಳಿದು ಯಾವುದಾದರೂ ಜಗಲಿ ಮೇಲೆ ಬಿದ್ದುಕೊಂಡು ನಿದ್ದೆ ಮಾಡ್ತೀನಿ. ನಡೆದು ದಣಿವಾಗಿದೆ. ಕಾಲೆಲ್ಲಾ ಸೆಳೀತಾ ಇದೆ" ಎಂದ ಬಡ ಹಳ್ಳಿಯವ.

"ಇನ್ನೊಂದು ಹರಿದಾರಿ ನಡೆದರೆ ಅರಸಿನಗುಂಡಿ ಸಿಕ್ತದೆ. ಅಲ್ಲಿನ ಮನೆಗಳೆಲ್ಲಾ ಪಾಳುಬಿದ್ದಿವೆ. ಮೊದಲಿಗೆ ದೊಡ್ಡ ಊರಾಗಿತ್ತು. ಸುಲ್ತಾನರ ಫೌಜಿನವರಿಗೆಲ್ಲಾ ಲಾಳ

ಸರಬರಾಜು ಮಾಡುತ್ತಿತ್ತು. ಮರಾಠಿಯವರು ಧಾಳಿ ನಡೆಸಿದಾಗ ಊರು ನೆಲಸ ಆಯ್ತು. ಆದರೂ ಬ್ಯಾಡರ ಮಾಚಿಮನೆ ತಕ್ಕಮಟ್ಟಿಗೆ ಚೆಂದಾಗೇ ಅದೆ. ಎಂಟಂಕಣದ ಮನೆ. ಆದರೆ ಆ ಮನೆಯಲ್ಲೀಗ ದೆವ್ವಗಳು ಸೇರಿಕೊಂಡುಬಿಟ್ಟಿವೆ. ಜಗುಲಿ ಚೆಂದಾಗೈತೆ ಅಂತ ಅಲ್ಲಿ ಏನಾರ ಬಿದ್ಗೊಂಡೆಯೋ, ಬೆಳಿಗ್ಗೆ ಹೊತ್ತಿಗೆ ರಕ್ತ ಕಾರಿಕೊಂಡು ಪ್ರಾಣ ಬಿಟ್ಟಿರ್ತಿ ಹುಷಾರು! ಹಳ್ಳಿ ಅಂಚಿನ್ಯಾಗೆ ಎರಡು ಮೂರು ಗುಡಿಸಿಲುಗಳಿವೆ. ಅಲ್ಲಿಲ್ಲಾ ಬಿದ್ದುಕೊಂಡಿರು. ಗುಡಿಸಿಲ್ನೋರು ಹೊಟ್ಟೆಗೂ ಏನಾರ ಹಾಕಾರು" ಎಂದ ಲಕ್ಕ.

"ದೆವ್ವಗಳು ಯಾಕಾರ ಬಂದುವೋ, ಬ್ಯಾಡರ ಮಾಚಿ ಮನೆಗೆ" ಎಂದು ಕೇಳಿದ ಹಳ್ಳಿಯವ.

"ಎಂಥ ದೆವ್ವಗಳೋ? ಕೊಳ್ಳಿ ದೆವ್ವಾನಾ, ಬ್ರಹ್ಮಪಿಶಾಚಿಗಳಾ, ಚೌಡಿ ಕಡೇದಾ, ಬಾಣಂತಿ ಭೂತಗಳಾ?" ಎಂದೂ ಕೇಳಿದ ಹಳ್ಳಿಯವ.

"ಎಲ್ಲಾ ತರಹ ದೆವ್ವಗಳೂ ತುಂಬಿವೆಯಂತೆ ಅಲ್ಲಿ. ಬ್ಯಾಡರ ಮಾಚಿ ಬಲು ಚೆಂದುಳ್ಳ ಹೆಣ್ಣು. ಚಿತ್ರ್ನಾಯ್ಕ ಕೂಡ ಅವಳ ಬಲೆಗೆ ಬಿದ್ದಿದ್ದ. ಆರಡಿ ಧಡಿಯ ಅವ. ಒಂಧ್ಸಲ ಚಿರತೇನ ಕತ್ತುಹಿಸುಕೇ ಕೊಂದಿದ್ದ, ಅದಕ್ಕೇ ಚಿತ್ರ್ನಾಯ್ಕ ಅಂತ ಹೆಸರಾಗಿತ್ತು, ದೊಡ್ಡ ಕುಳ. ಅವನು ಕೂಡ ಅವಳು ಕುಣಿಸಿದ ಹಾಗೆ ಕುಣೀತಿದ್ದ. ಹಣವಿದ್ದವರೆಲ್ಲಾ ಅವಳ ಹತ್ತಿರ ಹೋಗಿ ದಿವಾಳಿ ಎದ್ದರು. ಅಂತ್ಹೋರಲ್ಲಿ ಕೆಲವರು ಕೆರೆಗೆ ಬಿದ್ದು ಪ್ರಾಣ ಕಳಕೊಂಡರು. ಪ್ರಾಣ ಕಳಕೊಂಡೋರ ಹೆಂಡ್ತೀರೆಲ್ಲಾ ಕೊರಗಿ ಕಣ್ಣೀರು ಹಾಕ್ತಾ ಸತ್ತರು. ಎಲ್ಲಾರ ದೆವ್ವಗಳೂ ಅಲ್ಲಿ ಸೇರಿಕೊಂಡಿವೆಯಂತೆ. ಎಲ್ಲರೂ ಹೇಳ್ತಾರಪ್ಪಾ! ನಾನೇನೂ ಕಂಡಿಲ್ಲ. ಆ ಕಡೆ ಕೂಡ ಸಂಜೆ ಆದ ಮ್ಯಾಗೆ ಯಾರೂ ಹೋಗುಲ್ಲ" ಎಂದ ಲಕ್ಕ.

ಇದೇ ರೀತಿ ಮಾತುಗಳಾಡ್ತಾ ದಾರಿ ಸಾಗಿತು. ಗಾಡಿ ನಿಲ್ಲಿಸಿ, "ಎಡಚೋರಿಗೆ ಹೋದರೆ ಅರಸಿನಗುಂಡಿ ಸಿಕ್ತದೆ, ಇನ್ನೂ ವಸ್ಪಿ ಬೆಳಕೈತೆ ಇಳಿದುಹೋಗಿಯಾ?" ಎಂದ ಲಕ್ಕ.

"ಎಲ್ಲಾರ ಹೋಗಿ ಬಿದ್ಕೊಂಡ್ತೀನಿ. ಈಸುದೂರ ಗಾಡೀಲಿ ಕರ್ತಂದಿದ್ದಕ್ಕೆ ಅಡ್ಡಬಿದ್ದೆ" ಎಂದು ಹೇಳುತ್ತಾ ಹಳ್ಳಿಯವ ಇಳಿದು ಎಡಗಡೆಯ ಹಾದಿಯಲ್ಲಿ ನಡೆಯುತ್ತಾ ಹೊರಟ.

* * * *

ಛತ್ರದ ಬೀದಿಯ ತುದಿಯಲ್ಲಿದ್ದ ಹದಿನಾರು ಅಂಕಣದ ಉಪ್ಪರಿಗೆ ಮನೆಯಲ್ಲಿ ರಾತ್ರಿ ಊಟವಾದ ಮೇಲೆ, ಎಲಡಿಕೆ ಮಡಿಸಿಕೊಡುತ್ತಿದ್ದಾಗ, ಯಜಮಾನಿತಿಯು ಮುಖವನ್ನು ಶಿಂಡರಿಸಿಕೊಂಡೇ ಇದ್ದಳು. ವಿಳ್ಳೇದೆಲೆಗೆ ಸುಣ್ಣವನ್ನು ಸ್ವಲ್ಪ ಹೆಚ್ಚಾಗಿಯೇ ತೀಡುತ್ತಿದ್ದಳು. ಎಲೆ ಮಡಿಸಿ ಕೊಡುವಾಗ ಕಣ್ಣಂಚಿನ ದೃಷ್ಟಿಯನ್ನು ಸ್ವಲ್ಪ ಕ್ರೂರವಾಗಿಯೇ ಹರಿಸುತ್ತಿದ್ದಳು. ಪ್ರಾಯದಲ್ಲಿ ಏನೇನೆಲ್ಲಾ ಮಾಡಿ, ಯಾರ ಕೈಗೂ ಸಿಕ್ಕಿಹಾಕಿಕೊಳ್ಳದೆ,



ಜಯಿಸಿ ಬಂದಿದ್ದ, ಐವತ್ತರ ಯಜಮಾನನಿಗೆ, ಹೆಂಡತಿಯ ಈ ಮೌನ ನಡವಳಿಕೆಯು ಸುಸ್ತುಬಡಿಸಿತ್ತು.

"ಅಳಿಯನ ಮನೆಗೆ ಹೋಗಿ ಎರಡೇ ದಿನ ಇದ್ದು, ನಂತರ ಬೆಂಗಳೂರಿಗೆ ಹೋಗಿ ಎಂಟು ಹತ್ತು ದಿನಗಳಿರಬೇಕು. ಅಲ್ಲೇನಾದರೂ ಧಣಿಗಳಿಲ್ಲದೆ ಹಳ್ಳಿ ಕಡೆ ಹೋಗಿದ್ದರೆ, ಅವರನ್ನು ಹಿಂಬಾಲಿಸಿ ಹೋಗಬೇಕು. ನಿನ್ನ ಹ್ಯಾಗೆ ಕರೆದುಕೊಂಡು ಹೋಗಲು ಸಾಧ್ಯ! ಅಲ್ಲದೆ, ಮನೇನ ಯಾರು ನೋಡಿಕೋತಾರೆ, ನಾವಿಬ್ಬರೂ ಒಟ್ಟಿಗೇ ಹೊರಟುಹೋದರೆ? ಮಗಳ ಮನೆಗೆ ಹೋಗಬೇಕು ಅಂತ ನಿಂಗಿರೋ ಹಂಬಲ ನನಗೆ ಗೊತ್ತಿಲ್ಲವೇ? ಇನ್ನೊಂದು ಸರ್ತಿ ಹೋದರಾಯಿತು" ಎಂದು ಯಜಮಾನರು ಹೇಳಿದರು.

"ಮಗಳ ಮನೆ ಇರೋದು... ತಿಪಟೂರಿನಲ್ಲಿ.... ಮೂರು ದಿನದಿಂದ... ಕೋಡುಬಳೆ ಮುಚ್ಚೋರೆ, ಚಕ್ಕುಲಿಗಳನ್ನು.... ನಾನೇ ಮಾಡಿದ್ದೇನೆ... ಅಳಿಯನ ಮನೇಲಿ... ಎರಡು ದಿನ ಇಬ್ಬರೂ ಇರೋಣ.... ನೀವು ಮುಂದಕ್ಕೆ ಬೆಂಗಳೂರಿಗೆ... ಒಬ್ಬರೇ ಹೋಗಿ... ಹಿಂತಿರುಗುವಾಗ... ಅಳಿಯನ ಮನೇಲಿ... ಒಂದಿನ ಇದ್ದು... ನನ್ನೂ ಕರ್ಕೊಂಡು ಬಂದರಾಯಿತು.

ಮನೇಲಿ.... ಸಿದ್ದಲಿಂಗು ಇಲ್ಲವೇ?.... ತಬ್ಬಲಿಯಾಗಿ ಬಂದವನ ಹತ್ತಿರ ಬಾಯಿ ತುಂಬಾ ಮಾತಾಡಿದಿರಿ.... ನೀವೇ ದೇವರು ಅಂತ ತಿಳ್ಕೊಂಡಿದಾನೆ.... ಮೂರು ತಿಂಗಳಿಂದ ಎಷ್ಟು ನಂಬಿಕಸ್ಥನಾಗಿ, ವಿಶ್ವಾಸದಿಂದ ನಡೆದುಕೊಂಡಿದ್ದಾನೆ. ಅವನ ಮೇಲೆ ಮನೆ ಜವಾಬ್ದಾರೀನ ಹಾಕಿ ಹೋಗೋದರಲ್ಲಿ ತಪ್ಪೇನೋ... ಕಾಣೆ" ಎಂದು ಬಿಡಿಸಿ ಬಿಡಿಸಿ ಯಜಮಾನತಿಯು ಮೆಲುದನಿಯಲ್ಲಿ ಹೇಳಿದಳು.

"ಹೇಳಿದ ಹಾಗೆ ಹೆಂಗಸರು ಹೇಳಿದರೆ ಚೆನ್ನ. ಎಲ್ಲಾ ವ್ಯವಹಾರದ ವಿಚಾರಾನೂ ಹೆಂಗಸರಿಗೆ ಹೇಳುಕ್ಕೂ ಆಗುಲ್ಲ. ಹೇಳಲೂಬಾರದು" ಅಂದರು ಯಜಮಾನರು.

ಯಜಮಾನಿತಿಯು ಮೌನದಿಂದಲೇ ಇದ್ದಳು.

* * * *

ಹಿರಿಯೂರ ತಳವಾರರ ಮನೆಯ ಬೈಠಕ್‌ಖಾನೆಯಲ್ಲಿ ಸಂಜೆ ಮುಂದೆ ಬಾಜಿ ಇಟ್ಟು ಚದುರಂಗದ ಆಟ ಆಡುಕ್ಕೆ ನಾಲ್ಕೈದು ಜನರು ಬಂದು ಸೇರುತ್ತಿದ್ದರು. ವ್ಯಾಪಾರಕ್ಕೆ ಸಾಪಾರಕ್ಕೆ ಅಂತ. ಛತ್ರದ ಬೀದಿ ಸಾಹುಕಾರರು ಬರುತ್ತಿದ್ದರು. ಊರಿಗೆ ಕೆಲವು ದಿನಗಳ ಮಟ್ಟಿಗೆ ಬಂದಿದ್ದವರೂ ತಳವಾರರ ಮನೆಗೆ ಬರುತ್ತಿದ್ದರು. ಕೊತ್ವಾಲರು, ಪಟೇಲರು ಕೂಡ ಒಂದೊಂದು ದಿನ ಬರುತ್ತಿದ್ದರು.

ಆಷಾಡಮಾಸ. ಕೃಷ್ಣಪಕ್ಷದ ಅಷ್ಟಮೀ ದಿನ ಸುಮಾರು ಮಳೆ ಬೀಳುತ್ತಾ ಇತ್ತು. ಆದರೂ ಆದವಾನಿಯಿಂದ ಬಂದಿದ್ದ ದಳ್ಳಾಳಿಯು, ಹಿರಿಯೂರು ಸಾಹುಕಾರರು ಮತ್ತು ದೇವಸ್ಥಾನದ ಧರ್ಮಕರ್ತರು, ಮೂವರೂ ತಳವಾರರ ಮನೆಗೆ ಆಟಕ್ಕೆ ಬಂದು

ಸೇರಿದ್ದರು. ಬಾಜಿ ಕಟ್ಟಿ ಆಡೋರಿಗೆ, ಮಳೆಯೇನು ತಡೆ ಹಾಕುತ್ತೆ? ಗಾಳಿಯೇನು ಅಡ್ಡಬರುತ್ತೆ?

ಆಟ ಮುಗಿದಾಗ ರಾತ್ರಿ ಒಂಭತ್ತರ ಸಮಯ. ಮಳೆ ಸ್ವಲ್ಪ ನಿಂತ ಹಾಗಿದೆ. ಮನೆಗಳಿಗೆ ಹೋಗೋಣ ಅಂತ ಎಲ್ಲರೂ ಎದ್ದರು.

ತಳವಾರರಿಗೆ ಸಾಕಷ್ಟು ಹಣ ಬಂದಿತ್ತು. ಆದವಾನಿ ದಳ್ಳಾಳಿಯ ಕೈ ಕಚ್ಚಿತ್ತು.

"ಇನ್ನೂ ಎರಡು ಮೂರು ವಾರಗಳು ಇಲ್ಲೇ ಇರಬೇಕು. ಸಂತೆಗಳಿಂದ ಬ್ಯಂಜಾರಿಗಳು ಬರೋತನಕ ಉಳಿದಿರಬೇಕು. ಅಂದ ಮೇಲೆ ಇಲ್ಲಿನ ತನಕ ಕಳಕೊಂಡಿದ್ದನ್ನೆಲ್ಲಾ ತಿರುಗಿ ನಿಮ್ಮಿಂದ ಗಿಟ್ಟಿಸಲೇಬೇಕು" ಎಂದ ಆದವಾನಿ ದಳ್ಳಾಳಿ.

"ಏನಿದ್ದರೂ 8-10 ದಿನಗಳಲ್ಲೇ ಹಾಗೆ ಮಾಡಬೇಕು. ಆ ಮೇಲೆ ನಾನು ತಿಪಟೂರು ಬೆಂಗಳೂರು ಕಡೆಗೆ ಪ್ರಯಾಣ ಮಾಡಬೇಕಾಗಿದೆ" ಎಂದರು, ನಗುತ್ತ ಹಿರಿಯೂರ ಸಾಹುಕಾರರು.

"ಆಷಾಢಮಾಸದಲ್ಲಿ ಪ್ರಯಾಣ ಏನ್ಬಂತು, ಕುಯ್ಲಿಲ್ಲ. ಬೆಳೆಯಿಲ್ಲ" ಎಂದರು ತಳವಾರರು.

"ಲೇವಾದೇವಿ ಮಾಡೋರಿಗೆ ವರ್ಷವೆಲ್ಲಾ ಕುಯ್ಲೇ! ದಿನಾಗಲೂ ಬೆಳೆಯೇ! ಅಂದಹಾಗೇ... ಪ್ರಯಾಣ ಮುಗಿಸಿಕೊಂಡು ಬರೋದಕ್ಕೆ 10-15 ದಿನಗಳಾಗಬಹುದು. ಮನೇಲಿ ಗಂಡಸರು ಯಾರೂ ಇರುಲ್ಲ. ರಸ್ತೆ ತುದೀಲಿರೋ ಮನೆ. ಅದಕ್ಕೋಸ್ಕರ ಕಾಗದ ಪತ್ರಗಳ ಸಂದೂಕವನ್ನು ನಿಮ್ಮನೆಗೆ, ನಾನು ಹೋಗುವುದಕ್ಕೆ ಮುಂಚೆ ಕಳಿಸಿಕೊಡ್ತೀನಿ. ಹುಷಾರಾಗಿಟ್ಟುಕೊಂಡಿರಿ" ಎಂದರು ಸಾಹುಕಾರರು.

"ಅದಕ್ಕೇನಂತೆ! ಆದರೂ ಊರ ತಳವಾರ ನಾನು. ನಿಮ್ಮ ಮನೆ ಮೇಲೆ ನಿಗಾ ಇರಿಸ್ತೀನಿ. ಇಬ್ಬರು ಕುಳವಾಡಿಗಳನ್ನು ಆ ಕೆಲಸಕ್ಕೇ ನೇಮಿಸ್ತೀನಿ" ಎಂದರು ತಳವಾರರು.

ತಂತಮ್ಮ ಮನೆಗಳಿಗೆ ಎಲ್ಲರೂ ಹೊರಟುಹೋದರು.

* * * *

ಶ್ರಾವಣ ಮಾಸ. ಶುಕ್ಲಪಕ್ಷದ, ಚತುರ್ಥಿ ದಿನ. ಸಾಹುಕಾರರ ಮನೆಯಲ್ಲಿ ದೂರ್ವಾ ಗಣಪತಿಯ ಪೂಜೆಗಾಗಿ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡಿದ್ದಾರೆ. ಸ್ವಯಂ ಸಾಹುಕಾರರೇ ಬೆಳಗ್ಗೆ ಎದ್ದುಹೋಗಿ ಹೂವು ಕಾಯಿ ಎಲ್ಲವನ್ನೂ ತರಲು ಹೊರಬಿದ್ದಿದ್ದಾರೆ. ಎಳೆಗರಿಕೆ, ವಿಷ್ಣುಕ್ರಾಂತಿ, ನೆಲಸಂಪಿಗೆ, ಮೊದಲಾದವುಗಳನ್ನೆಲ್ಲಾ ಆರಿಸಿ ತರುವ ಹೊತ್ತಿಗೆ ಸುಮಾರು ಎಂಟು, ಎಂಟೂವರೆ ಗಂಟೆಯಾಗಿದೆ. ಮನೆಗೆ ಬರುವಾಗ, ಸಾಹುಕಾರರಿಗೆ ಏನು ಕಾಣಿಸಿದ್ದು? ಮನೆ ಮಂದಿ ಮಕ್ಕಳೆಲ್ಲಾ ಮನೆ ಜಗುಲಿ ಮೇಲೆ ಜಂಗುಳಿ ಸೇರಿದ್ದಾರೆ. ಪಕ್ಕದ ಮನೆಯ ಮಕ್ಕಳೆಲ್ಲಾ ಬಂದು ಸುತ್ತುಗಟ್ಟಿವೆ. ರಸ್ತೆ ಮಧ್ಯದಲ್ಲಿ ಹಾವಾಡಿಗನೊಬ್ಬ ಆಟ ಆಡಲು ಸಿದ್ಧತೆ ಮಾಡಿಕೊಂಡಿದ್ದಾನೆ.

ಸಾಹುಕಾರರಿಗೆ ಕೋಪ ಬಂತು. ಹಬ್ಬದ ದಿನ ಹಾವಾಡಿಗರ ಆಟ ನೋಡ್ತಾ ಕೂತರೆ ಪೂಜೆಗೆ ವೇಳೆ ಆಗುತ್ತೆ. ಇವನ್ಯಾರು ಬಂದ ಎಂದು ಕೋಪ ಬಂದಿತ್ತು.



"ಸಂತೆ ಮಾಳಕ್ಕೆ ಹೋಗಿ ಆಟ ಆಡೋ, ದೇವಸ್ಥಾನದ ಚೌಕದಲ್ಲಿ ನಿನ್ನ ಪ್ರದರ್ಶನ ನಡೆಸೋ, ಮನೆ ಮುಂದೆ ಕೂತು ಗಲಭೆ ಮಾಡಬೇಡ" ಎಂದು ಬೈದರು.

"ಬಡವನ ಮೇಲೆ ಕೋಪ ಮಾಡಬಾರದು; ಹಾವುಗಳನ್ನು ಮಾತ್ರ ಆಡಿಸೋದಲ್ಲ ಧಣಿಗಳೇ! ಮಾಯಾ ಮಂತ್ರ ಮಾಡ್ತೀನಿ, ಪೂಂಗಿಯಿಂದ ಮುತ್ತು ಉದರಸ್ತೀನಿ, ಮುಂಗಸಿ ಹಾವು ಜಗಳ ಹಾಕಿಸ್ತೀನಿ, ಪ್ರೇತದ ಕೈಲಿ ಮಾತಾಡಿಸ್ತೀನಿ, ನಾಗರ ಚತುರ್ಥಿ ದೇವರಾ ನಾಗಪ್ಪನ್ನ ಆಡಿಸ್ತೀನಿ, ಆಟ ನೋಡಿ ಏನಾರ ಧರ್ಮಕೊಡಿ, ನಾಗಪ್ಪನ್ನ ಹೊಟ್ಟೆಗೆ ಹಾಲೆರಿತೀನಿ" ಎಂದು ಹಾವಾಡಿಗ ದೈನ್ಯದಿಂದ ನುಡಿದ.

"ಹಾವಾಡಿಸಲೀಪ್ಪ; ಏನೇನೋ ಛೂ ಮಂತ್ರಗಾಳಿ ಹಾಕ್ತಾನಂತಪ್ಪ. ನೋಡೋಣಪ್ಪ" ಎಂದು ಮನೆ ಮಕ್ಕಳೆಲ್ಲಾ ಗೋಗರೆದು ಕೇಳಿಕೊಂಡುವು.

"ನಾಳೆ ನಾಗರಪಂಚಮಿ ಅಂದ್ರೆ! ಬಾಗಿಲಿಗೆ ಬಂದ ಸುಬ್ಬುರಾಯನಿಗೆ ಒಂದು ಬಟ್ಟಲು ಹಾಲು ತನಿ ಎರಿದೇ ಕಳಿಸೋಣ ಅಂದ್ರೆ", ಎಂದು ಮನೆಯ ಯಜಮಾನಿತಿಯೂ ದನಿಗೂಡಿಸಿದಳು.

ಇಷ್ಟರಲ್ಲೇ ಯಜಮಾನಿತಿಯ ಮನಸ್ಸು ಪ್ರಸನ್ನವಾಗೋದಾದರೆ ಆಗಲಿ ಅಂತ ಯಜಮಾನನೂ ಒಪ್ಪಿಕೊಂಡ. ಕಣ್ಕಟ್ಟು ಮಾಯ ಮಾಡೋರನ್ನ ನೋಡಬೇಕೆಂಬ ಆಸೆ ಅವನಿಗೂ ತುಂಬಾ ಇತ್ತು. ಮಕ್ಕಳ ನೆಪದಲ್ಲಿ ನೋಡಬಹುದು ಅಂತ ಅವನಿಗೂ ಅನ್ನಿಸುತ್ತಾ ಇತ್ತು. ಜಗಲಿ ಮೇಲೆ ಎಲ್ಲಾ ಕಾಣಿಸುವ ಕಡೆ ತಾನೂ ಕೂತುಕೊಂಡ.

* * * *

ಕರಟದ ಬುರುಡೆ ಕಟ್ಟಿದ ಒಂದು ತಂತಿ ಪಿಟೀಲನ್ನು ಬಲುಹಿತವಾಗಿ ಬಾರಿಸುತ್ತಾ ಹಾವಾಡಿಗನು ತನ್ನ ಆಟವನ್ನು ಕಟ್ಟಿದ. ಸುತ್ತಲೂ ಅಗಲದ ಬುಟ್ಟಿಗಳನ್ನು ಇಟ್ಟು ಪಿಟೀಲು ಬಾರಿಸುತ್ತಾ ಎಲ್ಲಕ್ಕೂ ಪೂಜೆ ಹಾಕಿ ನಮಸ್ಕಾರ ಮಾಡಿದ. ನಂತರ ಪಿಟೀಲನ್ನು ಕೆಳಗಿಟ್ಟು ಪೂಂಗಿ ತೆಗೆದುಕೊಂಡು ಬಾರಿಸಿಲಾರಂಭಿಸಿದ. ಒಂದು ಬುಟ್ಟಿಯ ಮುಚ್ಚಳವನ್ನು ತೆಗೆದ, ಎರಡು ಮಾರುದ್ದದ ನಾಗರಹಾವೊಂದು ಹೆಡೆಯೆತ್ತಿ ಹರಿದಾಡಿತು. ಅದರ ಹೆಡೆಯೆದುರಿಗೇ ಪೂಂಜಿ ಬಾರಿಸುತ್ತಾ ಒಂದು ಸುತ್ತು ತಿರುಗಿದ ಮೇಲೆ, ನಾಗರಹಾವನ್ನು ಹಿಡಿದು ಬುಟ್ಟಿಯೊಳಕ್ಕೆ ಹಾಕಿದ. ಪೂಂಗಿಯನ್ನೂ ಅದರಲ್ಲಿಟ್ಟು ಮುಚ್ಚಿದ. ಏನೇನೋ ವಟವಟಗುಟ್ಟುತ್ತ, ಮೂಳೆಯೊಂದರಿಂದ ಆ ಬುಟ್ಟಿಯನ್ನು ಎರಡು ಬಾರಿ ತಟ್ಟಿದ. ಮೆಲ್ಲಗೆ ಬುಟ್ಟಿಯೊಳಕ್ಕೆ ಬಲಗೈ ಹಾಕಿದ. ಸರಕ್ಕನೆ ಹೊರಕ್ಕೆ ಕೈ ತೆಗೆದ. ಬೆರಳ ತುದೀನ ಬಾಯಿನಲ್ಲಿಟ್ಟುಕೊಂಡು ಚೀಪುತ್ತಾ. "ನಾಗಪ್ಪನಿಗೆ ಕೋಪ ಬಂದೈತೆ, ಅದಕ್ಕೆ ಕಚ್ಚಿಬಿಟ್ಟಿದ್ದಾನೆ, ಪೂಂಜೀಲಿ ಮುತ್ತಿನ ಮಳೆ ಬರಿಸುಕ್ಕೆ ಆಗುಲ್ಲ," ಎಂದು ನಿರಾಸೆಯ ದನಿಯಲ್ಲಿ ಹೇಳಿದ. ಮಕ್ಕಳ ಮುಖದ ಮೇಲೂ ನಿರಾಸೆ ಕಾಣಿಸಿಕೊಂಡಿತು.

"ನಂಗೊತ್ತಿತ್ತು; ಏನಾದರೂ ಉಪಾಯಮಾಡಿ ತಪ್ಪಿಸ್ಕೋತಾನೆ ಅಂತ. ಪೂಂಜಿ ಬಾರಿಸಿ ಮುತ್ತು ಉದುರಿಸೋನು ಭಿಕ್ಷಕ್ಕೇಕೆ ಬರ್ತಿದ್ದಾ?" ಎಂದು ಮನೆಯ ಯಜಮಾನರು ಮೂದಲಿಸಿದರು.

"ತಿರುಗಿ ನಾಗಪ್ಪನ್ನ ಕೇಳಿಕೋತೀನಿ; ತಡೀರಿ, ಧಣಿಗಳೇ! ನಾಗಪ್ಪ ಪ್ರಸ ಒಪ್ಪಿದರೆ, ನೀವು ದೊಡ್ಡ ಬಹುಮಾನ ಕೊಡಬೇಕು," ಎಂದು ಹಾವಾಡಿಗ ಹೇ ಬುಟ್ಟಿಯ ಮೇಲೆ ಬಟ್ಟೆ ಹೊದಿಸಿ ಬಲಗೈಯನ್ನು ಒಳಕ್ಕೆ ತೂರಿಸಿದ. ಕಣ್ಣು ಮುಚ್ಚಿಕೊಂಡು ಏನೋ ಮಂತ್ರ ಹೇಳುವವನಂತೆ ವಟಗುಟ್ಟಿದ. ಬಲಗೈಯನ್ನು ಹೊರಕ್ಕೆ ತೆಗೆದಾಗ ಹೊಸಾ ಹೊಸ ಪುಂಗಿ ಅವನ ಕೈಯಲ್ಲಿತ್ತು. ನೆಲದ ಮೇಲೆ ಅದನ್ನಿಟ್ಟು ಅಡ್ಡಬಿದ್ದ. ನಂತರ ಅದನ್ನು ತೆಗೆದುಕೊಂಡು, "ನಾಗಪ್ಪ ಒಪ್ಪಿದಾನೆ, ಪುಂಗೀಲಿ ಮುತ್ತು ಉದುರಿಸ್ತೀನಿ. ಬಿದ್ದ ಮುತ್ತನ್ನು ಯಾರೂ ಮುಟ್ಟಬೇಡಿ. ಹುಷಾರ್! ತಿರುಗಿ ನಾಗಪ್ಪನಿಗೆ ಒಪ್ಪಿಸ್ಬೇಕು ಯಾರಾರೂ ಮುತ್ತನ್ನು ಮುಟ್ಟಿದರೆ ಕೇಡಾಗ್ತೈತೆ. ಹುಷಾರ್! ಹುಷಾರ್!" ಎಂದು ಎಚ್ಚರಿಕೆ ಕೊಟ್ಟು, ಕುಣಿಯುವ ಹೆಜ್ಜೆ ಹಾಕುತ್ತಾ ಪುಂಗಿಯನ್ನು ಬಾಯಿಗಿಟ್ಟುಕೊಂಡು ಬಾರಿಸಲಾರಂಭಿಸಿದ."

ಏನಾಶ್ಚರ್ಯ! ಒಂದೊಂದುಬಾರಿ ಬಾರಿಸಿದಾಗಲೂ, ಪುಂಗಿಯ ಒಂದೊಂದು ತೂತಿನಿಂದಲೂ ಒಂದೊಂದು ಮುತ್ತು ಉದುರುತ್ತಿತ್ತು. ಒಂದು ಸುತ್ತು ಕುಣಿಯೋ ಹೊತ್ತಿಗೆ ಸುತ್ತಲೂ ನೂರು ನೂರಿಪ್ಪತ್ತು ಮುತ್ತುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು.

ಜಗುಲಿಯಿಂದ ಸಾಹುಕಾರರು ಸರ್ರಂತ ಇಳಿದು ಬಂದು, ಒಂದು ಮುತ್ತನ್ನು ತೆಗೆದು ಪರೀಕ್ಷೆಮಾಡಲು ಅಮುಕಿ ನೋಡಿದರು. "ದಿಟವಾದ ಮುತ್ತು ಇದ್ದ ಹಾಗೇ ಇದೆಯಲ್ಲಾ" ಎಂದರು.

"ಅದನ್ಯಾಕಾರೂ ಮುಟ್ಟಿದಿರಿ" ಎಂದು ಯಜಮಾನಿತಿ ಕಾತರದಿಂದ ಕೇಳಿದಳು.

"ಧಣಿಗಳೇ! ಮಂತ್ರದ ಮುತ್ತುಗಳು ಅವು. ಹುಷಾರ್ ಹೇಳಿತ್ತಿಲ್ವಾ! ಯಾಕೆ ಮುಟ್ಟಿದಿರಿ! ಅಲ್ಲೇ ಇಟ್ಟುಬಿಡಿ, ಧಣೀರಾ! ಏನು ಮಾಡಿಬಿಟ್ರಿ" ಎಂದು ಹಾವಾಡಿಗನೂ ಕೂಗಿದ.

"ಮುಟ್ಟಿದರೆ ಏನಾಗುತ್ತಂತೆ!" ಎಂದು ಹೇಳುತ್ತಾ ಸಾಹುಕಾರರು ಅಲ್ಲೇ ಅದನ್ನು ಇರಿಸಿ ಜಗಲಿ ಮೇಲಕ್ಕೆ ಹತ್ತಿಹೋದರು.

ಸಾಹುಕಾರರ ಮುಖವನ್ನೇ ಒಮ್ಮೆ ಹಾವಾಡಿಗನು ದಿಟ್ಟಿಸಿ ನೋಡಿದ. ಎಲ್ಲೋ ನೋಡಿದ ಮುಖ ಇದ್ದ ಹಾಗಿದೆಯಲ್ಲಾ ಅಂತ ಸಂಶಯ ತೋರಿತು.

* * * *

ಎರಡನೇ ಆಟವನ್ನು ತೋರಿಸಲು ಸಿದ್ಧಮಾಡಿಕೊಂಡ.

ದೊಡ್ಡ ಬುಡಬುಡಕೆಯೊಂದನ್ನು ಬಾರಿಸಿದ.

"ಈಗ ನೋಡಿ, ಘಟ ಸರ್ಪಾನ, ಮುಂಗುಸಿ ಹೇಗೆ ಹಿಡಿದು ಕಡಿಯುತ್ತೆ. ಹೋದ ಸಾರಿ ಸುಲ್ತಾನನೆದುರಿಗೆ ಇದನ್ನು ತೋರಿಸ್ದಾಗ, 'ಬಲು ಪಸಂದಾಗೈತೆ, ನಮ್ಮ ರಾಜ್ಯದಲ್ಲಿ ಎಲ್ಲಿ ಬೇಕಾದರೂ, ಯಾವ ಸರ್ಪಾನಾದರೂ ಹಿಡಿದುಕೋ. ತೆರಿಗೆ ಏನೂ ನಿನಗೆ ಹಾಕಬಾರದು, ಅಂತ ಫರ್ಮಾನ್ ಹೊಡಿಸ್ತೀನಿ' ಎಂದರು. ನೋಡಿ ಈಗ, ಅದೇ ಜಗಳಾನ!" ಎಂದು ರಾಗ ರಾಗವಾಗಿ ಹೇಳಿದ.



ಬುಟ್ಟಿಯೊಂದರಿಂದ ಮುಂಗುಸಿಯೊಂದನ್ನು ತೆಗೆದ. ಸತ್ತು ಸುಕ್ಕಾದ ಮುಂಗಸಿ ಹಾಗೇ ಇತ್ತು ಆ ವಸ್ತು. ಅದನ್ನು ಎಡಗೈಗೆ ಕಟ್ಟಿಕೊಂಡ. ಬಲಗೈಯ ಮೇಲೊಂದು ಹಾವನ್ನು ಸುತ್ತಿಕೊಂಡ.

ರಾಗ ರಾಗವಾಗಿ ಹಾಡನ್ನು ಹೇಳುತ್ತಾ ಬಲಗೈ ಎಡಗೈಯಲ್ಲಿ ಜಗಳವಾಡುವುದನ್ನು ನಟಿಸಿದ. ಬಲಗೈ ಮೇಲಾದಾಗಲೆಲ್ಲ ಬುಸುಗುಡುತ್ತಿದ್ದ. ಎಡಗೈ ಮೇಲಾದಾಗ ಕಿಚಿಕಿಚಿ ಶಬ್ದ ಮಾಡುತ್ತಿದ್ದ. ಕಡೆಗೆ ಬಲಗೈಯ್ಯಿಂದ ಹಾವನ್ನು ಬಿಡಿಸಿ ನೆಲದ ಮೇಲೆ ಬಿಟ್ಟ. ಅದು ಸುರುಳಿ ಸುತ್ತಿಕೊಂಡು ನಿಶ್ಚೇತನವಾಗಿ ಬಿದ್ದುಕೊಂಡಿತು. "ಸತ್ತು ಹೋಯ್ತು ಸರ್ಪ! ಮುಂಗಿಸಿ ಗೆದ್ದುಬಿಡ್ತು" ಎಂದು ಕೂಗುತ್ತಾ ಎಡಗೈಯನ್ನು ಬಾವುಟ ಹಾರಿಸೋ ಹಾಗೆ ಕುಣಿದಾಡಿಸಿದ.

ಮಕ್ಕಳುಮರಿ, ಹೆಂಗಸರೂ, ಸುತ್ತಲೂ ಇದ್ದವರೆಲ್ಲರೂ ನಕ್ಕು ನಕ್ಕು ಸುಸ್ತಾದರು.

"ನಂಗೊತ್ತಿರಲಿಲ್ವೇ! ದಿಟವಾಗಿ ಮುಂಗಿಸಿ ಹಾವಿನ ಜಗಳಾನ ಬೇಕು ಬೇಕಾದಾಗ ಇವನು ಹಾಕಿಸುಕ್ಕಾಗುತ್ಯೇ?" ಎಂದರು ಯಜಮಾನರು.

ಯಜಮಾನರನ್ನು ಮತ್ತೆ ದಿಟ್ಟಿಸಿ ನೋಡಿದ, ಹಾವಾಡಿಗ. ಮೊದಲು ಕಾಡಿದ ಸಂಶಯ ಇನ್ನೂ ಬೆಳೆಯಿತು, ಅವನ ಮನಸ್ಸಿನಲ್ಲಿ.

ಮೂರನೆ ಆಟವನ್ನು ತೋರಿಸಲು ಪ್ರಾರಂಭಿಸಿದ.

ಮಣ್ಣಿನಲ್ಲಿ ಒಂದು ಬೊಂಬೆ ಮಾಡಿದ. ಅದಕ್ಕೆ ಅರಿಶಿನ ಕುಂಕುಮವನ್ನಿಟ್ಟ. ಅದರ ಕತ್ತಿನ ಮೇಲೊಂದು ಹಂಚಿಕಡ್ಡಿಯನ್ನಿಟ್ಟ. ಬೊಂಬೆಯ ಮೇಲೊಂದು ಪಕ್ಷಿಯಿದ್ದ ಪಂಜರವನ್ನಿರಿಸಿದ, ಮಾಸಿದ ಕೆಂಪು ಬಣ್ಣದ ದಟ್ಟಿಯೊಂದನ್ನು ದೊಡ್ಡದಾಗಿ ಹೊದ್ದಿಸಿದ. ವಕ್ರವಕ್ರವಾಗಿ ನೆಗೆದಾಡುತ್ತಾ, ಬಾಯಲ್ಲಿ ತೆಳುವಾದ ಚೂರಿಯೊಂದನ್ನು ಕಚ್ಚಿಕೊಂಡು, ಒಂದು ಸುತ್ತು ಅದರ ಸುತ್ತಲೂ ಪ್ರದಕ್ಷಿಣೆ ಹಾಕಿದ. ನಂತರ ಚೂರಿಯನ್ನು ನೆಲದ ಮೇಲಿರಿಸಿದ.

ಆ ತನಕ ಸುತ್ತಲೂ ನಿಶ್ಶಬ್ದವಾಗಿತ್ತು. ಎಲ್ಲರೂ ಎವೆಯಿಕ್ಕದೆ ನೋಡುತ್ತಾ ಇದ್ದರು. ಹಾವಾಡಿಗನ ಕುಣಿತದ ಕಾಲು ಸಪ್ಪಳವೊಂದೇ ಕೇಳಿಸುತ್ತಿತ್ತು.

ವಿಭೂತಿ ಚಿಟಿಕೆಯನ್ನು ಚೂರಿಯ ಮೇಲೆಸೆದು ನಮಸ್ಕಾರ ಮಾಡಿದ. ಇನ್ನೊಂದು ಚಿಟಿಕೆ ವಿಭೂತಿಯನ್ನು ಹೊದಿಸಿದ್ದ ದಟ್ಟಿಯ ಮೇಲೆ ಚುಮುಕಿಸಿದ.

ನಿಂಬೆಹಣ್ಣೊಂದನ್ನು ದಟ್ಟಿಯ ಮೇಲಿಟ್ಟು, ಚೂರಿಯಿಂದ ಕತ್ತರಿಸಿದ. ರಕ್ತದ ಹೊಳೆಯೇ ಹರಿದು ಬಂದು, ದಟ್ಟಿಯನ್ನು ತೋಯಿಸಿತು. ಹಾವಾಡಿಗನ ಮುಖ ಪ್ರಸನ್ನವಾಯ್ತು.

ನಂತರ ಚೂರಿಯನ್ನು ತೆಗೆದುಕೊಂಡು ದಟ್ಟಿಯೊಳಕ್ಕೆ ಇರಿದ.

ಖೂನಿಯಾಗುತ್ತಿರುವವರು ಕೆಟ್ಟಕೆಟ್ಟದಾಗಿ ಮರಣ ಸಂಕಟದಲ್ಲಿ ಅತಿ ಭೀತಿಯಿಂದ ಕೂಗಿಕೊಳ್ಳುವ ಅತಿ ಘೋರವಾದ ಭಯಾನಕ ರೋದನದ ಧ್ವನಿ ಕೇಳಿಸಿತು- ಪ್ರೇತ ಕೂಗಿದ ಶಬ್ದ -

ಮಕ್ಕಳೆಲ್ಲರೂ ದೊಡ್ಡವರನ್ನು ತಬ್ಬಿಕೊಂಡರು. ಹೆಂಗಸರೆಲ್ಲಾ ಬೆವರಿದ್ದರು. ಎಲ್ಲರೂ ಒಮ್ಮೆಲೇ ಮಾರ್ದನಿ ಕೊಟ್ಟಂತೆ ಚೀರಿಕೊಂಡರು.

ಸಾಹುಕಾರರೊಬ್ಬರೇ ನಗುತ್ತಿದ್ದರು. "ಇದಕ್ಯಾಕೆ ಹೀಗೆ ಹೆದರಿಕೋತೀರಿ! ಪಂಜರದಲ್ಲಿರೋ ಹಕ್ಕಿ ಕೂಗೇ ಹೀಗೆ. ಕರಾವಳಿ ಬೆಟ್ಟದ ಬಳಿ ಇರೋ ಆ ಹಕ್ಕೀನ ಹಿಡಿದು ತಂದಿದ್ದಾನೆ" ಎಂದು ವಿವರಣೆ ಕೊಟ್ಟರು.

ಹಾವಾಡಿಗನು ಸಾಹುಕಾರರನ್ನು ಮತ್ತೊಮ್ಮೆ ದೃಷ್ಟಿಸಿ ನೋಡಿದ. ಅವನ ಮನಸ್ಸಿನಲ್ಲಿ ಮೂಡಿಬಂದಿದ್ದ ಸಂಶಯವು ರೂಪುಗೊಳ್ಳುತ್ತಿತ್ತು. ಮಸುಕು ಮಸುಕಾಗಿದ್ದ ನೆನಪು ತಿಳಿತಿಳಿಯಾಗುತ್ತಾ ಬಂದಿತ್ತು.

"ಇಂದ್ರಜಾಲ, ಮಹೇಂದ್ರಜಾಲ ಮಾಡೋರನ್ನ ಅಷ್ಟು ಹೀನಾಯವಾಗಿ ಕಾಣಬೇಡಿ, ಧಣೀರಾ. ಕೂಗಿಕೊಳ್ಳುಕ್ಕೆ ಹಕ್ಕಿ ಎಲ್ಲಿದೆ ನೋಡ್ರೆಲಾ!" ಎಂದು ಹೇಳುತ್ತಾ ದಟ್ಟಿಯನ್ನು ತೆಗೆದುಹಾಕಿದ. ಕಾಣಿಸಿದ್ದೇನು ಆಗ? ಪಂಜರದೊಳಗೆ ಮಣ್ಣಿನ ಬೊಂಬೆ. ಬೊಂಬೆಯ ಕತ್ತಿನಲ್ಲಿ ಪೆಟ್ಟಿನ ಗುರ್ತು ಬಿದ್ದಿದೆ. ಹಕ್ಕಿ ಮಾಯವಾಗಿದೆ!

ಆಗ ಸಾಹುಕಾರರ ಮುಖವೂ ಬೆವರ್ಹನಿಯಿಂದ ತುಂಬಿಕೊಂಡಿತ್ತು. ಹೆಬ್ಬಾವೊಂದನ್ನು ಕತ್ತಿನ ಸುತ್ತ ಮಾಲೆ ಹಾಕಿಕೊಂಡು ಹಾವಾಡಿಗನು ಭಿಕ್ಷೆ ಬೇಡಲು ಆರಂಭಿಸಿದ. ಆಗಲೇ ಸುತ್ತಲಿದ್ದವರೆಲ್ಲರೂ ಸಲೀಸಾಗಿ ಉಸಿರಾಡುವ ಹಾಗಾಗಿತ್ತು. ಯಜಮಾನಿತಿಯೂ ಮನೆಯೊಳಕ್ಕೆ ಹೋಗಿ, ಮೊರದಲ್ಲಿ ಅಕ್ಕಿ ಬೇಳೆ ಎಲ್ಲವನ್ನೂ ತಂದು ಹಾವಾಡಿಗನಿಗೆ ಕೊಟ್ಟಳು. ಒಂದು ಬಟ್ಟಲು ಹಾಲನ್ನೂ ತಂದು "ನಾಗಪ್ಪನಿಗೆ ಕೊಡಪ್ಪಾ" ಎಂದೂ ಹೇಳಿದಳು. ಸಾಹುಕಾರರೂ ಕೂಡ ಒಂದು ದುಗ್ಗಾಣಿಯನ್ನು ಎಸೆದರು. ಅದನ್ನು ನೆಲದಿಂದ ತೆಗೆದುಕೊಳ್ಳುತ್ತಾ ಹಾವಾಡಿಗನು, "ಧಣೀರಾ! ಮಂತ್ರ ಹಾಕಿದ್ದ ಮುತ್ತನ್ನು ಮುಟ್ಟಿದೀರಿ, ಏನಾರ ಶಾಂತಿ ಗೀಂತಿ ಮಾಡಿಸಿಕೊಳ್ಳಿ. ಅಯ್ಯನೋರನ್ನ ಕರೆಸ್ರಿ" ಎಂದು ಹೇಳಿ, ತನ್ನ ಸಾಮಾನುಗಳೆಲ್ಲವನ್ನೂ ಕಟ್ಟಿಕೊಂಡು, ಅಡ್ಡೆ ಮೇಲೆ ಕೂಡಿಸಿ, ಹೊತ್ತುಕೊಂಡು ಹೊರಟ.

* * * *

ಶ್ರಾವಣ ಮಾಸದ ಶುಕ್ಲಪಕ್ಷದ ಪಂಚಮೀ ದಿನ. ನಾಗರಪಂಚಮಿ! ಹಿರಿಯೂರು ಸಾಹುಕಾರರ ಮನೆಯಲ್ಲಿ ದೊಡ್ಡ ಹಬ್ಬ. ಆದವಾನಿ ದಳ್ಳಾಳಿಗಳನ್ನು ಹಬ್ಬದೂಟಕ್ಕೆ ಸಾಹುಕಾರರು ಕರೆದಿದ್ದರು. "ವರ್ಷಾವಧಿ ಹಬ್ಬ; ನೀವು ಒಂಟಿಯಾಗಿ ಊಟ ಮಾಡೋದು ಅಷ್ಟೇನೂ ಚೆಂದವಲ್ಲ. ಹೇಗೂ ನಿಮ್ಮಿಂದಲೇ ಗಿಟ್ಟಿಸಿದ ಹಣದಲ್ಲಿ ಈ ಸಾರಿ ಸಿಹಿ ತಿಂಡಿ ಮಾಡಿಸಿದ್ದೀನಿ. ನಮ್ಮನೆಗೇ ಬನ್ನಿ," ಎಂದು ಆದರದಿಂದ ಅವರನ್ನು ಬರಮಾಡಿಕೊಂಡಿದ್ದರು. ಬಾಜಿ ಕಟ್ಟೋರ ಮನಸ್ಸೇ ಹೀಗೆ! ಬಾಜಿ ಕಟ್ಟಿದಾಗ ದಾಯಾದಿಗಳಂತೆ ಕಚ್ಚಾಡುತ್ತಾರೆ. ಅದು ಮುಗಿದ ಮೇಲೆ ಅಣ್ಣ ತಮ್ಮಂದಿರಂತೆ ತಬ್ಬಿಕೊಂಡು ಮುದ್ದಾಡುತ್ತಾರೆ! "ಈವತ್ತು ಊರಿನಲ್ಲಿ ಎಲ್ಲರ ಮನೆಯಲ್ಲೂ ಹಬ್ಬ. ಸ್ನೇಹಿತರ್ಯಾರೂ ಊಟಕ್ಕೆ ಬರುವಂತಿಲ್ಲ. ನೀವಾರೂ ಬಂದರೆ ಎಷ್ಟೋ ನೆಮ್ಮದಿ" ಎಂದು ಹೇಳಿ ಆದವಾನಿ ದಳ್ಳಾಳಿಗಳು ಖಂಡಿತ ಊಟಕ್ಕೆ ಬರುವಂತೆ ಮಾಡಿದ್ದರು.



ಎಲ್ಲರೂ ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಊಟಕ್ಕೆ ಕುಳಿತರು. ಸಿದ್ದಲಿಂಗುವಿನ ಸಡಗರವೇ ಸಡಗರ. ಆದವಾನಿ ದಳ್ಳಾಳಿಗಳಿಗೆ ಬಲವಂತಮಾಡಿ ಮೂರು ಹೋಳಿಗೆಗಳನ್ನು ತಿನ್ನಿಸಿದ್ದ, ಎರಡು ದೊನ್ನೆ ಪರಮಾನ್ನವನ್ನೂ ಕುಡಿಸಿದ್ದ. ನೆಲ್ಲಿಕಾಯಿ ಉಪ್ಪಿನಕಾಯನ್ನು ನೆಂಚಿಕೊಂಡು ಆದವಾನಿ ಸಾಹುಕಾರರು ಪರಮಾನ್ನವನ್ನು ಮುಗಿಸಿದ್ದರು. ಎಲ್ಲರಿಗೂ ಮೊಸರನ್ನವನ್ನು ಬಡಿಸಾಗಿತ್ತು.

ಬೇಗ ಊಟ ಮುಗಿಸಿಕೊಂಡು, ಎಲಡಿಕೆ ಸಿದ್ಧಮಾಡಲು, ಕಿರಿಮಗಳು ಎದ್ದುಹೋದಳು. ಬೈಠಕ್‌ಖಾನೆಯಲ್ಲಿ ರತ್ನಗಂಬಳಿ ಹಾಸಿ ಎಲಡಿಕೆ ತಟ್ಟೆಯನ್ನಿಟ್ಟಳು. ಪನ್ನೀರ್‌ದಾನಿಯನ್ನು ತರಲು ಸಾಹುಕಾರರ ಕೊಠಡಿಗೆ ಹೋದಳು. ಪೆಠಾರಿ ಹಿಂದೆ ಸರಸರ ಶಬ್ದ ಕೇಳಿಸಿತು. ನೋಡಿದಳು! ಊಟದ ಮನೆಯ ಕಡೆಗೆ ಓಡಿದಳು. "ಹಾವು, ಹಾವು!" ಎಂದು ಚೀರುತ್ತಾ.

ಸಾಹುಕಾರರು ಊಟ ಮುಗಿಸಿದ್ದರು. ಜಟ್ಟಂತ ಎದ್ದು, "ಎಲ್ಲೇ ಶಾರಿ! ಎಲ್ಲಿದೆಯೇ ಹಾವು?" ಎಂದು ಕೈಯನ್ನೂ ತೊಳೆದುಕೊಳ್ಳದೆ ಕೇಳಿದರು. ಶಾರಿ ತೋರಿಸಿದಕಡೆಗೆ ಸಾಹುಕಾರರು ಎಂಜಲ ಕೈಯಲ್ಲೇ ಮೂಲೆಯಲ್ಲಿದ್ದ ಒನಕೆಯನ್ನು ಹಿಡಿದುಕೊಂಡು, ಓಡಿದರು. ಬಾಗಿಲಲ್ಲಿ ನಿಂತು ನೋಡಿದಾಗ ಪೆಠಾರಿಯ ಹಿಂದೆ ಕಂಡರು ಘಟಸರ್ಪದ ಬಾಲವನ್ನ. ಆ ವೇಳೆಗೆ ಆದವಾನಿ ದಳ್ಳಾಳಿಗಳು ಹಿಂದೆ ಬಂದಿದ್ದರು. ಮನೆಯಾಕೆಯೂ ಓಡಿ ಬಂದಿದ್ದಳು. ಸೌಟನ್ನು ಹಿಡಿದೇ ಸಿದ್ಧಲಿಂಗುವೂ ಬಂದ.

"ನಾಗರ ಪಂಚಮಿ, ನಾಗಪ್ಪನ್ನ ಕೊಲ್ಲಬ್ಯಾಡಿ, ದಮ್ಮಯ್ಯ! ನನ್ನಾಣೆ ಕೊಲ್ಲಬೇಡಿ," ಅಂತ ಕಾತರದಿಂದ ಕೇಳಿಕೊಂಡಳು ಸಾಹುಕಾರರ ಹೆಂಡತಿ.

"ಹೌದ್ದಾದು, ಸಾಹುಕಾರರೇ! ಜೀವಂತ ಹಿಡಿಸಿ ಊರಾಚೆಗೆ ಸಾಗಿಸಿಬಿಡೋಣ. ಬೇಗ ಬಾಗಿಲೆಳ್ಕೊಳ್ಳಿ, ಎಲ್ಲಾರ ಹೊರಕ್ಕೆ ಬಂದುಬಿಟ್ಟಾತು" ಎಂದು ಆದವಾನಿ ಸಾಹುಕಾರರೂ ಹೇಳಿದರು. ಹೇಳುತ್ತಾ ಬಾಗಿಲನ್ನೂ ಎಳೆದುಕೊಂಡು ಅಗಳಿ ಹಾಕಿದರು.

"ನಿನ್ನೆ ಬಂದಿದ್ದ ಹಾವಾಡಿಗ ಇಲ್ಲೇ ಎಲ್ಲೋ ಇರಬೇಕು. ಹೋಗಿ ಕರ್ಕೊಂಡು ಬರ್ಲಾ?" ಎಂದ, ಸಿದ್ದಲಿಂಗು.

"ಬೇಗ ಹೋಗಿ ಕರ್ಕೊಂಡು ಬಾ, ಸೌಟನ್ನು ಇಲ್ಲೇ ಬಿಟ್ಟುಹೋಗು" ಎಂದರು ಸಾಹುಕಾರರು. ಅದರ ಬಾಲದ ಗಾತ್ರ ನೋಡಿದ ಮೇಲೆ, ಹಾವನ್ನು ಕೊಲ್ಲುವ ಹಂಬಲ ಅವರಿಗಿತ್ತಿಲ್ಲ. ಹೆಂಡತಿ ಸಲಹೆ ಮಾಡಿದ್ದು ಅನುಕೂಲವಾಗಿತ್ತು. "ಬಾಗಿಲ ಸಂದೀಲೇನಾದರೂ ಅದು ಬರಲಿ, ಒನಕೇಲಿ ಅದರ ತಲೇನ ಜಜ್ಜಿಬಿಡ್ತೀನಿ" ಎಂದು ಕಾವಲು ಕಾಯುತ್ತಾ ಸಾಹುಕಾರರು ಕುಳಿತರು. ಆದವಾನಿಯ ದಳ್ಳಾಳಿಯೂ ಪಕ್ಕದಲ್ಲೇ ನೆರವಿಗೆ ನಿಂತುಕೊಂಡಿದ್ದರು.

ಸ್ವಲ್ಪ ಹೊತ್ತಿನಲ್ಲೇ ಹಾವಾಡಿಗನನ್ನು ಕರೆದುಕೊಂಡು ಸಿದ್ಧಲಿಂಗುವು ಓಡೋಡಿ ಉಬ್ಬಸಪಡುತ್ತ ಬಂದ. ಸಾಹುಕಾರರ ಅಂಗೈ ಮೇಲಿನ ಅಗುಳುಗಳೆಲ್ಲಾ ಅಕ್ಷತೆಯಾಗಿತ್ತು.

"ಕಾಳಿಂಗಸರ್ಪ ಇದ್ದ ಹಾಗಿದೆ. ಹುಷಾರಾಗಿರಪ್ಪ," ಎಂದರು, ಹಾವಾಡಿಗನನ್ನು ಸಾಹುಕಾರರು ನೋಡಿದಾಗ. "ಅದರ ಬಾಲವೇ ರಟ್ಟೆ ಅಷ್ಟು ದಪ್ಪ ಇದೆ" ಎಂದರು.

"ಮಾಸೋಮಿ! ಅಂಗೈಯ್ಯಾಗೆ ಮಚ್ಚೆ ಇದೆ. ಗರುಡ ಪಚ್ಚೆ ಮಣಿ ಕೊರಳಾಗೈತೆ. ಎಂಥಾ ಸರ್ಪಾನೇ ಆಗಿರಲಿ, ನಂಗೇನು ಭಯ!" ಎಂದ ಹುಮ್ಮಸ್ಸಿನಿಂದ ಹಾವಾಡಿಗ. ಸಾಹುಕಾರರ ಮುಖವನ್ನು ಮತ್ತೊಮ್ಮೆ ದಿಟ್ಟಿಸಿ ನೋಡಿದ. ಎಂತಹುದೋ ಸಂಶಯ ಅವನ ಮುಖದ ಮೇಲೆ ತೋರಿ ಹೋಯಿತು.

ಅಗಳಿ ಬಿಡಿಸಿ ಬಾಗಿಲು ತೆಗೆದು ಕೊಠಡಿಯೊಳಕ್ಕೆ ಹಾವಾಡಿಗನು ನುಗ್ಗಿದ. ಬಾಲವನ್ನು ಎಡಗೈಯಲ್ಲಿ ಹಿಡಿದಾಗ, ಹಾವು ಸುರುಳಿಹಾಕಿ ಹೆಡೆಯನ್ನು ಬಿಚ್ಚಿ, ಕಚ್ಚಲು ಬಾಗಿತು. ಸರಕ್ಕಂತ ಬಲಗೈಯ್ಯಲ್ಲಿ ಕತ್ತನ್ನು ಹಾವಾಡಿಗನು ಹಿಡಿದ. ಎರಡು ಮೊಳ ಉದ್ದವಿದ್ದ ಕಾಳಿಂಗ ಸರ್ಪವನ್ನು ಹಿಡಿದು ಹೊರಕ್ಕೆ ತಂದ. ತಂದಿದ್ದ ಬುಟ್ಟಿಯೊಂದಕ್ಕೆ ಹುಷಾರಾಗಿ ಅದನ್ನು ಬಾಲದ ತುದಿಯಿಂದ ತುರುಕಿ, ಜಟ್ಟಂತ ಹೆಡೆಯನ್ನು ತೂರಿಸಿ ಮುಚ್ಚಳವನ್ನು ಭದ್ರಪಡಿಸಿದ.

"ಊರಾಚೆ ಎಲ್ಲಾದರೂ ಬಿಟ್ಟುಬಿಡಪ್ಪ, ಕೊಲಬೇಡ ಅದನ್ನ" ಎಂದಳು ಸಾಹುಕಾರರ ಹೆಂಡತಿ; ಒಂದು ಮೊರ ಅಕ್ಕಿ ಬೇಳೆ, ಭಕ್ಷ್ಯಗಳನ್ನು ಕೊಡುತ್ತಾ.

"ಭಾಳ ಶಹಣೆ ಇದ್ದೀಯಾ!" ಅಂತ ಶಹಭಾಸ್‌ಗಿರಿ ಕೊಡುತ್ತ ಆದವಾನಿ ದಳ್ಳಾಳಿಗಳು ಹೊದ್ದಿದ್ದ ಶಲ್ಯವನ್ನೇ ಹಾವಾಡಿಗನ ಮೇಲೆ ಹಾಕಿದರು.

ಹಿರಿಯೂರ ಸಾಹುಕಾರರು ಸೊಂಟದ ಪಟ್ಟಿಯಲ್ಲಿನ ಚೀಲದಿಂದ ಎಂಜಲ ಕೈಯ್ಯಲ್ಲೇ ಹಣವನ್ನು ತೆಗೆದುಕೊಟ್ಟರು.

ಹಾವಾಡಿಗನು ಹೊರಟುಹೋದ ಅರ್ಧತಾಸಿನ ತನಕ ಎಲ್ಲರ ಬಾಯಲ್ಲೂ ಹಾವಿನ ಮಾತೇ ಮಾತು.

* * * *

ಸಪ್ತಮೀ ದಿನ ಬೆಳಿಗ್ಗೆ ಗಾಡಿ ಕಟ್ಟಿಸಿಕೊಂಡು ಸಾಹುಕಾರರು ಮನೆಬಿಟ್ಟು ಹೊರಡುವಾಗ ಎಂಟು ಗಂಟೆ ಹೊಡೆದಿತ್ತು. ಬೆಳಗಿನ ಝಾವಕ್ಕೇ ಹೊರಡಬೇಕು ಎಂದು ಸಾಹುಕಾರರು ಯೋಚಿಸಿದ್ದರು. ಆದರೆ ಸಂದೂಕವನ್ನು ತೆಗೆದುಕೊಂಡು ತಲವಾರರ ಮನೇಲಿಟ್ಟು ಬರೋದಕ್ಕೆ ಹೋದ ಸಿದ್ಧಲಿಂಗು ಒಂದು ಗಂಟೆ ಹೊತ್ತು ಮಾಡಿದ್ದ. ಅವನು ಬಂದೇ ಸಾಮಾನುಗಳನ್ನೂ ಗಾಡಿಗೆ ತುಂಬ ಬೇಕಾಗಿತ್ತು. ಹಿಂತಿರುಗಿದಾಗ ಸಾಹುಕಾರರು ಅವನ ಮೇಲೆ ರೇಗಿಬಿದ್ದರು. "ಬೇಗ ಹೊರಡಬೇಕು, ಎರಡು ಗಾವುದ ಪ್ರಯಾಣ ಇದೆ ಅಂತ ಗೊತ್ತಿಲ್ಲವೇ? ಇಷ್ಟುಹೊತ್ತು ಯಾಕೋ ಮಾಡಿದೆ?" ಅಂತ ಕೂಗಾಡಿದರು. ಎರಡು ಏಟನ್ನೂ ಬಿಗಿದರು. ಮುಚ್ಚಿದ ಬಾಯನ್ನು ಸಿದ್ಧಲಿಂಗು ತೆಗೆಯಲೇ ಇಲ್ಲ. ಗಾಡಿಗೆ ಸಾಮಾನುಗಳೆಲ್ಲವನ್ನೂ ಮೂಕನಂತೆ ತುಂಬಿದ. ಸಾಹುಕಾರರು ಗಾಡಿ ಹತ್ತಿ ಹೊರಡೋತನಕ, ತಲೆ ಎತ್ತಿ ಸಿದ್ಧಲಿಂಗು ನೋಡಲಿಲ್ಲ. "ಎಂಟು ಹತ್ತು ದಿನದಲ್ಲಿ ಬಂದುಬಿಡ್ತೀನಿ, ಮನೆ ಕಡೆ ಹುಷಾರ್," ಎಂದು ಸಾಹುಕಾರರು ಗಾಡಿಯಿಂದಲೇ ಹೇಳಿದರು.

ಮನೆಯಾಕೆಯೂ ಕೇಳಿದಳು. "ಸಿದ್ಧಲಿಂಗೂ! ಯಾಕೋ! ತಪರಾಕು ಹಾಕಿದರೂ



ತಪ್ಪುಗಿದ್ದೆ. ಹೊತ್ತ್ಯಾಕಾಯ್ತು ಹೇಳ್ಬಾರ್ದಾಗಿತ್ತಾ? ತಳವಾರರು ಮನೇಲಿರಲಿಲ್ವಾ? ಬಯಲ ಕಡೆಗೆ ಅಡ್ಡಾಡಲಿಕ್ಕೆ ಹೋಗಿದ್ದರಾ? ಅಥವಾ ತಮ್ಮ ಕೆಲಸಕ್ಕೇನಾರ ನಿನ್ನನ್ನು ಕಳಿಸಿಕೊಟ್ಟಿದ್ರಾ?" ಎಂದು ವಿಶ್ವಾಸದಿಂದಲೇ ಕೇಳಿದಳು.

"ತಳವಾರರ ಮನೇಗೆ ಹೋಗೋಕೆ ಮುಂಚೆ, ಛತ್ರದ ಮುಂದೆ ಹೋಗ್ತಿದ್ದಾಗ ಆದವಾನಿ ದಳ್ಳಾಳಿಗಲು ಸಿಕ್ಕರು, 'ಸಿದ್ಧಲಿಂಗು! ನಸ್ಯ ಮುಗಿದ್ಹೋಗಿದೆ, ತಾಯೂರು ಉಂಡೆ ನಸ್ಯಾನೇ ಬೇಕು ನನಗೆ. ನೀನೂ ಅದನ್ನೇ ಹಾಕೋದು, ಸ್ವಲ್ಪ ತಂದುಕೊಟ್ಟೀಯಾ' ಅಂದರು. ತುಂಬಾ ವದ್ದಾಡ್ತಾ ಇದ್ದರು, ಸಂದೂಕಾನ ಅವರ ಹತ್ತಿರಾನೇ ಇಟ್ಟು ಓಡೋಡಿ ಹೋಗಿ ಮತ್ತೋಡಿಸೆಟ್ಟಿ ಅಂಗಡೀಲಿ ಕೊಂಡು ತಂದುಕೊಟ್ಟೆ. ಆ ಮ್ಯಾಗೆ ತಳವಾರರ ಮನೆಗೆ ಹೋಗಿ ಸಂದೂಕ ಕೊಟ್ಟು ಬಂದೆ. ನಸ್ಯಾನ ತಂದುಕೊಟ್ಟಾಗ ಆದವಾನಿ ದಳ್ಳಾಳಿಗಳ ಸಂತೋಷಾನ ನೋಡಬೇಕಿತ್ತು, ಅವ್ವಾ! ಧಣಿಗಳಿಗೆ ಹೇಳೋಣ ಅಂತ ಬಾಯಿ ತೆರೆಯೋದಕ್ಕೆ ಮುಂಚೇನೇ ರೇಗಿಬಿದ್ದು ಎರಡು ತಪರಾಕು ಹಾಕಿದರು. ನನಗೆ ಹೇಗ್ಹೇಗೋ ಆಯಿತು. ಮೊಂಡುಹಿಡಿದ ಗಾಣದ ಎತ್ತಿನ ಹಾಗಾಯ್ತು ತೆಪ್ಪಗಿದ್ದೆ. ನಿಮ್ಹಾಂಗೆ ಕೇಳಿದ್ದರೆ ಹೇಳ್ತಾ ಇರ್ಲಿಲ್ಲವಾ" ಎಂದ ಸಿದ್ಧಲಿಂಗು.

"ಅನ್ನ ಹಾಕೋರು ಎರಡು ಏಟು ಕೊಟ್ಟರೆ ಒಳ್ಳೇದೇ ಆಗುತ್ತೆ. ಮನಸ್ಸಿಗೆ ತಂದುಕೋಬ್ಯಾಡ" ಎಂದು ಸಮಾಧಾನವನ್ನು ಆಕೆಯು ಹೇಳಿದಳು.

"ಅವ್ವಾ! ಇಷ್ಟೂ ದಿವಸ ಇಲ್ಲೇ ಉಳಿದುಕೊಂಡಿರೋದು, ನೀವು ಕಲಿಸಿದ ಇಂಥ ಪಾಠದಿಂದಾನೇ! ಇದ್ನೆಲ್ಲಾ ಮನಸ್ಸಿಗೆ ತಂದುಕೊಂಡರಾದಾತಾ? ಹೊಟ್ಟೆಗೆ ಹಾಕ್ದೋರು, ಎರಡು ಏಟು ಹೊಡೆದರೆ, ಜೀರ್ಣಶಕ್ತಿ ಜೋರಾಗುತ್ತೆ ಅಂತ ಅಯ್ನೋರೂ ಹೇಳ್ತಿದ್ರವ್ವಾ!" ಎಂದ ಸಿದ್ದಲಿಂಗು.

* * * *

ಅರಸಿನಗುಂಡಿಯ ಪಾಳುಬಿದ್ದ ಎಂಟಂಕಣದ ಮನೆಯಲ್ಲಿ ತೋಳಿನಿಂದ ಅಡ್ಡೆಯನ್ನು ತೆಗೆದಿರಿಸಿ, ಬುಟ್ಟಿಗಳನ್ನು ಕೆಳಗಿಟ್ಟು ಹಾವಾಡಿಗನು ಕುಳಿತು ಹಣೆಯನ್ನು ಒರೆಸಿಕೊಂಡ. ಪೂಂಗಿಯನ್ನು ದೃಷ್ಟಿಸಿ ನೋಡುತ್ತಾ ಹೇಳಿಕೊಂಡ.

"ಅಮ್ಮನಿಗೆ ಏನು ಅಪಚಾರ ಮಾಡಿದೆ? ಈ ಬಾರಿ ಯಾಕೆ ಹೀಗೆ ಆಯ್ತು? ಹಿರಿಯೂರ ಸಾಹುಕಾರರನ್ನು ಎಲ್ಲೋ ನೋಡಿದ ನೆನಪೂ ಮೂಡಿತು. ಎಲ್ಲಿ ಅಂತ ತಿಳೀಲಿಲ್ಲ. ಆದರೂ ನೋಡೋಣ ಅಂತ ದಿವಿನಾಗಿ ಮಂತ್ರಮಾಡಿ ಹತ್ತು ಗಂಟೆ ಕಾಲ 'ಕಟ್ಟು' ಹಾಕಿ ಕಾಳನ್ನ ಸಾಹುಕಾರರ ಕೊಠಡೀಗೆ ಗವಾಕ್ಷದ ಮೂಲಕ ಹಾಕಿದಾಗ ಯಾರೂ ನೋಡಲಿಲ್ಲ. 'ಅಮ್ಮ ಒಪ್ಪಿದಾಳೆ,' ಅಂತ ಧೈರ್ಯಬಂತು. ಆದರೆ ಒಂದೇ ಗಂಟೆ ಆದಾಗ 'ಕಟ್ಟು' ಬಿಚ್ಚಿ ಹೋಗಿ, ಕಾಳ ಹರಿದಾಡಲು ತೊಡಗಿದ. ಬಂದು ಕರೆದಾಗ ನನಗೆ ಎದೆ ಝಲ್ಲೆಂದಿತು. ಹುಡುಗರು ಮಕ್ಕಳು ಇರೋಮನೆ, ಹಾವಿಗೆ ಹಾಕಿದ್ದ ಮಂತ್ರದ 'ಕಟ್ಟು' ಮೊದಲೇ ಬಿಚ್ಚಿಹೋದರೆ ಏನು ಅನಾಹುತ ಆಗ್ಹೋಗ್ತೈತೋ ಅಂತ ಓಡಿದೆ. ಹಿಂತಿರುಗಿ ಕಾಳನ್ನ ತಂದರೆ ಸಾಕು ಅಂತ ಅನ್ನಿಸಿತು. ಬರೀಗೈಯಲ್ಲಿ ಬರೋ ಹಂಗಾಯ್ತು!" ಎಂದು ಗಟ್ಟಿಯಾಗೇ ಹೇಳಿದ.

ಬುಟ್ಟಿಯೊಂದರ ಮುಚ್ಚಳ ಸ್ವಲ್ಪ ವಾರೆಯಾಗಿತ್ತು. 'ಕಾಳ' ತಲೆಯನ್ನು ಹೊರಕ್ಕೆ ಇಣುಕಿಸಿತು. ಹಾಡೇ ಹಗಲಾಗಿದ್ದರೂ ಅದಕ್ಕೆ ಕಾಣಿಸಿದ್ದು ಒಂದು ಬಲಿತ ಇಲಿ. ಸರಕ್ಕನೆ ಹೊರಕ್ಕೆ ಹರಿದು ಇಲಿಯನ್ನು ಹಿಡಿಯಲು ಓಡಿತು. ಇಲಿ ಬಿಲವೊಂದನ್ನು ಹೊಕ್ಕಿತು. ಹಿಂದೆಯೇ 'ಕಾಳ'ನೂ ಬಿಲವನ್ನು ಹೊಕ್ಕ. ಅರ್ಧ ದೇಹ ಬಿಲದಲ್ಲಿ, ಅರ್ಧ ಹೊರಗೆ.

ಸರಸರ, ಪುಳುಪುಳಕ್, ಶಬ್ದ ಕೇಳಿಸಿದಾಗ ಹಾವಾಡಿಗನ ದೃಷ್ಟಿ, ಪೊಂಗಿಯಿಂದ ಸಪ್ಪಳವಾದ ಕಡೆಗೆ ಹರಿಯಿತು. ಅವನಿಗೆ ಕಂಡಿದ್ದು ಕಾಳಿಂಗ ನಾಗರದ ತಲೆಕಡೆಯ ಅರ್ಧವು ಬಿಲವೊಂದರಲ್ಲಿ ಮಾಯವಾಗಿದ್ದು. ಅದನ್ನು ಹಿಡಿಯುದಕ್ಕೆ ಭಂಗಿ ಹಾವಾಡಿಗನು ಹೋದಾಗ 'ಕಾಳ'ನು ಪೂರ್ತಿ ಮಾಯವಾಗಿದ್ದ.

ಬಿಲದ ಬಾಯನ್ನು ದೊಡ್ಡದನ್ನಾಗಿಸಲು ಹಾವಾಡಿಗನು ಶುರುಮಾಡಿದ. ಮೆತ್ತಗಿದ್ದ ಮಣ್ಣು. ಸೊಂಟದ ಕಠಾರಿಯಿಂದ ತೋಡಲು ಕಷ್ಟವಾಗಲಿಲ್ಲ. ಒಂದು ಮೊಳದಷ್ಟು ಅಗೆದಾಗ ಕಾಳಿಂಗ ನಾಗರದ ಬಾಲ ಸಿಕ್ಕಿತು. ಹುಷಾರಾಗಿ ಬಿಲವನ್ನು ದೊಡ್ಡದು ಮಾಡಿದ. ಕಾಳನ ಬಾಯಲ್ಲಿ ಇಲಿ ಸಿಕ್ಕಬಿದ್ದಿತ್ತು. ಬಲು ಜಾಗರೂಕತೆಯಿಂದ ಬಿಲದ ದೊಂಡಿಯನ್ನು ಅಗಲಮಾಡಲು ಕಠಾರಿಯನ್ನು ಮೆದುವಾಗಿ ಹಾಕಿದಾಗ 'ಠಣ್' ಅಂತ ಶಬ್ದವಾಯಿತು.

ಹಾವಾಡಿಗನ ಮೈ ಕೈ ಎಲ್ಲಾ ಕಣ್ಣುಗಳಿಂದ ತುಂಬಿದಂತಾಯ್ತು. ಹಾವನ್ನೂ, ಹಾವಿನ ಬಾಯಲ್ಲಿದ್ದ ಇಲಿಯನ್ನೂ ಮೆಲ್ಲಗೆ ಹೊರಕ್ಕೆಳೆದು ಇರಿಸಿದ. ಅಗೆದ... ಅಗೆದ...

ಹಿತ್ತಾಳೆಯ ಕೊಡವೊಂದು ಸಿಕ್ಕಿತು. ಹತ್ತು ಸಾವಿರ ಚಿನ್ನದ ವರಹಗಳಿದ್ದುವು ಅದರಲ್ಲಿ!! ಬ್ಯಾಡರ ಮಾಚಿಯ ಮನೆ ಅದು!!!

ಹಾವಾಡಿಗನಿಗೆ ಅಮಿತ ಆನಂದವಾಯ್ತು. "ಅಮ್ಮನ ಹರಕೆ ನನ್ನ ಮೇಲೆ ಪೂರ್ಣವಾಗಿದೆ!" ಎಂಬ ಸಂತಸದಿಂದ ಬಂದ ಆನಂದ. ತನ್ನಿಂದ ಅಮ್ಮನಿಗೆ ಯಾವ ಅಪಚಾರವೂ ಆಗಿರಲಿಲ್ಲವೆಂಬ ದೃಢವಾದ ನಂಬಿಕೆಯಿಂದ ಬಂದ ಆನಂದ.

* * * *

ಕೊಂಡೆನಕ ಪಲ್ಲಿಯಲ್ಲಿ ಭೈರವಿ ಪೂಜೆಯನ್ನು ಮುಗಿಸಿ, ಆಲದ ತೋಪಿನಿಂದ ಹೊರಕ್ಕೆ ಬರುತ್ತಿದ್ದಾಗ ಪೂಜಾರಪ್ಪನ ಬಲಹುಬ್ಬು ತನ್ನ ಪಾಡಿಗೆ ತಾನೇ ಬಡಿದುಕೊಳ್ಳಲಾರಂಭಿಸಿತು. ಪೂಜಾಶಕ್ತಿಯಿಂದ, ದೃಢ ಸಂಕಲ್ಪದಿಂದ, ಸ್ವಾತಂತ್ರ್ಯ ಸಂಯಮದಿಂದ ದೇಹದ ಮೇಲೆ ಪೂರ್ಣ ಹತೋಟಿ ಬಂದಿದೆಯೆಂದು ನಂಬಿದ್ದ ಪೂಜಾರಪ್ಪನಿಗೆ ಬಲಹುಬ್ಬನ್ನು ತಟಸ್ಥಗೊಳಿಸಲಾಗಲಿಲ್ಲ. ಒಳ್ಳೆ ಶಕುನ ಎಂದು ದೊಡ್ಡೋರು ಅಂತಿದ್ದರು. ಅದನ್ನು ಹತೋಟಿಗೆ ತರಲು ಬೇಕಾದಷ್ಟು ದೊಡ್ಡತನ ತನ್ನಲಿಲ್ಲ ಎಂಬ, ಅಹಂಕಾರವನ್ನು ಶೂನ್ಯಗೊಳಿಸುವ ಪ್ರಜ್ಞೆಯು ಅವನಲ್ಲಿ ಮೂಡುತ್ತ ಬಂತು. "ನಾನ್ಯಾಕಾರ ವದ್ದಾಡಲಿ? ಅಮ್ಮ ಮಾಡಿಸಿದ್ಹಾಂಗ ಆಗಲಿ" ಅಂತ ಅವನು ಮೆಲ್ಲಗೆ ನಡೆಯುತ್ತಾ ಬಂದು, ಹುಷಾರ್ ಬಂಡೆಯ ಬಳಿಯಲ್ಲಿ ಕುಳಿತ.

ಹೊರವಾಗಿ ಬೆಳೆದಿದ್ದ ಪಾಪಾಸುಕಳ್ಳಿ ಪೊದೆಗಳ ಕಡೆಯಿಂದ ಯಾರೋ



ನಡೆದುಬರುತ್ತಿರುವ ಕಾಲು ಸಪ್ಪಳ ಕೇಳಿಸಿತು. ಪೊದೆ ಮಧ್ಯದ ಕಾಲು ಹಾದೀಲಿ ಬರೋನು ನಮ್ಮವನೇ ಇರಬೇಕು ಅಂತ ಪೂಜಾರಪ್ಪನಿಗೆ ತಿಳಿದುದು ಸಹಜವೇ ಅಗ್ನಿ. ಅದಕ್ಕೇ ಆತ ಸಮಾಧಾನದಿಂದಿದ್ದ. ಸಪ್ಪಳವಾದೆಡೆಯಿಂದ ಬಂದವನು ಪೂಜಾರಪ್ಪನನ್ನು ನೋಡಿ, ಓಡಿಬಂದು ಅಡ್ಡಬಿದ್ದು, ರುಮಾಲಿನಲ್ಲಿ ಕಟ್ಟಿದ್ದ ಗಂಟೊಂದನ್ನು ಕಾಲ ಬಳಿ ಇರಿಸಿದ. ಅಡ್ಡಬಿದ್ದವನ ಬಾಗಿದ ತಲೆಯನ್ನು ನೇವರಿಸಿದ ಪೂಜರಪ್ಪ.

"ಏನೇನು ಮಾಡಿಕೊಂಡ್ಬಂದೆ ಜಗ್ಗು?" ಎಂದು ಕೇಳಿದ.

"ಚಿಕ್ಕ ಬ್ಯಾಲದಕೆರೆ ಸಂತೆಮಾಳದಲ್ಲಿ ಕನ್ನೂನ ಬೀಳ್ಕೊಟ್ಟೆ, ಹಿರಿಯೂರು ಸಾಹುಕಾರರ ಶ್ರೀಮಂತಿಕೆಯನ್ನು ಇಬ್ಬರೂ ಕೇಳಿದ್ದೆವು. ಹಿರಿಯೂರತ್ತ ನೀನು ಹೋಗು. ನಾನಿಲ್ಲೆಲ್ಲಾದರೂ ಹೋಗ್ತೀನಿ ಎಂದು ಅವನಿಗೆ ಹೇಳಿದೆ.

ಸಂತೆ ಗಾಡಿ ಹಿಂದೆ ಅವನು ಹೊರಟುಹೋದ. ನನಗ್ಯಾಕೋ ಮನಸ್ಸು ನಿಲ್ಲಲಿಲ್ಲ. ನಾನೂ ಹಿರಿಯೂರ ಕಡೆಗೇ ಹೊರಟೆ. ಆದವಾನಿ ದಳ್ಳಾಳಿಯಾಗಿ ಹಿರಿಯೂರ ಸಾಹುಕಾರರ ಜತೆ ಸಂಪಾದಿಸಿದೆ. ಸಿರಾದಲ್ಲಿ ತಳವಾರನಾಗಿದ್ದಾಗ ನಬಾಬರ ಹೂತಿಟ್ಟ ನಿಧಿಯಲ್ಲಿ ಸಾಕಷ್ಟು ಗಿಟ್ಟಿಸಿದ್ದನೆಂದೂ, ಕೆಲಸಕ್ಕೆ ರಾಜಿನಾಮೆಕೊಟ್ಟು, ಸಿಕ್ಕಿದ್ದನ್ನು ದಕ್ಕಿಸಿಕೊಂಡು ಬಂದಿದ್ದನೆಂದೂ ತಿಳಿಯಿತು.

ಎಂಥಾ ಮಡ್ಡೀ ಅಂತೀರಿ ಪೂಜಾರಪ್ಪನೋರೇ? ಚದುರಂಗದ ಆಟದಲ್ಲಿ ಅವನಿಗೆ ಸೋಲಲು ಏನು ಕಷ್ಟಪಟ್ಟೆ ಅಂತೀರೀ! ನೀವೇನಾರ ನೋಡಿದ್ದರೆ, ನನ್ನ ಬೆನ್ನುತಟ್ತಾ ಇದ್ರಿ! ಅಂಥಾ ಮಡ್ಡೀಗೆ ಇಂಥಾ ಐಶ್ವರ್ಯ ಹೆಂಗಾರ ಬಂತೋ ಭೈರವೀಗೇ ಗೊತ್ತು! ನಮಗ್ಯಾಕೆ ಅಂಥಾ ದೊಡ್ಡ ವಿಚಾರ. ಆ ಐಶ್ವರ್ಯಾನ ನಾವು ಗಿಟ್ಟಿಸಿದರೆ ನಮ್ಮ ಕೆಲಸ ಆಯ್ತು ಅಂತ ಅಂದುಕೊಂಡೆ.

ಪ್ರಯಾಣಕ್ಕೆ ಹೊರಡುವುದಕ್ಕೆ ಮೊದಲು ತಳವಾರರ ಮನೆಗೆ ಸಂದೂಕಾನ ಕಳಿಸ್ತೀನಿ ಅಂತ ಅಂದಿದ್ದರು. ಅವತ್ತಿಂದ ಸರ್ಪಗಾವಲು ಹಾಕಿದೆ. ಸಿದ್ಧಲಿಂಗು ಸಂದೂಕಾನ ಸಪ್ತಮೀ ದಿನ ತಂದಾಗ, ತಾಯೂರು ನೆಶ್ಯಬೇಕು ಅಂತಂದೆ. ತುಂಬಾ ಒಳ್ಳೆಯೋನು, ಸಿದ್ಧಲಿಂಗು. ಸಂದೂಕಾನ ನನ್ನ ಹತ್ತಿರ ಇಟ್ಟು ನೆಶ್ಯ ತಂದು ಕೊಡಲು ಹೋದ. ಸಂದೂಕಾ ಬಿಚ್ಚಿ ಒಳಗಿದ್ದ ಸಿರಾ ನಬಾಬರ ನಿಧಿಯನ್ನೆಲ್ಲಾ ಗಂಟುಕಟ್ಟಿದೆ. ತೂಕಕ್ಕೆ ತೂಕ ಇರಬೇಕಲ್ಲಾ! ಸಂದೂಕಾನ ಯಾತರಿಂದ ತುಂಬಿಸಲಿ ಎಂದು ಯೋಚಿಸಿದಾಗ, ನನ್ನೆದುರಿಗೆ ಇದ್ದಿದ್ದು ಛತ್ರದ ಬಾಗಿಲಲ್ಲಿ, ಮುರಿದುಹೋಗಿದ್ದ ಕಲ್ಲುನಾಗರ ಪ್ರತಿಮೆ. ಛತ್ರದ ಮೆಟ್ಟಿಲಿಗೆ ಹಾಕಿದ್ದರು. ಸಂದೂಕದಲ್ಲಿ ಅದನ್ನಿಟ್ಟು ಬೀಗ ಹಾಕಿ ಭದ್ರಪಡಿಸಿದೆ. ಸಿದ್ಧಲಿಂಗು ಹಿಂತಿರುಗಿದಾಗ ನೆಶ್ಯಕ್ಕಾಗಿ ಅಂಗೈಯನ್ನು ಚಾಚಿದೆ.

ಪೂಜಾರಪ್ಪನೋರೇ! ಪ್ರಯಾಣ ಮುಗಿಸಿಕೊಂಡು ಸಾಹುಕಾರರು ಹಿರಿಯೂರಿಗೆ ಬಂದು, ತಳವಾರರ ಮನೆಯಿಂದ ಸಂದೂಕ ತರೆಸಿಕೊಂಡು ತೆಗೆದು ನೋಡಿದಾಗ; ಕಲ್ಲುನಾಗರ ಕಾಣಿಸಿದಾಗ, ಅವರ ಮುಖಾನ ನೋಡಬೇಕು ಅನ್ನಿಸುತ್ತೆ" ಎಂದು ಹೇಳಿದ ಜಗ್ಗೋಜಿ.

"ನಿನ್ನ ಬಾಳು ಸರಿಹೋಯ್ತು. ಸೈ! ಆದರೆ ತಬ್ಬಲಿಯಾಗಿ ಬೆಳೆದಿದ್ದ ಕನ್ನೂ

ಏನ್ಮಾಡಿದ, ಅವನೇನಾದ; ಎಲ್ಲಿದಾನೆ? ಅದನ್ನು ತಿಳಿದುಕೊಳ್ಳಲಿಲ್ವೇ!" ಎಂದ ಪೂಜಾರಪ್ಪ.

"ಕನ್ನೋಜಿ ಹಿಂತಿರುಗಿ ಬರ್ಲಿಲ್ವಾ ಇನ್ನೂನೂ? ಹಾವಾಡಿಗನ ವೇಷ ಹಾಕ್ಕೊಂಡು, ಎಂಥ ಚೆನ್ನಾಗಿ ಆಟ ಕಟ್ಟಿದಾ! ಬಲು ಖುಷಿಯಾಗಿ ಹೊದ್ದಿದ್ದ ಶಾಲನ್ನೇ ಅವನಿಗೆ ಹೊದ್ದಿಸಿದೆ. ಮೂರು ನಾಲ್ಕು ದಿನಕ್ಕೆ ಮುಂಚೇನೇ ಬಂದಿರ್ತಾನೆ ಅಂತಿದ್ದೆ!" ಎಂದು ಜಗ್ಲೋಜಿ.

"ಮುತ್ತು ಉದುರಿಸ್ತೀನಿ
ಪ್ರೇತಾನ ಮಾತಾಡಿಸ್ತೀನಿ."

ಎಂಬ ಕೂಗು ಕೇಳಿಸಿತು. ಅತ್ತ ಕಣ್ಣು ಹಾಯಿಸಿದಾಗ ಹಾವಾಡಿಗನೊಬ್ಬ ಇಬ್ಬರ ಕಣ್ಣಿಗೂ ಕಂಡುಬಂದ. ಇವರನ್ನು ಕಂಡ ಆ ಹಾವಾಡಿಗ ದೌಡು ಬಂದು ಇಬ್ಬರಿಗೂ ಅಡ್ಡಬಿದ್ದ.

"ಯಾಕೋ ಕನ್ನು! ಇಷ್ಟು ದಿವಸ ಆಯ್ತು, ಹಿಂತಿರುಗುಕ್ಕೆ, ಹಿರಿಯೂರಲ್ಲಿ ನಿನಗೆ ಶಾಲು ಹೊದಿಸಿದಾಗ, ಮೂರು ದಿನದಲ್ಲಿ ಇಲ್ಲಿಗೆ ಬರ್ತಿ ಅಂತಂದುಕೊಂಡಿದ್ದೆ. ಯಾಕೆ ಬರ್ಲಿಲ್ಲ?" ಎಂದ ಜಗ್ಲೋಜಿ.

"ನೀನೇನಾ ಆದವಾನಿ ದಳ್ಳಾಳಿ!" ಎಂದು ಉದ್ಗಾರ ತೆಗೆದ ಕನ್ನೋಜಿ.

"ಅಷ್ಟು ಗೊತ್ತಾಗಲಿಲ್ವಾ! ಕನ್ನೂ!" ಎಂದ ಪೂಜಾರಪ್ಪ.

"ಹೋಗಲಿ ಬಿಡು! ನೀನೇನೇನನ್ನು ಮಾಡ್ಕೊಂಡು ಬಂದೆ?" ಎಂದ ಪೂಜಾರಪ್ಪ.

ಹತ್ತು ಸಾವಿರ ವರಾಹಗಳ ಗಂಟನ್ನು ಪೂಜಾರಪ್ಪನ ಕಾಲಿನ ಬಳಿ ಇಟ್ಟು ಕನ್ನೋಜಿ ನಡೆದುದೆಲ್ಲವನ್ನೂ ಹೇಳಿದ.

"ಕನ್ನ ತಬ್ಬಲಿಯಲ್ಲಾ! ಪೂಜಾರಪ್ಪನೋರೇ! ಹೆತ್ತ ತಾಯಿ ವರ್ಷದಲ್ಲೇ ಸತ್ತು ಹೋಗಿರಬಹುದು. ಆದರೆ ದೊಡ್ಡ ತಾಯಿ ಇವನ್ನ ಕಾಪಾಡ್ತಾ ಇದಾಳೆ! ನಮ್ಮ ಕೆಲಸಾ ಇನ್ಮೇಲೆ ಹಗೂರಾಯ್ತು" ಎಂದ ಜಗ್ಲೋಜಿ.

"ಆದದ್ದನ್ನೆಲ್ಲಾ ಇವತ್ತು ಅರ್ಥಮಾಡಿಕೊಂಡರೆ ನನ್ನ ಕೆಲಸಾನೂ ಇನ್ನು ಮೇಲೆ ಹಗೂರು ಅಂತ ಅನ್ನಿಸುತ್ತೆ" ಎಂದ ಪೂಜಾರಪ್ಪ.

# "ಕಾರ್ಯವಾಸಿ, ಕತ್ತೇಗೂ ಲಾಳ ಕಟ್ಟಿಸ್ತಾನೆ!"

-ಅಜೇಂಖಾನನು ಕೋಟೆಯನ್ನು ಕಟ್ಟಿಸಿದ ಮೇಲೆ ಅಜೇಂಪುರವೆಂದೇ ಕರೆಯುತ್ತಿದ್ದರು. ಕಾಲಾನುಕ್ರಮದಲ್ಲಿ ಅಜ್ಜಂಪುರವಾಯ್ತು ಊರಾಚೆ ಇರುವ ಒಂದಂಕಣದ ಶಿವ ದೇವಾಲಯಕ್ಕೆ, ಹಲವಾರು ಮನೆತನಗಳ ಹಿರಿಯರೂ ಇಂದಿಗೂ ಹರಕೆ ಹೊರುತ್ತಾರೆ;-

-ಶಿರಾ ನವಾಬನ ಜನಾನಾದಲ್ಲಿದ್ದ ಲಂಬಾಣಿ ಲಖಂಬಾಯಿಯ ರೂಪು ಸೌಂದರ್ಯಗಳನ್ನು ಇನ್ನೂ ಜನರು ಜ್ಞಾಪಿಸಿಕೊಳ್ಳುತ್ತಾರೆ-ಆಕೆಗೆ ಕೊಪ್ಪರಿಗೆ ಹಣವನ್ನು ಕೊಟ್ಟು, ಮೈತುಂಬಾ ನಗಗಳನ್ನು ಹೇರಿದ್ದನೆಂದೂ ಪ್ರತೀತಿ ಇದೆ-

ಮಾರ್ಗಶಿರ ಮಾಸ, ಕೃಷ್ಣಪಕ್ಷ, ಷಷ್ಠಿಯ ಸಂಜೆ; ತುಸು ಕತ್ತಲು ಕವಿದಿದೆ. ತುಂತುರು ಹನಿ ಬೀಳುತ್ತಿದೆ. ಅಲ್ಲೊಂದು ಇಲ್ಲೊಂದು ಮಿಂಚು ಆಕಾಶದಲ್ಲಿ ತೋರಿ ಮಾಯವಾಗುತ್ತಿದೆ. ಕಿರುಗುಡುಗು ಕೇಳಿಬರುತ್ತಿದೆ. ಕೊಳದಲ್ಲಿದ್ದ ಕಪ್ಪೆಗಳು ವಟವಟ ವಾದ್ಯಕ್ಕೆ ಕೊರಲುಗೂಡಿಸಿವೆ. ಅಜ್ಜಂಪುರದಿಂದ ಶಿವನಗುಡಿಗೆ ಹೋಗುವ ರಸ್ತೆಯು ನಿರ್ಜನವಾಗಿದೆ. ಹಾದಿಯ ಎರಡೂ ಕಡೆಗಳಲ್ಲೂ ಇದ್ದ ಈಚಲಮರಗಳು ಸೊಕ್ಕು ಬಂದವರಂತೆ ಊಗಾಡುತ್ತಿವೆ.

ಮಧ್ಯಪ್ರಾಯವನ್ನು ಮೀರಿದ, ಕಿರು ನರೆಗೂದಲಿನ, ಎಳೆಯ ಮುದುಕನೊಬ್ಬನು ಶಿವನಗುಡಿಗೆ ಕಾಲೆಳೆದುಕೊಂಡು ಹೋಗುತ್ತಿದ್ದಾನೆ. ಶಿವನಗುಡಿಯನ್ನು ಸೇರಿದ ಮೇಲೆ ದೇವರಿಗೆ ಅಡ್ಡಬಿದ್ದು ಏನೇನನ್ನೋ ಹೇಳಿಕೊಳ್ಳುತ್ತಿದ್ದಾನೆ.

ಸ್ವಲ್ಪ ಹೊತ್ತಾಗಿರಬಹುದು. ಅದೇ ಹಾದಿಯಲ್ಲಿ ದಾಸಯ್ಯನೊಬ್ಬನು ಶಿವನಗುಡಿಯತ್ತ ನಡೆದುಹೋಗುತ್ತಿದ್ದ. ಈಚಲ ಮುಳ್ಳೊಂದು ಅವನ ಅಂಗಾಲಿಗೆ ತಾಕಿದಾಗ 'ಅಯ್ಯಯ್ಯೊ!' ಎಂದು ಒಮ್ಮೆ ಕಿರುಲಿದ. ನಂತರ ಬಗ್ಗಿ ಮುಳ್ಳನ್ನು ತೆಗೆದಾಗ ಪಕ್ಕದಲ್ಲೇ ಸರಸರ ಶಬ್ದ ಆದ ಹಾಗಾಯ್ತು. ಹಾವಾಗಲಿ, ಕಾಡು ಜಂತುಗಳಾಗಲಿ ಹತ್ತಿರ ಇರಬಹುದೇನೋ ಎನ್ನಿಸಿತು. ದಾಸಯ್ಯನಿಗಿರುವ ಆಯುಧಗಳು ಶಂಖ, ಜಾಗಟೆ! ಬಾಯಿಗೆ ಶಂಖದ ತುದಿಯನ್ನಿಟ್ಟು ಭೋಂ, ಭೋಂ, ಊದಿದ. ಜಾಗಟೆಯನ್ನೂ ಬಾರಿಸುತ್ತ ಮುಂದಕ್ಕೆ ನಡೆದ.

ಶಿವಾಲಯದಲ್ಲಿದ್ದ ಮುದುಕನಿಗೆ ಶಂಖದ ಶಬ್ದ ಕೇಳಿಸಿತು, ಜಾಗಟೆಯ ಟಂಠಣವೂ ಕೇಳಿಸಿತು. "ಯಾರೂ ಇಲ್ಲಿಗೆ ಬರುಲ್ಲ. ಇಲ್ಲಿ ಕೂತು ಯೋಚನೆ ಮಾಡೋಣ. ಮನೇಗೆ ಬಂದಿರುವ ಕುದುರೆಯಾಳು ಸುಬೇದಾರ ಕಡೆಯ ಗೂಢಚಾರನೋ ಎಂದು ಅನುಮಾನ ಬಂದಿದೆ. ಅಂದ ಮೇಲೆ ಬಲು ಹುಷಾರಾಗಿದ್ದು ರುಜುವಾತು ಸಿಕ್ಕಿದ ಹಾಗೆ ಮಾಡಿಕೋಬೇಕು. ಹೇಗೆ ಮಾಡೋದು ಅಂತ ಶಿವನ ಪಾದದಡಿ ಕೂತು ಯೋಚಿಸ್ತಾ ಇದ್ದರೆ, ಇದ್ಯಾವುದೋ ಶಬ್ದ ಆಯಿತಲ್ಲ! ಏನು ಮಾಡಬೇಕು ಅಂತ ಇನ್ನೂ ಹೊಳೀಲಿಲ್ವಲ್ಲ" ಎಂದುಕೊಳ್ಳುತ್ತಾ ಶಿವನ ಗುಡಿಯಿಂದ ಹೊರಬಿದ್ದ.

ಹತ್ತು ಹೆಜ್ಜೆ ಹಾಕೋ ಅಷ್ಟರಲ್ಲಿ ಎದುರಿಗೆ ದಾಸಯ್ಯ ಸಿಕ್ಕಿದ.

"ಈ ಹೊತ್ತಿನಾಗ, ಒಂಟಿಯಾಗಿ ಗುಡೀಗೆ ಯಾಕಾರ ಬಂದ್ರಿ ತಳವಾರ್ರ? ನಂಗ್ಹೇಳಿದ್ದರೆ ಜತಗೆ ಬರ್ತಿದ್ನಲ್ಲಾ!" ಎಂದ ದಾಸಯ್ಯ, ತಳವಾರರಿಗೆ ಕೈ ಮುಗಿಯುತ್ತಾ.

"ಮನಸ್ಸಿಗ್ಯಾಕೋ ಬೇಜಾರು ಬಿದ್ದಿತ್ತು. ಮನೆ ದೇವರ ಹತ್ತಿರ ದುಃಖ ತೋಡಿಕೊಂಡರೆ ಸಮಾಧಾನ ಬರುತ್ತೇನೋ ಅಂತ ಬಂದಿದ್ದೆ", ಮನಸ್ಸಿಗೆ ನೆಮ್ಮದಿ ಇಲ್ದೇ ಇರೋವಾಗ ಏನು ಕೆಲಸ ಮಾಡಿದರೂ ತಪ್ಪಾಗಬಹುದು. ಶಿವನ ಗುಡೀಲೇನೂ ಶಕುನ ಬೀಳಲಿಲ್ಲ. ಹಲ್ಲಿ ನುಡೀಲಿಲ್ಲ. ಹೂವು ಬೀಳಲಿಲ್ಲ. ಮುಂಗಸಿ ಕಾಣಲಿಲ್ಲ. ಅದೇ ಯೋಚನೆ ಆಗಿತ್ತು. ಹೋಗಲಿ! ಈಗ ನೀನಾರೂ ಶಕುನ ನುಡಿ. ಕೈ ಹಿಡಿದ ಕೆಲಸ ಆಗ್ತದಾ?" ಎಂದರು ತಳವಾರರು.

ದಾಸಯ್ಯನಿಗೆ ಒಂದು ಕ್ಷಣ ತಳಮಳ ಆಯಿತು. "ಶಿವನೇ ಶಕುನ ನುಡಿಯು ಇವ್ವಾಗ, ನಾನೆಂತು ಶಕುನ ಹೇಳ್ಲಿ?" ಅಂತ ಅನ್ನಿಸಿತು. "ಏನಾರ ಹೇಳಿದರೆ ತಳವಾ ಸಂಕಟ ಹೆಚ್ಚಾದೀತೋ" ಎಂದು ಅನ್ನಿಸಿತು. "ಆದರೆ ಶಿವನಿಚ್ಛೆ! ನನ್ನ ನಾಲಿಗೆ ಮೇ ದನಿ ಹೊಡಿಸಿದರೆ ಆಗಬಹುದಲ್ಲಾ" ಎಂದು ಅಂದುಕೊಂಡು,

"ತಳವಾರ್ರೇ! ಶಿವನಿಚ್ಛೆಯಂತೆ ಎಲ್ಲ ಸಮ ಆಗ್ತದೆ" ಎಂದು ಹೇಳಿದ.

ಇದನ್ನು ಕೇಳಿಯೇ ತಳವಾರರಿಗೆ ಖುಷಿಯಾಯ್ತು. ಮುಖದ ಮೇ ಬಿರಿಗೆರೆಗಳೆಲ್ಲಾ ಮಾಯವಾದುವು. ಬಿರಿದುಬಿಟ್ಟ ದಾಳಿಂಬ್ರೆ ಹಣ್ಣಿನಂತೆ ಅವರ ಬಾ ಆಸೆಯಿಂದ ತೆರೆದು, ಎಲಡಿಕೆ ರಂಗಿನ ಹಲ್ಲುಗಳೆಲ್ಲವೂ ಕಾಣಿಸಿದುವು. ಮಳೆ ಬಂ ಎಂದು ಕೆನ್ನೆಲದ ಮೇಲೆ ಕುಣಿದಾಡುವ ನವಿಲಿನ ಗರಿಗಳಂತೆ ಅವರ ಮೀಸೆ ತುದಿಗಳೆರಡೂ ತುಳುಕಾಡಿದುವು.

"ನಿನ್ನ ಬಾಯಿಗೆ ಬೆಲ್ಲ ಬೀಳಲಿ" ಎಂದು ತಳವಾರರು ಊರ ಕಡೆಗೆ ಬೇಗ ಬೇಗ ನಡೆದುಹೋದರು.

ದಾಸಯ್ಯನಿಗೆ ಇದೆಲ್ಲಾ ಬಲು ಮೋಜಾಗಿ ಕಾಣಿಸಿತು. "ನಾನೆಂತಹ ಶಕುನ ಹೇಳಿದ್ದು. ಶಿವನಿಚ್ಛೆಯಂತೆ ಎಲ್ಲ ಸಮ ಆಗ್ತದೆ ಅಂತ. ಶಿವನಿಚ್ಛೆ ಇದ್ದರೆ ಎಲ್ಲಾನೂ ನೆಲಸಮ ಆಗಬಹುದಲ್ಲ! ಆದರೂ ತಳವಾರರು ಇಷ್ಟಕ್ಕೇ ಹಿರಿಹಿಗ್ಗಿದರಲ್ಲಾ! ಇದೇನೇ ಏನೋ ಶಿವನಿಚ್ಛೆ!" ಎಂದುಕೊಂಡ. ಶಿವನಗುಡಿಗೆ ಹೋಗಿ, ದೇವರಿಗೊಮ್ಮೆ ಅಡ್ಡಬಿದ್ದು, ತಾನೂ ಅಂಗಳದಲ್ಲಿ ಒರಗಿದ. "ಶಿವನಿಚ್ಛೆ!" ಎಂದು ಕನವರಿಸಿಕೊಂಡಾಗ, ಹಾರಾಡುತ್ತಿದ್ದ ಬಾವಲಿಗಳು ಅರೆಕ್ಷಣ ಹಾರಾಟ ನಿಲ್ಲಿಸಿ, ತೆಪ್ಪನೆ ಸೂರಿಗೆ ನೇತು ಬಡಿದುಕೊಂಡುವು.

* * * *

ಕೈಸಾಲೆಯಲ್ಲಿ ಕುಳಿತು ಮುನಿಯಪ್ಪ ಎತ್ತುಗಳಿಗೆ ಜೋಳದ ಕಡ್ಡಿಗಳನ್ನು ತಿನ್ನಿಸುತ್ತಿದ್ದ. ಸೋಮವಾರ ಸಂಜೆ, ನೆರಳಾಗಲೇ ಉದ್ದುದ್ದ ಬೀಳುತ್ತಿತ್ತು. ಪೇಟಾ ಕಟ್ಟಿಕೊಂಡು, ಕೆಂಪು ರೇಷ್ಮೆ ಚೌಕ ಹೊದ್ದಿದ್ದ ಬಚ್ಚೇಗೌಡ ಮನೆಯೊಳಗಿನಿಂದ ಹೊರಕ್ಕೆ ಬಂದು ಮುಂದೆ ನಡೆಯುತ್ತಿದ್ದ.

"ಅಪ್ಪಾ! ಈ ವ್ಯಾಳ್ಯಾಗ ಎತ್ತ ಹೊಂಟ್ರಿ? ಶಿವನಗುಡೀಗೆ ಹೋಗೋದಾದರೆ ನಾನು ಬರ್ತೀನಿ, ಸೋಮವಾರ ಅಲ್ವಾ?" ಎಂದು ಮುನಿಯಪ್ಪ ತಂದೆಯನ್ನು ಕೇಳಿದ.

"ಎತ್ಲಾಗಾದರೂ ಹೊರಡೋವಾಗ ಎತ್ತ ಹೊಂಟೆ ಅಂತ ಕೇಳ್ಬಾರ್ದು ಅಂತ ಎಷ್ಟು ಸಲ ನಿಂಗೆ ಹೇಳಿಲ್ಲಾ ಮಗ! ಅಪಶಕುನ ಅದು, ಇನ್ಮ್ಯಾಗೆ ಹಂಗೆ ಕೇಳ್ಬೇಡ" ಎಂದು ಬಚ್ಚೇಗೌಡ ಹೇಳಿದ. ಹೇಳುತ್ತಾ ಹಿಂತಿರುಗಿ ಕೈಸಾಲೆಗೆ ಬಂದು ಎರಡುಕ್ಷಣ ಕೂತುಕೊಂಡು, "ಅಪಶಕುನ ಆದಾಗ ಮಗಾ! ಸ್ವಲ್ಪ ಹೊತ್ತು ಕುಂತು ಹೊರಟರೆ ಆಯ್ತು; ಶಿವನ ಗುಡೀಗೆ ಹೊಂಟೋರು ತಲೆಗೆ ಪೇಟಾ ಸುತ್ತಿಕೊಂಡು ಹೋಗ್ತಾರ? ಅಷ್ಟೂ ತಿಳೀಲಿಲ್ವಾ? ಅರಳೀಕಟ್ಟೆ ಕಾಳೇಗೌಡರು ಹೇಳಿಕಳಿಸಿದ್ದರು. ಅಲ್ಲಿಗೆ ಹೋಗಿ



ಬರ್ತೀನಿ" ಎಂದು ಹೇಳುತ್ತಾ ಬಚ್ಚೇಗೌಡನು ಎದ್ದು ನಿಂತ, ಮುಂದಕ್ಕೆ ಹೊರಡಲು ಕಾಲು ಹಾಕಿದ.

"ಒಂದು ಚಣ ಇರಪ್ಪಾ! ಕರೀಮೋಡ ಪಡುವಲಾಗೆ ಹೆಪ್ಪುಗಟ್ಟೈತಿ, ದೊಡ್ಡಗೌಡರ ಮನೆಗೆ ಹೋದರೆ ಬರೋದು ಎಷ್ಟು ವ್ಯಾಳೆ ಆಗ್ತದೋ ಏನೋ? ಕೊಡೆ ತಂದುಕೊಡ್ತೀನಿ" ಎಂದು ಮುನಿಯಪ್ಪ ಹೇಳಿ, ಮನೆಯೊಳಕ್ಕೆ ಹೋಗಿ, ಕೊಡೆಯೊಂದನ್ನು ತಂದು ತಂದೆಯ ಕೈಗೆ ಕೊಟ್ಟ.

* * * *

ಮಗನನ್ನೇ ಆದರದಿಂದ ನೋಡುತ್ತಾ, ಕೊಡೆ ಹಿಡಿದು ಬಚ್ಚೇಗೌಡನು ಅರಳಿಕಟ್ಟೆಯ ಗೌಡರ ಮನೆಯ ಕಡೆಗೆ ಹೊರಟ.

ಬೈಸಾರೆ ಎದ್ದು ಮುನಿಯಪ್ಪ ಅಂಬಲಿ ಕುಡಿದು, ಎತ್ತುಗಳನ್ನು ಕೊಟ್ಟಿಗೆಯಿಂದ ಬಿಚ್ಚಿಕೊಂಡು ಬಂದು, ಇನ್ನೇನು ಹೊಲದ ಕಡೆಗೆ ಹೊರಡಬೇಕು, ಆ ಹೊತ್ತಿಗೆ ಸರಿಯಾಗಿ ಕೆರೆ ಕಡೆ ಹೋಗಿದ್ದ ಬಚ್ಚೇಗೌಡ ಹಿಂತಿರುಗಿದ್ದ. ಮಗನನ್ನು ನೋಡಿ,

"ಈ ದಿನ ಹೊಲಕ್ಕೆ ಹೋಗೋದು ಬ್ಯಾಡಾ, ಮಗಾ! ನೆನ್ನೆ ಸಂಜೆ ಕಾಳೇಗೌಡರು 'ಬಚ್ಚಣ್ಣಾ! ನಾಳೆ ಸಂತೆ ಐತೆ, ಶಿವನ ದಯೆ ಇದ್ದರೆ ವ್ಯಾಪಾರ ಕೂಡಿ ಬರಬಹುದು. ಬೀರೂರಿಗೆ ಹೇರು ಕಳಿಸ್ಬೇಕಾದೀತು, ಗಾಡಿ ಎತ್ತುಗಳನ್ನ ಸಿದ್ಧಮಾಡಿಕೊಂಡಿರು" ಎಂದು ಹೇಳಿದರು. ಗಾಡಿ ಮೂಕಿ, ಕಡಾಣಿ ಎಲ್ಲಾ ಸರಿಯಾಗೈತೋ ನೋಡಿಕೋ. ಆಮ್ಯಾಗೆ ಮದ್ಯಾಹ್ನದ ಹೊತ್ತಿಗೆ ಸಂತೇಮಾಳದ ತಾಕ್ಕ ಬಾ' ಎಂದು ಬಚ್ಚೆಗೌಡ ಹೇಳಿದ.

"ಅಪ್ಪಾ! ಹಂಗಿದ್ದರೆ, ಚೌಕಳಿ ಎತ್ತನ್ನು ಸಂತೆಮಾಳಕ್ಕೆ ಹೊಡಕೊಂಡು ಹೋಗಿ ಲಾಳ ಕಟ್ಟಿಸಿಕೊಂಡು ಬರ್ತೀನಿ, ನಿನ್ನೆಯೆಲ್ಲಾ ಯಾಕೋ ಕುಂಟ್ತಾ ಇದ್ಹಾಂಗಿತ್ತು" ಎಂದು ಮುನಿಯಪ್ಪ ಹೇಳಿದಾಗ, "ಹಂಗೇಮಾಡು ಮಗಾ!" ಎಂದು ಬಚ್ಚೇಗೌಡ ಒಪ್ಪಿಗೆಯಿತ್ತ.

ಗಾಡಿಯ ಮೂಕಿ, ಗಾಲಿ, ಕಡಾಣಿಗಳನ್ನೆಲ್ಲಾ ಪರೀಕ್ಷೆ ಮಾಡಿ, ಕೀಲೆಣ್ಣೆ ಹಾಕುವಾಗ ಹತ್ತು ಗಂಟೆಯಾಗಿತ್ತು. ಚೌಕಳಿ ಎತ್ತನ್ನು ಹೊಡೆದುಕೊಂಡು ಸಂತೆಮಾಳಕ್ಕೆ ಮುನಿಯಪ್ಪ ಹೊರಟ. ಬೀರೂರು ರಸ್ತೆ ಅಂಚಿನಲ್ಲಿ ಲಾಳ ಕಟ್ಟೋರು ಕೂಡುವ ವಾಡಿಕೆ. ಅತ್ತ ಮುನಿಯಪ್ಪ ಹೋಗಿ, "ಬಲ ಮುಂಗಾಲಿಗೆ ಲಾಳ ಕಟ್ಟಾ! ಯಾಕೋ ಕುಂಟ್ತಾ ಇದೆ" ಎಂದು ಹೇಳಿದ. "ಭಾರಿ ಎತ್ತು ಇದು, ಹೆಡೆಮುರಿ ಕಟ್ಟಿ ಬೀಳಿಸೋದಕ್ಕೆ ಎರಡು ಆಳು ಬೇಕು" ಎಂದು ಲಾಳ ಕಟ್ಟುವವ ಗೊಣಗಿದ. ಮುನಿಯಪ್ಪ ನಕ್ಕ.

"ಎತ್ತೇನೋ ಭಾರಿ ಹೌದು ಕಣ್ಲಾ! ಆದರೆ ನಾ ಹೇಳ್ದ್ಹಂಗೆ ಕೇಳ್ತದೆ. ಹೋರಿಯಾಗಿದ್ದಾಗಿಂದ ನನ್ನ ಕೈಲೇ ಜೋಳದಕಡ್ಡಿ ತಿಂದಿದೆ. ನಾನೇ ಹೆಡೆಮುರಿ ಕಟ್ಟಿ ಬೀಳಿಸ್ತೀನಿ, ಹಗ್ಗ ತಾ" ಎಂದು ಮುನಿಯಪ್ಪ ಹೇಳಿದ. ಲಾಳದವನ ಹತ್ತಿರ ಹಗ್ಗವನ್ನು ತೆಗೆದುಕೊಂಡು ಎರಡೆರಡೂ ಕಾಲುಗಳಿಗೂ ಕಟ್ಟಿ, ಲೊಟ್ಟೆ ಹೊಡೆಯುವಷ್ಟು ಕ್ಷಣದೊಳಗೆ ಎತ್ತನ್ನು ನೆಲದ ಮೇಲೆ ಕೆಡವಿದ್ದ.

ಗೊರಸನ್ನು ತೊಳೆದು, ಹಸನಾಗಿ ಹೆರೆದು, ಲಾಳ ಕಟ್ಟುಕ್ಕೆ ಶುರು ಮಾಡಿದ ಲಾಳ

ಕಟ್ಟುವವ. "ಹೋದಸಾರಿ ಲಾಳ ಕಟ್ಟಿದೋನು ಯಾವನೋ ಅಡ್ಡಕಸಬಿ ಕಣ್ಲಾ" ಎಂದು ಹಳೆ ಲಾಳವನ್ನು ತೆಗೆದು ಎಸೆಯುತ್ತಾ, "ಮೂರೇ ಮೊಳೆ ಜಡೆದವ್ನೆ ಹೆಂಗಾರ ಎತ್ತಿನ ಭಾರ ಸಮನಾಗಿ ಲಾಳದ ಮೇಲೆ ಬಿದ್ದಾತು. ಐದಾದರೂ ಹೊಡೀಲೇಬೇಕು. ಎಂಥಾ ಲಾಳ ಕಟ್ಟವ್ನೆ? ಅರಸಿನಗುಂಡಿ ಲಾಳ ಕಟ್ಟಿದ್ರೆ ಮೂರು ವರ್ಷ ಆದರೂ ಸವೆಯೋದಿಲ್ಲ!" ಎಂದು ಕಸುಬಿನವರು ಹೇಳುವ ರೀತಿಯಲ್ಲೇ ಲಾಳದವ ಟೀಕೆ ಮಾಡುತ್ತಾ ತನ್ನ ಕೆಲಸವನ್ನು ಮುಂದುವರೆಸಿದ.

"ಕುಲದೋರನ್ನ ಬೈಯದೇ ಕೆಲ್ಸ ಮಾಡುಕ್ಕೆ ಬರುಲ್ವಾ?" ಎಂದು ಮುನಿಯಪ್ಪ ಕೇಳಿದ.

"ನಮ್ಮ ಕುಲದೋನು ಈ ಕೆಲ್ಸ ಮಾಡಿರ್ಲಾರಾ! ಅದಕ್ಕೇ ಹೇಳಿದೆ. ಹೊಸ ಲಾಳಕಟ್ಟೋವಾಗ ಎಂಥಾ ಕೆಲಸಕ್ಕೆ ಎತ್ತನ್ನು ಉಪಯೋಗಿಸ್ತೀರಿ ಎಂದು ಕೇಳ್ಬೇಕು. ಹೊಲ ಉಳ್ತದಾ, ಗದ್ದೆ ಉಳ್ತದಾ, ಗಾಡೀಗೆ ಕಟ್ತೀರಾ, ಗಾಣಕ್ಕೆ ಕಟ್ಟಿ ತಿರುಗಿಸ್ತೀರಾ ಅಂತ ಕೇಳಬೇಡವಾ? ನಾನಾರೂ ಕೇಳ್ತೀನಿ, ಕೇಳಿ ಆಮೇಲೆ ಸರಿಯಾದ ಲಾಳ ಕಟ್ತೀನಿ" ಎಂದ ಲಾಳದವ.

"ಹೇರು ತುಂಬಿದ ಗಾಡೀಗೆ ಕಟ್ಟಿ, ದೂರದ ಘಾಸಲೆಗೆ ಹೊಡೀತೀವಿ, ಇಲ್ದೇ ಇದ್ರೆ ಹೊಲ ಉಳುಕ್ಕೆ ಕಟ್ತೀವಿ. ಅದಕ್ಕೆ ಸರಿಯಾದ ಲಾಳ ಕಟ್ಟು" ಎಂದ ಮುನಿಯಪ್ಪ.

"ದಾರೀ ನಡೆದರೂ ಸೈ, ಹೊಲ ಉತ್ತರೂ ಸೈ, ಒಂದೇ ತರಹ ಲಾಳ ಆದೀತು. ಅರಸಿನಗುಂಡಿಯ ಕರೀಲಾಳ ಕಟ್ಟಿದರೆ ಸಮನಾದೀತು. ದುಗ್ಗಾಣಿ ಹೆಚ್ಚು ಖರ್ಚಾದರೂ ಬಾಳಿಕೆ ಬರುತ್ತೆ" ಎಂದ ಲಾಳದವ.

"ಅದಕ್ಕಾ ಇಷ್ಟೆಲ್ಲಾ ಮಾತು..." ಎಂದ ಮುನಿಯಪ್ಪ.

"ಹಂಗಾದರೆ ಕರೀಲಾಳ ಕಟ್ಟುಲ್ಲ. ದುಗ್ಗಾಣಿ ಮಿಗಿಸಿಕೊ" ಎಂದ ಲಾಳದವ. ಅಷ್ಟಕ್ಕೇ ನಿಲ್ಲಿಸದೆ, ಮನಸ್ಸಿನ ದುಗುಡವನ್ನು ತಡೆಯಲಾರದೆ "ನಿಮ್ಮಂಥೋರಿಗೆ ಶಿವ ಇಂಥಾ ಚೆಂದದ ಎತ್ತನ್ನು ಯಾಕಾರೋ ಕೊಟ್ಟನೋ? ಲಾಳದ ಖರ್ಚು ನೋಡೋರಿಗೆ ಎತ್ತಿನ ಒಡೆತನ ಯಾಕಾರೂ ಸಿಕ್ತದೋ" ಎಂದೂ ಹೇಳಿದ.

ಮುನಿಯಪ್ಪನ ಮನಸ್ಸಿಗೆ ಚುಟಿಗೆ ಹಾಕಿದಂತಾಯಿತು. ತನ್ನ ಎತ್ತನ್ನು ಇನ್ನೊಬ್ಬ ಮೆಚ್ಚಿ, ಹೆಚ್ಚು ಆದರದಿಂದ ಮಾತನಾಡಿದರೆ ಮುನಿಯಪ್ಪನಿಗೆ ಚುರುಕು ತಟ್ಟಿದ್ದು ಸಹಜವೇ ಆಗಿತ್ತು.

"ಕರೀಲಾಳನೇ ಕಟ್ಲಾ! ದುಗ್ಗಾಣಿ ಮುಖ ನೋಡೋನು ನಾನಲ್ಲ! ಹೆಂಗೂ ಈ ರಾತ್ರಿ ಬೀರೂರಿಗೆ ಗಾಡಿ ಕಟ್ಟಬೇಕಾದೀತು. ನಾಲ್ಕು ಹರಿದಾರಿ ಹೋಗಿ, ತಿರುಗಿ ಬರಲೇಬೇಕಾದೀತು. ಪಸಂದ್ ಲಾಳಾನೇ ಕಟ್ಟು" ಎಂದ ಮುನಿಯಪ್ಪ.

"ನಾಲ್ಕು ಹರಿದಾರಿ! ಹೋಗಿ ಬರೋದು ಎಂದರೆ ಎಂಟು ಹರಿದಾರಿ! ಏನಾರ ಬೀರೂರತನಕ ಹೇರು ಸಾಗಿಸಬೇಕಾ ಒಂದೇ ರಾತ್ರೀಲಿ" ಎಂದ ಲಾಳದವ.

"ಹೂ" ಎಂದ ಮುನಿಯಪ್ಪ.



"ಒಂದೇ ರಾತ್ರೀಲಿ ಸಾಗಿಸಿ, ಹಿಂತಿರುಗಬೇಕಾ? ಈ ಎತ್ತು ತಡೆದಾತು. ಬೇರೆ ಎತ್ತಿಗೆ ತ್ರಾಸಾದೀತು" ಎಂದು ಲಾಳದವ ಲೊಚಗುಟ್ಟಿದ.

"ಎಲ್ಲಾರೂ ಕೊಡೋ ಬಾಡಿಗೆಗಿಂತ ಮೂರರಷ್ಟು ಅರಳೀಕಟ್ಟೆ ಗೌಡರು ಕೊಡೋವಾಗ ಹಂಗೆ ಮಾಡದಿದ್ರೆ ಆದಾತಾ?" ಎಂದ ಮುನಿಯಪ್ಪ.

"ಹಂಗಾ!" ಎಂದು ರಾಗ ಎಳೆಯುತ್ತಾ ಲಾಳದವ ಕರೀಲಾಳಾನ ಕಟ್ಟಿದ. ಹಗ್ಗದ ಕಟ್ಟುಗಳನ್ನು ಬಿಚ್ಚಿದ. ಝುಟ್ಟಂತ ಎತ್ತು ಎದ್ದು ನಿಂತಿತು. ಎರಡು ಸಲ, ಕುಣಿಯೋರ ತರಹ ಕಾಲು ಝಾಡಿಸಿ ಹಾಕಿತು. ಮುನಿಯಪ್ಪನಿಗೆ ಖುಷಿಯಾಯ್ತು.

"ಬಲ್ ಪಸಂದ್ ಕಣ್ಲಾ" ಎಂದ ಮುನಿಯಪ್ಪ. ಕಸೆ ಅಂಗಿಯ ಒಳ ಜೇಬಿಂದ ಮೂರು ಹಣ ತೆಗೆದು ಲಾಳದವನಿಗೆ ಕೊಟ್ಟ. ಎತ್ತನ್ನು ಹೊಡೆದುಕೊಂಡು ಇನ್ನೇನು ಹೊರಡಬೇಕು!

ಆ ಹೊತ್ತಿಗೆ, ಆದವಾನಿ ಕಡೆಯೋರ ಹಾಗೆ ಇದ್ದ, ಕೋರೆ ರುಮಾಲು ಸುತ್ತಿಕೊಂಡಿದ್ದ ಇಬ್ಬರು ಯುವಕರು ಲಾಳದವನ ಹತ್ತಿರ ಬಂದರು. ನಾಲ್ಕು ಹೇಸರ ಕತ್ತೆಗಳನ್ನು ಹೊಡೆದುಕೊಂಡು ಬಂದಿದ್ದರು.

ಇದನ್ನು ನೋಡಿ ಮುನಿಯಪ್ಪ ಬಿರಿಬಿರಿ ನಕ್ಕ.

"ಏನ್ಲಾ! ಕತ್ತೆ ಕಾಲುಗಳಿಗೂ ಲಾಳ ಕಟ್ತೀಯಾ?" ಎಂದು ಮೂದಲಿಸಿ ನುಡಿದ ಮುನಿಯಪ್ಪ. ಕೋರೆ ರುಮಾಲಿನವರಿಬ್ಬರೂ ಮುನಿಯಪ್ಪನನ್ನ ದುರುದುರು ನೋಡಿದರು. ಲಾಳದವ ಅವರನ್ನು ದುರುದುರು ನೋಡಿದ. ಅವರಿಬ್ಬರೂ ತಲೆತಗ್ಗಿಸಿದರು. ಮುನಿಯಪ್ಪನ ಕಡೆಗೆ ತಿರುಗಿ, ಲಾಳದವ, "ಬಡವರ ಪಾಡೇ ಹಿಂಗೆ, ಕೆಲ್ಸ ಆಗಬೇಕಾದ್ರೆ, ಹೊಟ್ಟೆ ತುಂಬಿಕೋಬೇಕಾದ್ರೆ, ಕತ್ತೆಗಳ ಕಾಲು ಹಿಡೀಲೇಬೇಕು, ಲಾಳ ಕಟ್ಟಲೇಬೇಕು. ದೊಡ್ಡ ಮನುಷ್ಯರಾದರೆ ಕತ್ತೆ ಹಾಗಿರೋರ ಕಾಲು ಹಿಡಿದು ಕಾರ್ಯ ಸಾಧಿಸ್ಕೋತಾರೆ!" ಎಂದು ಹೇಳಿದ.

"ಹೌದು, ಕಣ್ಲಾ! ನೀ ಹೇಳಿದ್ದು ದಿಟ" ಎಂದು ಹೇಳಿ ಮುನಿಯಪ್ಪ ಎತ್ತನ್ನು ಹೊಡೆದುಕೊಂಡು ಹೊರಟುಹೋದ.

ಹೇಸರಕತ್ತೆಗಳ ಗೊರಸನ್ನು ಲಾಳದವನು ಪರೀಕ್ಷಿಸುತ್ತಾ, "ಇವಕ್ಕೆ ಹೊಸ ಲಾಳ ಏನೂ ಕಟ್ಟಬೇಕಾಗಿಲ್ಲ. ಲಿಂಗದಹಳ್ಳಿ ತನಕ ಸುಖವಾಗಿ ನಡೀತವೆ. ಅಲ್ಲಿಂದಾಚೆ ತುಂಕೂರು ಕಡೆಗೂ ಮೂರು ನಾಲ್ಕು ಗಾವುದ ಹೋಗಬಹುದು ಎಲ್ಲಿಂದ ತಂದ್ರಪ್ಪಾ! ಇಂಥಾ ಜಾತಿ ಹೇಸರ ಕತ್ತೆಗಳ್ನ" ಎಂದು ಹೇಳಿದ.

ಕೋರೆಪೇಟದ ಯುವಕರು ಗುಸುಗುಸು ಪಿಸುಪಿಸು ಮಾತಿನಲ್ಲಿ ಏನೇನು ವಿವರಗಳನ್ನೆಲ್ಲಾ ಹೇಳಿದರೋ, ಬಿಟ್ಟರೋ, ಲಾಳದವನಿಗೆ ಮಾತ್ರ ಕೇಳಿಸಿರಬೇಕು.

ಕೊತ್ವಾಲನ ಕಡೆಯ ಆಳು ಮಗನೊಬ್ಬ ಬಂದಾಗ ಮಾತು ನಿಲ್ಲಿಸಿದರು. ಬಂದವನು, "ತಳವಾರರ ಕುದುರೇಗೆ ಲಾಳ ಕಟ್ಟಬೇಕು. ಇನ್ನರ್ಧ ಗಂಟೆಯೊಳಗೆ ಅವರ ಮನೆ ತಾವಕ್ಕೆ, ಸಾಮಾನೆಲ್ಲಾ ತೊಗೊಂಡು ಬಾರೋ" ಎಂದು ಹೇಳಿದ.

ಹೇಳುತ್ತಿದ್ದಾಗಲೇ, ಸಂತೆಗೆ ತರಕಾರಿ ಬುಟ್ಟಿಯೊಂದನ್ನು ಹೊತ್ತುಕೊಂಡು ಜಗ್ಗೋಜ ಮಾರಲು ಹೋಗುತ್ತಿದ್ದ ಹೆಣ್ಣುಮಗಳನ್ನು ಕಂಡು, ಅವನೂ ಹಿಂದೆ ನಡೆದುಹೋದ.

ಲಾಳದವನು ಸಾಮಾನನ್ನೆಲ್ಲಾ ಕಟ್ಟಿಕೊಂಡು ತಳವಾರರ ಮನೆಗೆ ಹೊರಡುವಾಗ ಪುಟ್ಟ ಗಂಟೊಂದನ್ನು ಕೋರೆ ರುಮಾಲಿನವರ ಕೈಲಿ ಕೊಟ್ಟು "ನನ್ನೂರತಾವ ಹೋಗೋವಾಗ ಈ ಗಂಟನ್ನು ಮನೆಗೆ ತಲಪಿಸ್ಬಿಡಿ. ಕಲಾಯಿ ಹಾಕೋ ಸಾಮಾನೆಲ್ಲಾ ಇದೆ. ಹಳ್ಳಿಯಾಗೆ ಜೀವನಕ್ಕೆ ಸಹಾಯ ಮಾಡಾತು," ಎಂದು ಹೇಳಿದ.

ತಳವಾರರ ಮನೆಗೆ ಹೋದಾಗ, ಬೀದಿ ಬಾಗಿಲ ಬಳಿ ಇದ್ದ ಮಾವಿನ ಮರಕ್ಕೆ ಕುದುರೆಯನ್ನು ಕಟ್ಟಿದ್ದರು. ಆಳು ಮಗನೊಬ್ಬ ಅಲ್ಲೇ ಇದ್ದ. ತಳವಾರರ ಮನೇಲಿ ಕೆಲಸ ಮಾಡಿದರೆ, ಕೊಟ್ಟಿದ್ದೇ ಕೂಲಿ. ಅಂದ ಮೇಲೆ ಮಾಡೋ ಕೆಲಸ ಮಾಡೇಬಿಡೋಣ ಎಂದುಕೊಂಡು ಲಾಳದವನು ಆಳು ಮಗನನ್ನು "ಇದೇ ಕುದುರೇಗಾ ಲಾಳ ಕಟ್ಟಬೇಕಾದ್ದು ಎಂದ ಕೇಳಿದ. ಹೌದು ಎಂಬಂತೆ ಅವ ತಲೆಯಾಡಿಸಿದ. "ಹಾಗಾದರೆ ಕುದುರೇ ಕಾಲುಗಳನ್ನು ಸರಿಯಾಗಿ ಕಟ್ಟು, ಲಾಳದ ಸಾಮಾನು ಸರಿಮಾಡಿಕೋತೀನಿ" ಎಂದು ಲಾಳದವ ಹೇಳಿದ. "ಕುದುರೆ ಕಂಡರೆ ನಂಗೆ ಭಯಾಪ್ಪ!" ಎಂದ ಆಳುಮಗ. "ಹಂಗಾರ ಲಾಯದ ಆಳು ಯಾರು? ಅವನ್ನ ಕರಿ" ಎಂದ ಲಾಳದವ.

"ಅವ ಪಟೇಲರ ಮನೇ ತಾವ ಹೋಗಿದ್ದಾನೆ. ಬಂದ್ಬಿಡೋನು ಇಷ್ಟರಲ್ಲೇ" ಎಂದ ಆಳುಮಗ.

ಅಷ್ಟು ಹೊತ್ತಿಗೆ ತಳವಾರರು ಮನೆಯಿಂದ ಹೊರಕ್ಕೆ ಬಂದರು. ಲಾಳದವನು ಕೈ ಜೋಡಿಸಿದ. ಅವನನ್ನೇ ದಿಟ್ಟಿಸಿ ನೋಡಿದರು ತಳವಾರರು. ಏನೋ ಸಂಶಯ ಮೂಡಿತು ಅವರಿಗೆ. "ನಿನ್ನೆ ಸಂಜೆ ಏನಾರ ನಮ್ಮನೆ ಕಡೆ ಬಂದಿದ್ಯಾ?" ಎಂದು ಕೇಳಿದರು.

"ಇಲ್ಲವಲ್ಲಾ ಧಣೀರಾ! ಈಗತಾನೆ ಸಂತೆ ಮಾಳದಿಂದ ಇಲ್ಲಿಗೆ ಬಂದಿದ್ದು" ಎಂದ ಲಾಳದವ.

"ನಿನ್ನ ಸಾಮಾನು ಗಂಟು ಬಿಚ್ಚು" ಎಂದರು ತಳವಾರರು. ಲಾಳದವ ಗಂಟು ಬಿಚ್ಚಿ ಹರಡಿದ, ಹಳೇ ಲಾಳಗಳು, ಹೊಸ ಲಾಳಗಳು, ಅರ, ಮೊಳೆಗಳು, ಸುತ್ತಿಗೆ, ಚಿಮುಟಿ, ಉಪ್ಪುಕಾಗದ, ಗುಗ್ಗೆಕಡ್ಡಿ, ಇವೇ ಇದ್ದಿದ್ದು. ತಳವಾರರ ಮುಖ ಸ್ವಲ್ಪ ಹಗೂರಾಯ್ತು.

"ಲಾಳ ಕಟ್ಟು ಬೇಗ. ಫೌಜಿನ ಕುದುರೆ ಇದು, ಧೌಡಪು ಓಡೋದು ಹೆಚ್ಚು. ಎಂಟು ಮೊಳೆ ಜಡಿದು ಕಟ್ಟು" ಎಂದರು ತಳವಾರರು. "ಲಾಯದ ಆಳು ಇಲ್ಲ ಅಂತಾನೆ ಇವ. ಯಾರಾರೂ ಸಹಾಯಕ್ಕೆ ಇಲ್ದೇ ಇದ್ರೆ ಹೆಂಗೆ?" ಎಂದ ಲಾಳದವ ತಲೆ ಕೆರೆದುಕೊಳ್ಳುತ್ತಾ. "ಎಲ್ಲಿ ಹೋದ ಅವ?" ಎಂದು ಕಾತರತೆಯಿಂದ ತಳವಾರರು ಕೇಳಿದರು. "ಪಟೇಲರ ಮನೆಗೆ ಬೈಸಾರೇನೆ ಹೋದ ಬುದ್ಧಿ; ಇಷ್ಟೊತ್ತಿಗೆ ಬಂದ್ಬಿಡೋನು!" ಎಂದು ಆಳುಮಗ ಹೇಳುತ್ತಿದ್ದಾಗಲೇ, ಲಾಯದ ಆಳೂ ಬಂದ. "ಎಲ್ಲಿ ಹೋಗಿದ್ಯೋ" ಎಂದು ತಳವಾರರು ರೇಗುತ್ತ ಕೇಳಿದರು. "ಪಟೇಲರ ಮನೆಗೆ ಹೋಗಿದ್ದೆ, ಸ್ವಂತ ಕೆಲ್ಸ ಇತ್ತು" ಎಂದು ಸಮಾಧಾನವಾಗೇ ಅವನು ಉತ್ತರ ಕೊಟ್ಟ.





ತಳವಾರರು ಸಪ್ಪಗೆ "ಲಾಳ ಕಟ್ಟೋನು ಬಂದಿದ್ದಾನೆ. ಸಹಾಯ ಮಾಡು" ಎಂದು ಹೇಳಿ ಮನೆಯೊಳಕ್ಕೆ ಹಿಂತಿರುಗಿದರು.

"ಎಲಾ! ಲಾಯದ ಆಳು ಹೀಂಗೆ ಆಡಿದರೆ, ತಳವಾರರು ತೆಪ್ಪಗಿದ್ದರಲ್ಲಾ! ಎಲ್ಲಾರ ಮೇಲೂ ಉರಿದು ಬೀಳೋರು ಹಿಂಗ್ಯಾಕಾದರು" ಎಂದು ಆಳುಮಗ ಕಕಪಿಕಿಯಾಗಿ ನೋಡುತ್ತಿದ್ದ.

* * * *

ಸಂತೇಮಾಳದಲ್ಲಿ ವ್ಯಾಪಾರವೆಲ್ಲಾ ಹೆಚ್ಚು ಕಡಿಮೆ ಮುಗಿದಿತ್ತು. ಕಾಳೀಗೌಡರ ಅರಳೀಕಟ್ಟೆ ಹತ್ತಿರ ನಿಲ್ಲಿಸಿದ್ದ ಎರಡು ಒಂಟೆತ್ತಿನ ಗಾಡಿಗಳಲ್ಲೂ ಹತ್ತಿ ಮೂಟೆಗಳನ್ನು ಮುನಿಯಪ್ಪ ಅರ್ಧದಷ್ಟು ತುಂಬಿದ್ದ. ತಾನೇ ಹೊತ್ತು ತಂದಿದ್ದ, ಅರಳಿ ಮೂಟೆಯೊಂದನ್ನು ಆಗತಾನೆ ಬಂದ ಬಚ್ಚೇಗೌಡ ಮೊದಲ ಗಾಡಿಗೆ ಹಾಕಿ, "ತಳವಾರರು ಅಳಿಯಂದಿರಿಗೆ ಅಂತ ನವಿಲು ಹತ್ತಿ ಕಳಿಸವ್ರೆ. ಅರಿಶಿನದ ಗುರ್ತು ಹಚ್ಚಿವ್ನಿ, ಬೀರೂರಾಗೆ ಇಳಿಸೋವಾಗ ನೆಪ್ತಿ ಕೊಡು ಮಗಾ!" ಎಂದು ಹೇಳಿದ. ಹೇರು ತುಂಬುವುದನ್ನು ತಾನೇ ನಿಂತು ಸುಪರ್ದು ಮಾಡುತ್ತ ನಿಂತ.

* * * *

ಗೋವಿಂದಾ.... ಗೋ... ವ್ಹಿಂದ!
ಆದಿಮಧ್ಯಾಂತ ರಹಿತಾ – ಗೋವಿಂದಾ... ಗೋವ್ಹಿಂದ!
ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕಾ
ಗೋವಿಂದಾ... ಗೋ... ವ್ಹಿಂದ!
ವೆಂಕಟ್ರಮಣ ಸ್ವಾಮೀ
ಗೋವಿಂದಾ... ಗೋ...ವ್ಹಿಂದ!
ಹರ್ಕೆಮರ್ತರೆ, ಕರುಳ್ನೇ ಕುಯ್ಯುವ
ಗೋವಿಂದಾ.... ಗೋ...ವ್ಹಿಂದ!

ಎಂದು ಭಜಿಸುತ್ತಾ ದಾಸಯ್ಯನೊಬ್ಬ, ಜಾಗಟೆ ಬಾರಿಸುತ್ತಾ ಅತ್ತ ಬಂದ. ಬಚ್ಚೇಗೌಡ ಹಿಂತಿರುಗಿ ನೋಡಿದ. ಭರ್ಜರಿ ನಾಮಗಳನ್ನು ಹಣೆ ತುಂಬ ಧರಿಸಿದ, ಬಲತೋಳಿನಿಂದ ಶಂಖವನ್ನು ಇಳಿಬಿಟ್ಟಿದ್ದ, ಎಡಗೈಯಲ್ಲಿ ಜಾಗಟೆ ಹಿಡಿದಿದ್ದ ದಾಸಯ್ಯ ಹಳದಿ ಪಂಚೆಯನ್ನುಟ್ಟು, ಹಳದಿ ಹೊದಿಕೆಯನ್ನು ಹೊದ್ದಿದ್ದ. ದಾಸಯ್ಯ ತಿರುಪತಿಗೆ ಹೊರಟಿದ್ದ ಎಂದು ಸುಲಭವಾಗಿ ತಿಳಿಯುತ್ತಿತ್ತು.

"ತಿರುಪತೀಗೆ ಒಬ್ಬನೇ ಹೊಂಟ್ಹಾಂಗಿದೆ. ದಾಸಯ್ಯ! ಯಾವೂರು ನಿಂದು?" ಎಂದು ಬಚ್ಚೇಗೌಡನು ಕೇಳಿದ.

"ದಾಸಯ್ಯನ್ನ ಯಾವ ಊರು ಅಂತ ಕೇಳ್ತೀರಲ್ಲಾ ಗೌಡ್ರೇ! ಇದ್ದಲ್ಲೇ ನನ್ನೂರು. ವೆಂಕಟ್ರಮಣನ ಹತ್ತಿರಕ್ಕೆ ಹೋಗೋವಾಗ ಜತೆಗೆ ಯಾರನ್ನು ತರಲಿ? ಹೆಂಡ್ರಿಲ್ಲ ಮನೆಯಿಲ್ಲ. ಒಂಟಿ ಬಂದೆ, ಒಂಟಿ ಹೋಗ್ತೀನಿ, ನಂಟ ನನಗೆ ವೆಂಕಟ್ರಮಣ ಒಬ್ಬನೇ!

ನಿಮ್ದೇನಾರ ಮುಡುಪಿದ್ದರೆ ಕೊಡ್ರಿ. ತಿಮ್ಮಪ್ಪನ ಹುಂಡೀಗೆ ಹಾಕ್ತೀನಿ, ಹಂಗೇ ಏನಾರ ಭಿ... ಹಾಕಿದರೆ ಉಂಡು ಮುಂದೆ ಹೋಗ್ತೀನಿ" ಎಂದ ದಾಸಯ್ಯ.

"ಮಗಾ! ಮನೆಗೆ ಹೋಗಿ ಅವ್ವನ ತಾವ ಮುಡುಪುಗಂಟು ಈಸ್ಕೊಂಡು ಬಾ" ಎಂದು ಬಚ್ಚೇಗೌಡ ಹೇಳಿದಾಗ, ಮುನಿಯಪ್ಪ ಮನೆಯ ಕಡೆಗೆ ಹೊರಟ.

"ಯಾವ ಊರು ಮಾರ್ಗವಾಗಿ ತಿಮ್ಮಪ್ಪನ ತಾವ್ಕ ಹೋಗ್ತಿ, ದಾಸಯ್ಯ?" ಎಂದು ಬಚ್ಚೇಗೌಡ ಹೇಳಿದಾಗ, ದಾಸಯ್ಯ ಅಲ್ಲೇ ಕುಳಿತು ಎಲಡಿಕೆ ಚೀಲವನ್ನು ತೆಗೆದು, ಎರಡು ಎಲೆ, ಅಡಿಕೆ ಸುಣ್ಣದ ತುಂಡೊಂದನ್ನೂ ಬಾಯಿಗೆ ಹಾಕಿಕೊಂಡು ಜಗಿದು, ವಸಡಿಗೆ ಒತ್ತರಿಸಿ, "ಬೀರೂರಿಗೆ ಮೊದಲ್ಹೋಗಿ, ಅಲ್ಲಿಂದ ಕೋಲಾರದ ಕಡೆಗೆ ಹೋಗಿ, ಮುಳಬಾಗಿಲ ನೋಡಿಕೊಂಡು ಎರಡು ಮೂರು ತಿಂಗಳಲ್ಲಿ ತಿರುಪತಿ ಸೇರ್ತೀನಿ. ... ವ್ಯಾಳೆಗೆ ದೊಡ್ಡ ಪೂಜೈ ನಡೀತೈತೆ" ಎಂದು ಹೇಳಿದ.

"ಹಂಗಾ? ಹೇರು ಹೊತ್ತು ನಾವೂ ಬೀರೂರಿಗೆ ಈಗ ಹೊಂಟಿದ್ದೀವಿ. ಈಗಲೇ ನೀ ಹೊಂಟ್ರೆ ಗಾಡೀಲಿ ಜಾಗಾ ಮಾಡಿಕೊಡ್ತೀವಿ" ಎಂದ ಬಚ್ಚೇಗೌಡ.

"ಈಗ್ಲೇ ಹೊಂಟೆ ಗೌಡ್ರೆ! ಮಳೆಗಾಲ, ಛಳಿ ಕೊರೀತೈತೆ, ಹಾದಿ ನಡೆಯೋದು ತ್ರಾಸಾಗ್ತೈತೆ, ನಿಮ್ಗೆ ಪುಣ್ಯ ಬರ್ತದೆ. ಬೆಟ್ಟದ ಮ್ಯಾಗ ಉರುಳು ಸೇವೆ ಹಾಕೋವಾಗ ನಿಮ್ಮ ಹೆಸರೂ ಹೇಳ್ತೀನಿ ಗೌಡ್ರಾ!" ಎಂದು ದಾಸಯ್ಯ ಎದೆಬಿಚ್ಚಿ ಹೇಳಿದ.

ಮೂರು ಹಳದಿ ಬಟ್ಟೆಯಲ್ಲಿ ಕಟ್ಟಿದ್ದ ಸಣ್ಣ ಗಂಟುಗಳನ್ನು ಮುನಿಯಪ್ಪ ತಂದು ತಂದೆಯ ಕೈಲಿರಿಸಿದ. "ಅಪ್ಪಾ! ಬರೋವಾಗ ಭಾವಿಕಟ್ಟೆ ಬಳಿ ಸಣ್ತಿಮ್ಮಕ್ಕನ್ನ ಕಂಡೆ. ನಮ್ಮನೆ ಮುಡುಪಿನ ಗಂಟ್ನೂ ಕೊಡ್ತೀನಿ. ದಾಸಯ್ಯನಿಗೆ ಕೊಡಪ್ಪಾ ಎಂದು ಹೇಳಿ ಮನೆಗೆ ಕರ್ಕೊಂಡು ಹೋಗಿ ಈ ಗಂಟ್ನೂ ಕೊಟ್ಟಳು" ಎಂದು ಹೇಳುತ್ತಾ, ಸೊಂಟಕ್ಕೆ ಸಿಕ್ಕಿಸಿದ್ದ ಇನ್ನೊಂದು ಹಿಡಿಯಷ್ಟು ದೊಡ್ಡ ಗಂಟನ್ನೂ ತಂದೆಯ ಕೈಲಿರಿಸಿದ.

ಬಚ್ಚೇಗೌಡ ಭಕ್ತಿಯಿಂದ ಮುಡುಪಿನ ಗಂಟುಗಳೆಲ್ಲವನ್ನೂ ದಾಸಯ್ಯನ ಕೈಲಿಟ್ಟ. "ಮಗಾ! ದಾಸಯ್ಯ ನಮ್ಜೊತೆ ಬೀರೂರು ತನಕ ಬತ್ತಾನೆ. ಮುಂದಿನ್ಗಾಡೀಲೀ ನನ್ಜತೆ ಕೂಡ್ತಾನೆ. ನೀನೂ ಜವರಾ ಹಿಂದಿನ ಗಾಡೀಲಿ ಬನ್ನಿ. ಬುತ್ತಿ ತಂದಿದ್ದೀ ಅಲ್ವಾ? ಕಣ್ಣು ಬೆಳಕಲ್ಲೇ ಹೊಂಟರೆ ಮೊದಲ ಕತ್ತಲ ಝಾಮಕ್ಕೆ ಕತ್ತಾಳಿ ಕೊಳದ ಬಳಿ ಇರ್ತೀವಿ. ಅಲ್ಲಿ ಬುತ್ತಿ ಉಂಡು ಹೊಂಟರೆ ಮೂರನೆ ಝಾಮದ ವ್ಯಾಳೆಗೆ ಬೀರೂರು ಸೇರಬಹುದು. ಕೋಳಿ ಕೂಗುಕ್ಕೆ ಮೊದ್ಲೇ ಸಾಹುಕಾರ ಸೀಬಣ್ಣೋರಿಗೆ ಹೇರು ಒಪ್ಪಿಸಬಹುದು. ಗಾಡಿಮ್ಯಾಗ ಮ್ಯಾಣದ ಬಟ್ಟೆ ಕಟ್ಟಿದ್ದೀ ಅಲ್ವಾ? - ಬಿತ್ನಕಾಲ ಇದು, ಅಡ್ಡ ಮಳೆ ಬಿದ್ದರೂ ಬೀಳಬಹುದು. ಬೀರೂರುತನಕ ಹೇರನ್ನು ಹುಷಾರಾಗಿ ಇರಿಸ್ಕೋಬೇಕು" ಎಂದು ಬಚ್ಚೇಗೌಡ ಹೇಳಿದ.

* * * *

ಗುಡ್ಡದ ಮೇಲಿಂದ ಕಾಲು ಹಾದೀಲಿ ಹೋದರೆ, ಹತ್ತು ಘಳಿಗೇಲಿ ಬೀರೂರಿನ ದೊಡ್ಡ ರಸ್ತೆ ಸೇರಬಹುದು ಎಂದು ಲಿಂಗದ ಹಳ್ಳಿಯಿಂದ ಹೊರಟಿದ್ದವ, ತನ್ನ





ಜತೆಯಲ್ಲಿದ್ದವನಿಗೆ ಹೇಳಿದ. ಜತೆಯವನು ಒಪ್ಪಿದ ಮೇಲೆ, ಕಾಲು ಹಾದೀಲಿ ನಡೆದು ಬೀರೂರು ದೊಡ್ರಸ್ತೇಗೆ ಇಳಿದರು. ರಸ್ತೆಯಲ್ಲಿ ನಡೆಯುತ್ತಾ ಸಾಲು ಮರಗಳನ್ನು ಪರೀಕ್ಷಿಸತೊಡಗಿದರು. ರಸ್ತೆಯು ಗುಡ್ಡವನ್ನು ಬಳಸಿಕೊಂಡು ಅರ್ಧ ಗಾವುದದಷ್ಟು ದೂರ ಸಾಗಿತ್ತು. ಗುಡ್ಡದ ಕಡೆಯಿದ್ದ ದೊಡ್ಡ ಬೂರುಗದ ಮರವೊಂದರ ಬಳಿ ಬಂದಾಗ ನಿಂತರು. ತುಂತುರು ಮಳೆ ಬಿದ್ದಿದ್ದ ಕಾರಣ ನೆಲವು ತೋಯ್ದಿತ್ತು. ರಸ್ತೆಯ ಆ ಪಕ್ಕದಲ್ಲಿ ದೊಡ್ಡ ಕೊರಕೊಲೊಂದು ಇತ್ತು. ಬಂದವರಲ್ಲಿ ಕಿರಿಯನಾದವನು ಬೂರುಗದ ಮರದ ಬುಡದ ಹತ್ತಿರ ಅಗೆಯಲು ಶುರು ಮಾಡಿದ. ಒಂದು ಮಾರು ತೋಡಿದ ಮೇಲೆ ಬೇರುಗಳ ಮಧ್ಯೆ ಕೆದಕಿ, ಮರದ ಕೆಳಕ್ಕೆ ಸರಿಯಾಗಿ ದೊಗರನ್ನು ತೋಡಿದ. ಇನ್ನೊಬ್ಬಾತ ಬಂದು ದೊಗರಿನೊಳಗೆ ಸುರಂಗವೊಂದನ್ನು ಇರಿಸಿ ಸುಮಾರು ಉದ್ದವಿದ್ದ ಬತ್ತಿಯನ್ನು ಹುಷಾರಾಗಿ ಇರಿಸಿ, ನಂತರ ದೊಗರಿಗೆಲ್ಲಾ ಮಣ್ಣುಮೆತ್ತಿ ರಸ್ತೆಗೆ ಬಂದು ನಿಂತು ಮರವನ್ನು ನೋಡಿದ. "ಸರಿಯಾಗಿದೆ ಕಣ್ಲಾ! ಈಗ ಬತ್ತೀ ಹಚ್ಚಿಸ್ತೀನಿ. ಒಂದೂವರೆ ಘಳಿಗೆ ಹೊತ್ತಿಗೆ ಸುರಂಗ ಸಿಡೀಬೇಕು, ಹಚ್ಚಿದ ತಕ್ಷಣ ಓಡಿಬರ್ತೀನಿ. ನೀನೀಗಲೇ ಬೀರೂರು ಕಡೆಗೆ ಧೌಡು ಓಡು" ಎಂದು ಕಿರಿಯನನ್ನು ಓಡಿಸಿದ. 'ಢಮಾರ್' ಅಂತ ಸುರಂಗ ಸಿಡಿದಾಗ, ಕಿರಿಯವ ಅರ್ಧ ಹರಿದಾರಿ ಮುಂದಿದ್ದ. ಹಿರಿಯವ ಕಾಲು ಹರಿದಾರಿ ಓಡಿದ್ದ. ಬೂರುಗದಮರ ರಸ್ತೆಯಗಲಕ್ಕೂ ಬೇರುಸಹಿತ ಕಿತ್ತುಬಿದ್ದಿತ್ತು. ಗುಡ್ಡ ದಾಟಿಕೊಂಡೇ ಇಬ್ಬರೂ ಲಿಂಗದ್ಹಳ್ಳಿಗೆ ಹೊರಟುಹೋದರು. ಮಳೆ ಜೋರಾಗಿ ಬೀಳಲಾರಂಭಿಸಿತು. ಗುಡುಗು ಅಲ್ಲಿ ಕೇಳಿಸಿದಾಗ, ಕೊರಕಲಿನಲ್ಲಿ ಪ್ರತಿ ಧ್ವನಿಯಾಗಿ ಅಲೆಯಲೆಯಾಗಿ ಹರಡುತ್ತಿತ್ತು. ಮಿಂಚಿನ ಬೆಳಕಿನಲ್ಲಿ ಬೂರುಗದ ಮರವು ರಾಕ್ಷಸನ ತರಹ ರಸ್ತೆಗಡ್ಡಲಾಗಿ ಬಿದ್ದಿದ್ದು ಈ ಕಡೆಯಿದ್ದವರಿಗೆ ಆ ಕಡೆಯ ರಸ್ತೆಯೂ ಕಾಣಿಸುವಂತಿರಲಿಲ್ಲ.

* * * *

ಎಷ್ಟೆಷ್ಟೋ ಅವಸರಪಟ್ಟ ಬಚ್ಚೇಗೌಡ, ಆದರೂ ಹೇರು ತುಂಬಿದ ಗಾಡಿಗಳೆರಡನ್ನೂ ಸಂತೆ ಮಾಳದಿಂದ ಹೊರಡಿಸುವಾಗ ಸೂರ್ಯನು ಮುಳುಗುತ್ತಿದ್ದ. ಬಚ್ಚೇಗೌಡ ಚಡಪಡಿಸುತ್ತಿದ್ದ.

"ಬೀರೂರು ಹಾದಿ, ಚೌಕಳಿ ಎತ್ತಿಗೆ ಕಲ್ಗಚ್ಚು ಕುಡಿದ್ಹಾಂಗ, ರಾತ್ರಿ ಮೂರನೇ ಝಾಮದ ಹೊತ್ತಿಗೆ ಬೀರೂರನ್ನು ಮುಟ್ತೈತೆ ಅಪ್ಪಾ!" ಎಂದ ಮುನಿಯಪ್ಪ.

"ಕರೀಮೋಡ ಕೂಡ್ಕೈತಿ, ರಾತ್ರಿ ಜೋರು ಹನಿ ಬಿದ್ದರೂ ಬಿದ್ದೀತು, ಹೆಂಗೇ ಆಗಲಿ, ಕೋಳಿ ಕೂಗುಕ್ಕೆ ಮುಂಚೆ ಸೀಬಣ್ಣೋರ ಮಂಡಿ ಬಾಗಿಲಿಗೆ ಹೋದರಾಯ್ತು" ಎಂದು ಬಚ್ಚೇಗೌಡ ಅನುಮಾನದ ದನಿಯಲ್ಲೇ ಹೇಳಿದ.

ದಾಸಯ್ಯ, ಬಚ್ಚೇಗೌಡ, ಇಬ್ಬರೂ ಮೊದಲ ಗಾಡಿಯಲ್ಲಿ ಕುಳಿತರು. ಚೌಕಳಿ ಎತ್ತು ಧಂಗಿ ಹೊರಟಿತು.

ಮುನಿಯಪ್ಪ ಜವರ ಇಬ್ಬರೂ ಹಿಂದಿನ ಗಾಡಿಯನ್ನು ಹತ್ತಿದರು. ಜವರ ಗಾಡಿ ಹೊಡೆಯಲು ಕುಳಿತ. ಕಂಬಳಿ ಹೊದ್ದುಕೊಂಡು ಮುನಿಯಪ್ಪ ಹೇರಿನ ಮೇಲೆ

ಮಲಗಿದ. "ನಿಂಗೆ ನಿದ್ದೆ ಬಂದ್ರೂ, ಪರವಾಗಿಲ್ಲ ಜವರಾ! ಗಾಡಿ ಹಿಂದೆ ಗಾಡಿ ಸಾಗ್ತಾನೆ ಇರ್ತದೆ" ಎಂದು ಮುನಿಯಪ್ಪ ಹೇಳಿ, ಹೊರಳಿದ.

ಕಣ, ಕಣ, ಎಂದು ಎತ್ತುಗಳ ಕೊರಳಿಗೆ ಕಟ್ಟಿದ ಗಂಟೆಗಳು ಶಬ್ದ ಮಾಡತೊಡಗಿದುವು. ಗಾಲಿಗಳು ಟಕ್, ಟಕಾ ಎಂದು ಅತ್ತಿತ್ತ ಅಲುಗುತ್ತಾ ಉರುಳಲಾರಂಭಿಸಿದುವು. ಛಕ್, ಛೈ ಎಂದು ಗಾಲಿ ಕಡಾಣಿಗಳು ತಾಳಹಾಕಲು ಶುರು ಮಾಡಿದುವು. ಸುತ್ತಲೂ ಕತ್ತಲು. ಆಕಾಶದಲ್ಲಿ ಚುಕ್ಕಿಗಳೊಂದೂ ಕಾಣಿಸುತ್ತಿರಲಿಲ್ಲ. ಹಾಗಿದ್ದರೂ, ಯಾರೊಬ್ಬನ ಅಂಕೆ, ಶಿಕ್ಷೆಗಳನ್ನು ಬೇಡದೆ, ಚೌಕಳಿ ಎತ್ತು, ಅಲ್ಲಲ್ಲಿ ದಾರಿಯುದ್ದಕ್ಕೂ ನೀರಿನ ಸೊಟ್ಟಗೆರೆ ಹಾಕುತ್ತಾ ಬೀರೂರ ಕಡೆಗೆ ಧಿಮ್ಮಂಗ ಅಂತ ನಡೆಯಿತು. ಕರೀಲಾಳ ಕಟ್ಟಿದ್ದ ಕಾಲುಗಳು, ನಡೆಯುವುದಕ್ಕೆ ಬಲು ಚೆಂದ ಕಂಡಿತ್ತು ಚೌಕಳಿ ಎತ್ತಿಗೆ!!

ಮೂಕಿಯ ಮೇಲೆ ಕುಳಿತು ಹೇರನ್ನು ಸುಖವಾಗಿ ಒರಗಿಕೊಂಡು ಎಲಡಿಕೆ ಜಗಿಯುತ್ತಾ ಬಚ್ಚೇಗೌಡ, "ತಿರುಪತಿ ತಿಮ್ಮಪ್ಪ ಒಲಿದರೆ ಬಾಳು ಬಲು ಹಸನಾಗ್ತೈತೆ" ಎಂದು ಹೇಳಿದ.

ಗಾಡಿಯೊಳಗೆ ಹೇರಿನ ಮೇಲೆ ಕಣ್ಣು ಬಿಟ್ಟುಕೊಂಡು ಮಲಗಿದ್ದ ದಾಸಯ್ಯ 'ಆ' ಎಂದ.

"ಅಲ್ದೇ ಇದ್ರೆ, ಬೀರೂರಿಗೆ ಎರಡು ಗಾಡಿ ಕಟ್ಟಿ ಹೊಡೆದರೆ, ಎರಡು ವರಹಾ ಸಿಕ್ತದೆ ಅಂತ ಯಾರಾರ ನಿನ್ನೆ ಹೇಳಿದ್ರೆ ನಗ್ತಿದ್ದೆ," ಎಂದ ಬಚ್ಚೇಗೌಡ.

"ಹಂಗಾ" ಎಂದ ದಾಸಯ್ಯ. "ಗೌಡ್ರಾ ಇದು ನಂಗೂ ಹೊಳೀತು. ಎಲ್ಲಾ ಗಂಟೂ ಕಳ್ಕೊಂಡು, ಏಳು ಬೆಟ್ಟದ ನಂಟ ಒಬ್ಬನೇ ನಂಗೆ ಅಂತ ಹೊಂಟರೆ, ಗಂಟೂ ನೆಂಟೂ ಇದ್ದ ನೀವು ಹಿಂಗೆ ಬುದ್ಧಿ ಹೇಳ್ತಿದ್ರಾ" ಎಂದು ದಾಸಯ್ಯ ಹೇಳುತ್ತಿದ್ದಾಗ ಬಚ್ಚೇಗೌಡನ ಗೊರಕೆಯೇ ಉತ್ತರ ಕೊಟ್ಟಿದ್ದು. ಸುಖವಾಗಿ ದುಡಿದು ನಿದ್ದೆ ಬಿದ್ದೋರನ್ನು ನೋಡಿ ದಾಸಯ್ಯನಿಗೆ ಸ್ವಲ್ಪ ಕರುಬು ತುಂಬಿತು. ಏನೇನೋ ಹಳೇ ನೆನಪೆಲ್ಲಾ ಇನ್ನೂ ಸ್ವಲ್ಪ ಹೊತ್ತು ಕಾಡಿತು. ಯಾವಾಗ ನಿದ್ದೆ ಹತ್ತಿತೋ ಅವನಿಗೂ ತಿಳೀಲಿಲ್ಲ.

* * * *

ಥಟ್ಟಂತ ಬೆದರಿ ಚೌಕಳಿ ಎತ್ತು ಹಠಾತ್ತನೆ ನಿಂತಿತು. ಮೇಲಿಂದ ಬಚ್ಚೇಗೌಡ ಮುಂದಕ್ಕೆ ಝೋಕು ಹೊಡೆದು ಎಚ್ಚರಗೊಂಡು ಕಣ್ಣುಜ್ಜಿದ.

"ಯಾರ್ಲಾ ಅಲ್ಲಿ" ಎಂದು ದೊಡ್ಡ ಗಂಟಲಿನ ಕೂಗು ಹಾಕಿದ. ಲಾಟೀನು ದೀಪ ದೊಡ್ಡದು ಮಾಡಿ ನೋಡಿದ. ಎದುರಿಗೆ ಕಾಡು! ರಸ್ತೆಯೇ ಇದ್ದಿಲ್ಲ!!

ದಾಸಯ್ಯ ಆ ವೇಳೆಗೆ ಗಾಡಿಯಿಂದ ಇಳಿದು ರಸ್ತೆಯಲ್ಲಿ ನಿಂತಿದ್ದ. ಹಿಂದಕ್ಕೆ ನಡೆದ. ಹಿಂದಿನ ಗಾಡಿಯೂ ನಿಂತಿತ್ತು. ಜವರನೂ ಇಳಿದಿದ್ದ. ಮುಂದಕ್ಕೆ ನಡೆದು ಬಂದಿದ್ದ. ಮೂಕಿಗೆ ಕಟ್ಟಿದ್ದ ಲಾಟೀನನ್ನು ಬಿಚ್ಚಿಕೊಂಡು ಜವರ ಎತ್ತಿಹಿಡಿದ.

"ಮಳೆ ಗಾಳಿಗೆ ಮುದಿಮರ ಬಿದ್ದದೆ. ರಸ್ತೇಗೆ ಅಡ್ಡಲಾಗಿ ಬಿದ್ದು ನಮಗೆ ತ್ರಾಸ ಕೊಡ್ತಿದೆ, ಅಷ್ಟೇ! ಯಾರೋ ಕಳ್ಳರು ಬಂದ್ರೋ ಅಂತಿದ್ದೆ" ಎಂದು ಆಗತಾನೆ ಇಳಿದಿದ್ದ ಬಚ್ಚೇಗೌಡ ನುಡಿದು, ಸುತ್ತಲೂ ನೋಡಿದ.



ರಸ್ತೆಯ ಎಡಗಡೆಗೆ ಗುಡ್ಡ ಹಬ್ಬಿ ನಿಂತಿತ್ತು. ಬಲಗಡೆ ಕೊರಕಲಿನ ತಳದಲ್ಲಿ ನೀರು ತುಂಬಿ ಆಳವೆಷ್ಟೋ ತಿಳಿಯುವಂತಿರಲಿಲ್ಲ. ಮುಂದೆ ರಸ್ತೆಯಲ್ಲಿ ಬಿದ್ದಿದ್ದ ದೊಡ್ಡ ಮರವನ್ನು ಕಡಿದು ರಸ್ತೆಯನ್ನು ಸಾಫ್ ಮಾಡಿ ಮುಂದೆ ಹೋಗುವ ಯೋಚನೆಯೂ ಬರುವಂತಿರಲಿಲ್ಲ. ಅಷ್ಟು ದೊಡ್ಡ, ದಟ್ಟವಾದ ಮರ!

ಮುನಿಯಪ್ಪ ಆಗ ಎಚ್ಚರಗೊಂಡ. ಯಾವ ಕನಸು ಬಿದ್ದಿತ್ತೋ ಅವನಿಗೆ! "ನೆಗೆದು ಬಿದ್ದು ಹೋಗ್ಲಿ," ಎಂದು ಕನವರಿಸಿಕೊಂಡನೋ, ಎಚ್ಚರವಾಗೇ ನುಡಿದನೋ ದಾಸಯ್ಯನಿಗೆ ಗೊತ್ತಾಗಲಿಲ್ಲ. ಆಗ, ಅವನೊಬ್ಬನೇ ಹಿಂದಿನ ಗಾಡಿಯ ಬಳಿ ನಿಂತಿದ್ದ.

ಮುನಿಯಪ್ಪನಿಗೆ ಎಚ್ಚರವು ಚೆನ್ನಾಗಿ ಆಯಿತು. ತೊಟ್ಟಿಲಿನಲ್ಲಿ ಜೂಗಾಡಿ ಸುತ್ತಿದ್ದಂತಿದ್ದ ಗಾಡಿಯು ನಿಂತಾಗ, ನಿದ್ದೆಯೂ ಕನಸೂ ಎರಡೂ ಮುರಿದು ಬಿದ್ದಿದ್ದುವು. ದಾಸಯ್ಯನ್ನ ನೋಡಿ, "ಏನಾಯ್ತು?" ಎಂದು ಕೇಳಿದ. ದಾಸಯ್ಯ ಕೆಳಗಿಳಿದ. ಮುಂದುಗಡೆಗೆ ಬೆರಳು ತೋರಿಸಿದ. ಮುನಿಯಪ್ಪ ಮುಂದಕ್ಕೆ ನಡೆದ. ಅಪ್ಪನನ್ನು ಕಂಡ. ರಸ್ತೆಗೆ ಅಡ್ಡಬಿದ್ದ ಮುದಿ ಮರವನ್ನೂ ಕಂಡ. ಜವರನನ್ನೂ ಕಂಡ.

"ಮಗಾ! ಮುಂದೆ ಹೋಗೋ ಹಂಗಿಲ್ಲ! ಇಲ್ಲೇ ಬಿದ್ದಿರ್ಬೇಕು! ಗುಡ್ಡದ ಮ್ಯಾಗೆ ಎಡಕ್ಕೆ ಹೋಗೋ ಅಂತಿಲ್ಲ. ಬಲಕ್ಕೆ ಕೊರಕಲಿನಲ್ಲಿ ಸಾಗೋ ಹಂಗಿಲ್ಲ. ಮುಂದಾಗಡೆ ಹಾದೀಗಡ್ಡ ಕಟ್ಟಿಬಿದ್ದಿದೆ. ಸಂತೆ ಗಾಡಿಗಳು ಹಿಂದಿಂದ ಬಂದರ ಮರ ಕಡಿದು ದಾರೀ ಬಿಡಿಸಿಕೊಂಡು ಮುಂದಕ್ಕೆ ಹೋಗಬಹುದು. ಬೀರೂರು ಕಡೆಯಿಂದ ಗಾಡಿಗಳೇನಾರ ಬಂದರೆ ಅವುಗಳ ಸಪ್ಪಳ ಕೇಳಿ, ಕೂಗುಹಾಕಿ ಏನಾರ ಮಾಡಬಹುದು. ಅಲ್ಲಿನ್ತನ್ಕ ಇಲ್ಲೇ ಬಿದ್ಕೊಂಡಿರಬೇಕು" ಎಂದು ಬಚ್ಚೇಗೌಡ ಹೇಳಿದ.

"ಹಂಗಾರ, ಈಗ ಏನು ಮಾಡಲೂ ಬರದು! ಸುಮ್ಕೆ ಬಿದ್ದುಕೊಳ್ಳೋಣ" ಎಂದ ಮುನಿಯಪ್ಪ.

ಜವರ ಆ ವ್ಯಾಳೆಗೆ ಎತ್ತುಗಳನ್ನು ಬಿಚ್ಚಿ, ಗಾಡಿ ಚಕ್ರಕ್ಕೆ ಉದ್ದಾನೆ ಹಗ್ಗದಿಂದ ಕಟ್ಟಿದ್ದ. ಮೇಯೋದಕ್ಕೆ ಅವಕಾಶ ಮಾಡಿಕೊಟ್ಟಿದ್ದ.

ನಾಲ್ವರೂ ಗಾಡಿಯೊಳಗೇ ಬೈಸಾರೆ ತನಕ ಮಲಗೋದು ಎಂದು ನಿರ್ಧರಿಸಿಕೊಂಡರು.

"ಬುತ್ತಿ ಬಿಚ್ಚಲೇ ಇಲ್ವಲ್ಲಾ! ಕತ್ತಾಳಿ ಕೊಳದ ಬಳಿ ನಿಲ್ಲೋಣ ಅಂತಿದ್ದೆ, ಹಸಿವಾಗುಲ್ವೇನೋ ಮಗಾ!" ಎಂದ ಬಚ್ಚೇಗೌಡ.

"ನಿದ್ದೆ ಬರ್ತಾ ಇದೆ, ಮಲಗೋಣ. ನೀ ಬೇಕಾರ ಬುತ್ತಿ ತಿನ್ನಪ್ಪ, ನಂಗೆ ಹಸಿವಿಲ್ಲ" ಎಂದ ಮುನಿಯಪ್ಪ.

"ಬರೀ ಹೊಟ್ಟೇಲಿ ಯಾರಾರ ಮಲಗಾರ! ಹೇಳ್ದಾಂಗೆ ಕೇಳು. ಎರಡು ತುತ್ತು ಬಾಯ್ಗೆ ಹಾಕ್ಕೊಂಡು ಬಿದ್ದುಕೋ" ಎಂದ ಬಚ್ಚೇಗೌಡ.

ಜವರ ಆಗಲೇ ಬುತ್ತಿ ಬಿಚ್ಚಿದ್ದ. ಎಲ್ಲರೂ ಚೂರು ಚೂರು ತಿಂದರು. ದಾಸಯ್ಯ ಜಗ್ಲೀಜ ಬಿಡಿಯಲೆಗಳನ್ನೆಲ್ಲಾ ಕೊರಕಲಿಗೆ ಎಸೆದು ಬಂದಾಗ,

"ಹಸಿವಿಲ್ಲಾ ಅಂದ್ಯಲ್ಲಾ ಮಗಾ! ನಾಲ್ಕು ರೊಟ್ಟಿ ಮುಕ್ಕಿದೆಯಲ್ಲಾ," ಎಂದು ಬಚ್ಚೀಗೌಡ ನಗುತ್ತಾ ಹೇಳಿದ.

"ಅಮ್ಮಾ ಮಾಡಿಟ್ಟ ರೊಟ್ಟಿ! ರುಚಿಯಾಗಿತ್ತು. ನಾಲಿಗೆ ಬೇಕೂ ಅಂತು, ತಿಂದ್ಬಿಟ್ಟೆ" ಅಂತ ಮುನಿಯಪ್ಪ ಹೇಳಿ ಮಲಗಲು ಹಿಂದಿನ ಗಾಡಿಯ ಬಳಿಗೆ ಹೋದ.

ಭೋಂ! ಭೋಂ!! ಭೋಂ!!!

ಎಲ್ಲೋ ಯಾರೋ ಶಂಖ ಊದಿದ ಶಬ್ದ ಕೇಳಿಸಿತು.

"ನನ್ನಂಥಾ ದಾಸಯ್ಯ ಇಲ್ಲೇ ಎಲ್ಲೋ ಹತ್ತಿರಲೇ ಇರಬೇಕು" ಎಂದ ದಾಸಯ್ಯ.

"ಗುಡ್ಡದ ಮ್ಯಾಗಿನ ಜೋಗಿ ಮಂಟಪದಾಗೆ ಯಾರಾರ ಬಂದಿರ್ಬೋದು" ಎಂದ ಮುನಿಯಪ್ಪ.

"ಹಂಗಾರ ಅಲ್ಗೇ ಹೋಗಿ, ಬೆಚ್ಚಗೆ ಮಂಟಪದಾಗೆ ಮಲಗಿ, ಬೈಸಾರೆ ಎದ್ದು ಇಲ್ಲಿಗೆ ಬರುವ" ಎಂದು ಹೇಳಿದ ಜವರ, "ಈ ಹೊತ್ನಾಗೆ, ಯಾವ ಗಾಡೀತಾನೆ ಬಂದಾತು" ಎಂದೂ ಸೇರಿಸಿದ.

"ಮಳೀಲಿ ಇಲ್ಲಿ ತಾನೆ ಯಾಕೆ ನಡಗೋದು? ಮಗಾ! ಜೋಗಿಮಂಟಪಕ್ಕೆ ಲಾಟೀನು ಹಿಡ್ಕೊಂಡು ಮುಂದೆ ಹೋಗು, ಹಿಂದೆ ನಾವೂ ಬರ್ತೀವಿ" ಎಂದ ಬಚ್ಚೀಗೌಡ.

ಮುನಿಯಪ್ಪ ಲಾಟೀನು ಹಿಡಿದುಕೊಂಡು ಮುಂದೆ ಗುಡ್ಡದ ಮ್ಯಾಗಡೆಗೆ ಕಾಲು ಹಾದಿ ಹಿಡಿಯುತ್ತ ನಡೆದ. ಅವನ ಹಿಂದೆಯೇ ಶಂಖವನ್ನು ಭೊಂ ಭೋಂ ಮಾಡುತ್ತ, ಕಾಲು ಹಾದಿಯಲ್ಲಿರಬಹುದಾದ ಹಾವು ಹುಳು ಹುಪ್ಪಟೆಗಳನ್ನು ಹೆದರಿಸುತ್ತಾ, ದಾಸಯ್ಯ ನಡೆದ. ಬಚ್ಚೀಗೌಡನ ಹಿಂದೆ ಜವರನೂ ನಡೆದ. ಕೂಗು ದೂರ ನಡೆದ ಮೇಲೆ ಜೋಗಿಮಂಟಪ ಸಿಕ್ಕಿತು.

ದೊಡ್ಡದಾಗಿದ್ದರೂ ಶಿಥಿಲವಾಗಿದ್ದ ಕಲ್ಲುಮಂಟಪವದು. ಶಿರಾ ನವಾಬನ ಕಾಲದಲ್ಲಿ ಜೋಗಿಯೊಬ್ಬನು ಅಲ್ಲಿ ಇದ್ದನೆಂದೂ, ನವಾಬನು ಕೂಡ ಅವನ ಸಲಹೆಯನ್ನು ಕೇಳುತ್ತಿದ್ದನೆಂದೂ ಪ್ರತೀತಿ ಈಗಲೂ ಹಳ್ಳಿಗಳಲ್ಲಿದೆ. ಜೋಗಿಯು ಶಿವೈಕ್ಯನಾದ ಮೇಲೆ ಮಂಟಪವು ಪಾಳುಬಿದ್ದಿತ್ತು. ದಾಸಯ್ಯಗಳೂ, ಬ್ರಂಜಾರಿಗಳೂ, ಬೈರಾಗಿಗಳೂ, ಬೀರೂರು ಕಡೆಗೆ ಹೋಗುವಾಗ ಒಂದೆರಡು ರಾತ್ರಿ ಮಂಟಪದಲ್ಲಿ ಉಳಿದುಕೊಳ್ಳುತ್ತಿದ್ದರು.

ಕಪ್ಪು ಹೆಪ್ಪುಗೂಡಿದಂತಿದ್ದ ಗಡ್ಡ ಮೀಸೆಗಳನ್ನು ಹೊರವಾಗಿ ಬೆಳೆಸಿದ್ದ, ಎತ್ತಿ ಸುರುಳಿಸುತ್ತಿ ಜಡೆಯನ್ನು ಕಟ್ಟೇರಿಸಿದ್ದ, ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡಿದ್ದ ಜೋಗಿಯೊಬ್ಬನು ಮಂಟಪದಲ್ಲಿ ಪೂಜೆ ಹಾಕುತ್ತಿದ್ದಾನೆ. ಮಿರುಮಿರುಗುವ ಬಟ್ಟತಲೆಯ ಯುವಕನೊಬ್ಬನು ನಿಂತುಕೊಂಡು ಶಂಖವನ್ನು ಊದುತ್ತಿದ್ದಾನೆ.





ಕುಂಕುಮ ಇಟ್ಟಿದ್ದ ಅರಶಿನ ಹಚ್ಚಿದ್ದ ಉದ್ದಾನೆ ನಿಲ್ಲಿಸಿದ್ದ ಕಲ್ಲು ಗುಂಡೊಂದಕ್ಕೆ ಜೋಗಿಯು ಪೂಜೆ ಹಾಕುತ್ತಿದ್ದಾನೆ.

ಸುತ್ತಲೂ ತೆರೆದಿದ್ದ ಮಂಟಪದ ಹೊರಗೆ ನಾಲ್ವರೂ ಬಂದು ನಿಂತಾಗ ಜೋಗಿಯು ತನ್ನ ಎಡ ಅಂಗೈಯನ್ನು, ಬಲಗೈಯಲ್ಲಿದ್ದ ಚಾಕುವಿನಿಂದ ಹನ್ನೊಂದು ಬಾರಿ ಹೊಡೆದಿದ್ದಾನೆ. ಕೆಂಪು ಸುರಿಯುತ್ತಿದ್ದ ಎಡ ಅಂಗೈಯಲ್ಲಿ ಅರಿಶಿನದ ಪುಡಿಯನ್ನು ಹಾಕಿ, ಕಲಸಿ, ಅದನ್ನೇ ಚಿಟಿಕೆ ಚಿಟಿಕೆಯಾಗಿ ಪೂಜೆ ಹಾಕುತ್ತಿದ್ದಾನೆ.

ನಾಲ್ವತ್ತೆಂಟು ಬಾರಿ ಯಾವುದೋ ಮಂತ್ರವನ್ನು ಮಟಮಟಿಸುತ್ತಾ ಅರ್ಚಿಸಿದಾಗ ಶಂಖ ಊದುತ್ತಿದ್ದ ಶಿಷ್ಯನು ಮಂಟಪದ ಅಂಚಿನತ್ತ ಹೋಗಿ ಮೂರು ಕಲ್ಲು ಒಲೆಯ ಮೇಲೆ ಕುದಿಯುತ್ತಿದ್ದ ಮಡಕೆಯೊಂದನ್ನು ಎತ್ತಿಕೊಂಡು, ಬಲು ಎಚ್ಚರಿಕೆಯಿಂದ ತಂದು ಜೋಗಿಗಳೆದುರಿಗೆ ಇರಿಸಿದ್ದಾನೆ. ಆ ಮಡಕೆಯನ್ನೇ ನೈವೇದ್ಯ ತೋರಿದ್ದಾನೆ ಜೋಗಿ, ಆ ಹೊತ್ತಿಗೆ ನೂರಾ ಎಂಟು ಬಾರಿ ಪೂಜೆ ಹಾಕಿದ್ದನವ. ಮಂಗಳಾರತಿ ಮಾಡಿದ ಮೇಲೆ ಜೋಗಿಯು, ಮಂಟಪದ ಈ ಕಡೆಗೆ ನೋಡಿದ್ದಾನೆ.

"ಇವರೆಲ್ಲಾ ಯಾರು? ಇಲ್ಲ್ಯಾಕೆ ಬಂದರು?" ಎಂದು ಜೋಗಿಯು ಕೂಗಿ ಕೇಳಿದ. ಬಟ್ಟತಲೆಯ ಶಿಷ್ಯನು ಗಾಬರಿಯಾಗಿ ಈ ಕಡೆ ನೋಡಿ ತನಗೇನೂ ತಿಳಿಯದು ಎಂಬಂತೆ ತಲೆಯನ್ನಲ್ಲಾಡಿಸಿದ.

ಬಚ್ಚೀಗೌಡ ಮುಂದೆ ಬಂದು, ನಡೆದುದೆಲ್ಲವನ್ನೂ ಹೇಳಿದ.

"ಮಾರ್ಗಶಿರ ಕೃಷ್ಣಾಷ್ಟಮಿ ಇವತ್ತು. ಗುರುಗಳು ಮಾಡುವ ಪೂಜೆ ಈ ರಾತ್ರಿ, ಯಾರೂ ಇಲ್ಲದ ಕಡೆ ಮಾಡೋ ಪೂಜೆ. ಅಂಥಾ ವೇಳೆಗೆ ಇವರು ಬಂದಿದ್ದಾರೆ. ಅಮ್ಮನೇ ಕರೆ ತಂದಿರಬೇಕು. ಪ್ರಸಾದಾನ ಇವರಿಗೂ ಕೊಡು" ಎಂದು ಜೋಗಿಯು ಶಿಷ್ಯನಿಗೆ ಹೇಳಿದ. ತಾನೇ 'ದೇವಿಯ' ಮೇಲಿಂದ ಅರಿಶಿನ ಕುಂಕುಮ ತೆಗೆದು ಪ್ರಸಾದ ಹಂಚಿದ. ಮಡಕೆಯಿಂದ ನೈವೇದ್ಯವನ್ನು ಸಣ್ಣ ಕುಡಿಕೆಗಳಲ್ಲಿ ಹಾಕಿ ಶಿಷ್ಯನು ನಾಲ್ವರಿಗೂ ಕೊಟ್ಟ. ಬಲು ಭಕ್ತಿಯಿಂದ ನಾಲ್ವರೂ ಕುಡಿದರು. ಬಲು ರುಚಿಯಾಗಿಯೂ ಇದ್ದುದರಿಂದ, ಶಿಷ್ಯನು ಮಿಕ್ಕ ನೈವೇದ್ಯವನ್ನು ಮಡಕೆಯಿಂದಲೇ ಹಂಚಲು ಬಂದಾಗ, ಬೊಗಸೆಯಲ್ಲೇ ಸುರಿಸಿಕೊಂಡು ಕುಡಿದರು.

ತರಗೆಲೆ ಕಡ್ಡಿ ಪುರುಲುಗಳನ್ನು, ಮಂಟಪದ ಮಧ್ಯೆ ಹಾಕಿ, ಶಿಷ್ಯನು ಬೆಂಕಿ ಹೊತ್ತಿಸಿದ. ಸುತ್ತಲೂ ಬೆಚ್ಚಗೆ ಕುಳಿತು ನಾಲ್ವರೂ ಕಂಬಗಳಿಗೆ ಒರಗಿಕೊಂಡರು. ಜೋಗಿಯು ಶಿಷ್ಯನೊಂದಿಗೆ ಭಜನೆಗೆ ಆರಂಭಿಸಿದ.

ಕಂಬಕ್ಕೆ ಒರಗಿ ಕೂತಿದ್ದ ನಾಲ್ವರೂ ಭಜನೆಯ ಜೋಗುಳಕ್ಕೆ ತಲೆಯಾಡಲಾರಂಭಿಸಿದರು. ಸ್ವಲ್ಪ ಹೊತ್ತಿನಲ್ಲೇ ಝೊಂಪು ಹತ್ತಿ ಗೊರಕೆ ಹುಯ್ಯಲಾರಂಭಿಸಿದರು. ಗೊರಕೆಯ ಅಪಸ್ವರವು ಕೇಳಿಸಿದ ಕೂಡಲೇ ಜೋಗಿಯು ಛಂಗನೆದ್ದ. ಶಿಷ್ಯನೂ ಜಿಗಿದೆದ್ದ. ಬಚ್ಚೀಗೌಡನ ಕಣ್ಣು ಬಿಡಿಸಿ ಜೋಗಿಯು ನೋಡಿದ. ಮಿಕ್ಕವರ ಕಣ್ಣುಗಳನ್ನು ಬಿಡಿಸಿ ಶಿಷ್ಯನು ನೋಡಿದ.

"ಜೈ! ಭೈರವಿ!" ಎಂದು ಇಬ್ಬರೂ ಮೆಲ್ಲಗೆ ಅಂದರು. ಮಂಟಪದಿಂದಿಳಿದು ಧೌಡು ಓಡಿದರು.

* * * *

ಗುಡ್ಡದ ಕಡೆಯಿಂದ ಬೀರೂರ ದೊಡ್ಡ ರಸ್ತೆಗೆ, ಹೇಸರ ಕತ್ತೆಗಳನ್ನು ಹೊಡೆದುಕೊಂಡು ಇಬ್ಬರು ಬಂದರು, ನಿಶಿರಾತ್ರಿಯಲ್ಲಿ. ನಿಂತಿದ್ದ ಎರಡು ಒಂಟೆತ್ತಿನ ಗಾಡಿಗಳಿಂದ, ಹೇರನ್ನೆಲ್ಲಾ ತೆಗೆದು, ಬೇಗ ಬೇಗ ಹೇಸರಕತ್ತೆಗಳ ಮೇಲೆ ಕಟ್ಟಿದರು. ಅಜ್ಜಂಪುರದ ಕಡೆಗೆ, ಎತ್ತುಗಳನ್ನು ಕಟ್ಟಿ, ಗಾಡಿಗಳನ್ನೂ ಹೊರೆ ಹೊತ್ತಿದ್ದ ಹೇಸರಕತ್ತೆಗಳನ್ನೂ, ಹೊಡೆದುಕೊಂಡು ಹೊರಟರು. ಗಾಡಿಗಳು ಮುಂದಕ್ಕೆ ಹೋಗುತ್ತಿದ್ದುವು. ಸ್ವಲ್ಪ ದೂರ ಹೋದ ಮೇಲೆ, ಹೇಸರಕತ್ತೆಗಳನ್ನು ಕವಲುದಾರಿಗೆ ತಿರುಗಿಸಿಕೊಂಡು ಇಬ್ಬರೂ ಹೋದರು. ತುಸು ಹೊತ್ತಿನಲ್ಲೇ ಲಿಂಗದ್ಹಳ್ಳಿಯ ಹುಣಸೇತೋಪು ಸಿಕ್ಕಿತು. ಅಲ್ಲೇ ಹೇಸರಕತ್ತೆಗಳನ್ನು ನಿಲ್ಲಿಸಿ, ಹೇರಿಳಿಸಿದಾಗ, ಕೋಳಿ ಕೂಗಿತು.

* * * *

ಮಂಟಪದಲ್ಲಿ ಬಚ್ಚೇಗೌಡ ಎಚ್ಚೆತ್ತಾಗ, ಮೂಡದಲ್ಲೆಲ್ಲಾ ಕೆಂಬಣ್ಣ ಬಿದ್ದಿತ್ತು. ಎದ್ದು ಕಣ್ಣುಬಿಟ್ಟು, ತಲೆ ಕೊಡವಿಕೊಂಡು ಸುತ್ತ ನೋಡಿದಾಗ, ಉಳಿದ ಮೂವರೂ ಕಂಬಗಳಿಗೆ ಆತುಬಿದ್ದು ನಿದ್ದೆ ಮಾಡುತ್ತಿದ್ದುದು ಕಂಡು ಬಂತು. ಜೋಗಿಯೂ ಕಾಣಿಸಲಿಲ್ಲ. ಶಿಷ್ಯನೂ ಇರಲಿಲ್ಲ. ಮುಂಜಾನೆಯಾಗಿದೆ. ಇಷ್ಟು ಹೊತ್ತಿಗೆ ಬೀರೂರ ಸೀಬಣ್ಣೋರ ಮಂಡಿ ತಾವ ಇರಬೇಕಾಗಿತ್ತು. ಇಲ್ಲೆಲ್ಲೋ ಬಿದ್ದಿದ್ದೀವಲ್ಲಾ ಎಂದು ಕಸಿವಿಸಿಪಟ್ಟ. ಮೂವರನ್ನು ಎಬ್ಬಿಸಿದ. ಬೀರೂರ ದೊಡ್ರಸ್ತೆಗೆ ಗುಡ್ಡ ಇಳಿದು ನಡೆದ. ಅಡ್ಡಲಾಗಿ ಬಿದ್ದಿದ್ದ ಮರ ಹಾಗೇ ಬಿದ್ದಿದೆ. ಆದರೆ ಹೇರು ತುಂಬಿದ ಗಾಡಿಗಳೂ ಇಲ್ಲ! ಎತ್ತುಗಳ ಸುಳಿವೇ ಇಲ್ಲ!! "ಇದ್ಹೆಂಗಾಯ್ತಾ" ಎಂದು ದೊಡ್ಡ ಉದ್ಗಾರ ತೆಗೆದು, ಕುಸಿದು ಕೂತ.

"ಮಷಾಣಕ್ಕೆ ಹೋಗೋವಾಗ ದಾಸಯ್ಯನ್ನ ಮುಂದೆ ಹಾಕ್ಕೊಂಡು ಹೋಗಬೇಕು. ಊರಿಗೆ ಪಯಣ ಹೋಗೋವಾಗ ಅವಲಕ್ಷಣ ಕೂರಿಸಿಕೊಂಡು ಹೋದರೆ ಇನ್ನೇನಾಗ್ತೈತೆ" ಎಂದು ಮುನಿಯಪ್ಪ ಹೇಳಿದ. ನಿವಾರಿಸಲಾಗದ ಕೋಪ ಬಂದಾಗ, ಯಾರ ಮೇಲೆಯಾದರೂ ತೀರಿಸಿಕೊಳ್ಳಬೇಕಲ್ಲ!

ದಾಸಯ್ಯ ಏನಾದರೂ ಮಸಲತ್ತು ಮಾಡಿರಬಹುದೋ ಎಂದು ಬಚ್ಚೇಗೌಡನಿಗೂ ಅನ್ನಿಸಿತು. ಬಟ್ಟತಲೆಯೋನು ಜೋಗಿ ಮಂಟಪದಲ್ಲಿ ಭೊಂ ಭೋಂ ಶಂಖ ಊದಿದ್ದೂ, ಇಲ್ಲಿ ದಾಸಯ್ಯ ಅದಕ್ಕೆ ಪ್ರತಿಯಾಗಿ ಶಂಖ ಊದಿದ್ದೂ, ನೆನಪಿಗೆ ಬಂತು.

ದಾಸಯ್ಯನ ಕೆನ್ನೆಗೆ ತಪರಾಕೊಂದನ್ನು ಜವರ ಬಿಗಿದ. "ಈಗಾರ ಹೇಳು ಗಾಡಿ ಎತ್ತುಗಳನ್ನು ಎಲ್ಲಿಗೆ ನಿನ್ನ ದೋಸ್ತು ಕಳ್ಳರು ಸಾಗಿಸಿದ್ದಾರೆ; ಇಲ್ದೇ ಇದ್ರೆ ಊರಿಗೆ ಎಳೆದುಕೊಂಡು ಹೋಗಿ ಮುಗಿಸ್ಬಿಡ್ತೀವಿ" ಎಂದು ಹೆದರಿಸಿದ.



"ತ್ರಿರುಪೆ ಎತ್ತೋ ದಾಸಯ್ಯ, ಕಳ್ಳರ ಸಾವಾಸ ನಂಗ್ಯಾಕ. ರಾತ್ರಿಯೆಲ್ಲಾ ನಿಂ ಜತೇನೆ ಇರ್ನಿಲ್ವಾ? ಕಳ್ಳರ ಜತೆ ಓಡಿಹೋಗ್ತಿದ್ದೆ, ಶಾಮೀಲಾಗಿದ್ದಿದ್ದರೆ, ಅಲ್ವಾ," ಎಂದ ದಾಸಯ್ಯ, ಏಟು ತಿಂದರೂ ರೇಗದೇನೇ.

"ಇಲ್ಲಿ ಏನ್ತಾನೆ ವಿಚಾರಣೆ ಮಾಡೋದು, ಅಜ್ಜಂಪುರಕ್ಕೆ ಹಿಂತಿರುಗೋಣ. ಇವನ ಮುಂದೆ ಬಿಟ್ಕೊಂಡು ಹೋಗೋಣ. ಎಲ್ಲಾರ ತಪ್ಪಿಸ್ಕೊಂಡ್ಬಿಟ್ಟಾನು" ಎಂದು ದಾಸಯ್ಯನ್ನ ಮುಂದೆ ನಡೆಸಿಕೊಂಡು ಮೂವರೂ ಅಜ್ಜಂಪುರದ ದಾರಿ ಹಿಡಿದು ಕಾಲು ಹಾಕಿದರು.

ಅಜ್ಜಂಪುರ ಸೇರಿ, ಸಂತೇಮಾಳ ದಾಟಿ ಹಟ್ಟಿ ಸೇರೋ ಹೊತ್ತಿಗೆ ದನ ಕರುಗಳೂ ಮೇವು ಮುಗಿಸಿ ಮನೆಗೆ ಬರುತ್ತಿದ್ದುವು. ಮನೆಯೆದುರಿಗೆ ಎರಡು ಗಾಡಿಗಳೂ ಖಾಲಿಯಾಗಿ ನಿಂತಿದ್ದುವು. ಮನೆಯವರೆಲ್ಲಾ ಕೈಸಾಲೆಯಲ್ಲೇ ಅಳುತ್ತ ಕುಳಿತಿದ್ದರು.

ಬಚ್ಚೇಗೌಡ, ಮುನಿಯಪ್ಪ ಇವರನ್ನು ಕಂಡು, ಕಿರಿಯಮಗ ಅಂಜನಿ ಮನೆ ಜಗುಲಿಯಿಂದ ನೆಗೆದು ಬಂದು, "ಏನಾಯ್ತಪ್ಪಾ, ಬೆಳಗಾದ ಮ್ಯಾಗೆ ಖಾಲಿ ಬಂಡಿಗಳು ಮನೆತಾಕ ಬಂದುವು. ಗಾಡೀ ಒಳಗೆ ನೀವಾರೂ ಇರ್ನಿಲ್ಲ. ಎತ್ತುಗಳನ್ನು ಬಿಚ್ಚಿ, ಕೊಟ್ಟಿಗೆಗೆ ಕಟ್ಟಿ, ಕಾಳೇಗೌಡರ ಮನೆಗೆ ಹೋಗಿ ಸುದ್ದಿ ತಿಳಿಸಿ ಬಂದೆ. ತಳವಾರರಿಗೆ ತಿಳಿಸಿ ಆಮ್ಯಾಕ ನಿಮ್ಮನೆ ತಾಕ್ಕ ಬರ್ತೀನಿ ಎಂದು ಅರಳೇಕಟ್ಟೆ ಗೌಡರು ಹೇಳಿದರು" ಎಂದ.

"ದಣಿದು ಬಂದಿದ್ದಾರೆ. ಕೈಕಾಲಿಗೆ ನೀರು ಕೊಡು, ಬ್ಯಾಲದ ಸೀನೀರು ಮಾಡಿ, ಅರಳ್ಹಿಟ್ಟು ಕಲಸ್ತೀನಿ. ಆಮ್ಯಾಗೆ ಇವರಿಗೆ ಕೋಡೋವಂತೆ" ಎಂದು ಗೌಡರ ಹೆಂಡತಿಯು ಮನೆಯೊಳಕ್ಕೆ ಎದ್ದುಹೋದಳು. ಹೋದವಳೇ ದೇವರ ಮುಂದೆ ಒಂದು ಹಣತೆ ಹಚ್ಚಿಟ್ಟಳು.

ಕೈಸಾಲೆಯಲ್ಲಿ ಅರಳ್ಹಿಟ್ಟು ತಿಂದು, ಬ್ಯಾಲದ ನೀರು ಕುಡಿದು ಮುಗಿಸುವ ಹೊತ್ತಿಗೆ, ತಳವಾರರೊಂದಿಗೆ ಕಾಳೇಗೌಡರು ಬಿರಿಬಿರಿ ನಡೆಯುತ್ತಾ ಬಂದರು.

"ಅರೆ! ನೀನ್ಯಾವಾಗ ಬಂದೆ! ಬೆಳಗ್ಗೇನೆ ಖಾಲಿ ಗಾಡಿಗಳು ಹಿಂದೆ ಬಂತು ಅಂತ ಅಂಜನಿ ಹೇಳಿದಾಗ, ನಿಮಗೆಲ್ಲಾ ಏನಾಯ್ತೋ ಎಂದು ಭಯ ಬಿದ್ದಿದ್ದೆ. ನೀವ್ಯಾರೂ ಕೈ ಮೈ ಮುರಿದುಕೊಳ್ಳದೆ ಬಂದ್ರಲ್ಲಾ! ಶಿವನ ದಯ! ಏನೇನಾಯ್ತು?" ಎಂದು ತಳವಾರರು ಕೇಳಿದರು.

ನಡೆದುದೆಲ್ಲವನ್ನೂ ಬಚ್ಚೇಗೌಡ ವಿವರಿಸಿದ. ಜೋಗಿ ಮಂಟಪದೋರಿಗೂ, ದಾಸಯ್ಯನಿಗೂ ಮಧ್ಯೆ ಮಸಲತ್ತು ಆಗಿರಬಹುದು ಎಂದೂ ತನ್ನ ಅನುಮಾನವನ್ನು ಹೇಳಿದ.

"ದಾಸಯ್ಯನ್ನ ಭಾವಡಿಯಲ್ಲಿ ಕೂಡಿಟ್ಟು ಎರಡು ಮಡಗಿದರೆ, ಹೇರು ಎಲ್ಲಿದೆ,ಕಳ್ಳರು ಎಲ್ಲಿದ್ದಾರೆ, ಎಲ್ಲವೂ ತಿಳೀತದೆ, ನಿಮಗೆ ಹೇಳಬೇಕಾ" ಎಂದು ಕಾಳೇಗೌಡ ಸಲಹೆಮಾಡಿದ. "ಏನಿಲ್ಲ ಅಂದರೂ ಹತ್ತು ಕಂಠೀರಾಯಹಣ ಕೊಡ್ತಿದ್ದರು ಸೀಬಣ್ಣೋರು; ಎಲ್ಲಾ ಹೋಯ್ತು! ಹೆಂಗಾರ ಮಾಡಿ ಕಳ್ಳನ್ನ ಹಿಡಿಲೇಬೇಕು" ಎಂದು ಕಾಳೇಗೌಡ ಹೇಳಿದ.

ತಳವಾರರು ಬಲು ಸುಸ್ತು ಬಡೆದಂತೆ ಕಾಣಿಸಿದರು. "ಸುಬೇದಾರ್ರೇ ಕಸಿದುಕೊಂಡು ಹೋದರೇನು, ಕಳ್ಳರೇ ಹೊಡಕೊಂಡು ಹೋದರೇನು, ಮುಖ್ಯ ನಮ್ಮದಲ್ಲ, ನಮಗೆ ದಕ್ಕಲಿಲ್ಲ" ಎಂದು ಏನೋ ವೇದಾಂತದ ಮಾತನ್ನಾಡಿದರು.

"ಒಳ್ಳೇ ವೇದಾಂತ ನುಡೀತೀರಿ, ಊರ ತಳವಾರರ್ರಾಗಿ! ನಾನು ಬರ್ತೀನಿ. ಸಿಬ್ಬಂದೀಗೂ ಹೇಳಿ ಕಳ್ಸಿ. ಜೋಗಿ ಮಂಟಪದ ಸುತ್ತುಮುತ್ತ ಹಳ್ಳಿಗಳನ್ನೆಲ್ಲಾ ತಪಾಸು ಮಾಡಿದರೆ ಸಿಕ್ಕಿ ಹಾಕ್ಕೋತಾರೆ, ಝಟ್ಟಂತ ನಡೀರಿ, ಹೊತ್ತು ಮಾಡಿದರೆ ಕಳ್ಳರು ತುಂಬಾ ದೂರ ಹೋಗಿಬಿಟ್ಟಿರ್ತಾರೆ" ಎಂದು ಕಾಳೇಗೌಡ ಬಿರುನುಡಿಯಾಡಿದ.

ತಳವಾರರು ತುಸು ನಕ್ಕರು.

"ವಾಸಯ್ಯ ಶಾಮೀಲಾಗಿದಾನೆ ಅಂತ ಈ ಹುಡುಕಾಟ ಎಲ್ಲಾ ನಡೆಸ್ಬೇಕು ಅಂತ ನೀವು ಹೇಳೋದು. ನಮ್ಮೂರ ನೀರ್ಗಂಟಿಯ ಚಿಕ್ಕಪ್ಪ, ಈ ದಾಸಯ್ಯ. ದೊಡ್ಡ ಸಿಡುಬೆದ್ದಾಗ ಹೆಂಡತಿ ಮಕ್ಕಳು ಎಲ್ಲರನ್ನೂ ಒಂದೇ ವಾರದಲ್ಲಿ ಮಣ್ಣು ಮಾಡಿದ. ತನಗೇ ಇದ್ದ ಹಣ, ಕಾಸು, ನಗನಾಣ್ಯ ಎಲ್ಲವನ್ನೂ ನೀರ್ಗಂಟಿಗೆ ಕೊಟ್ಟು, ದಾಸಯ್ಯನಾಗಿ ದೇವರ ಧ್ಯಾನಮಾಡ್ತಾ ಕಾಲಹಾಕ್ತಿದಾನೆ. ಹದಿನೈದು ವರ್ಷದಿಂದ ಗೊತ್ತು. ಇವನಿಗೆ ಕಳ್ಳರ ಜಾಡು ಏನು ಗೊತ್ತು? ಇಷ್ಟು ಹೊತ್ತಿಗೆ ಕಳ್ಳರು ಬೀರೂರಾಚೆ ಹೋಗಿ ಬಿಟ್ಟಿರ್ತಾರೆ. ಎಲ್ಲೆಲ್ಲಿ ಅಂತ ಹುಡುಕಲು ಸಾಧ್ಯ! ನಿಗಾ ಇಟ್ಕೊಂಡು ಮುಂದೆ ಇವರನ್ನು ಹಿಡೀಬೇಕೇ ಹೊರ್ತು ಈಗ ತೆಪ್ಪನಿರೋದೆ ವಾಸಿ" ಎಂದು ಹೇಳಿದರು.

ಎಲ್ಲರ ಮುಖವೂ ಪೆಚ್ಚುಬಿದ್ದು ಹೋಗಿತ್ತು. ಎಲ್ಲರನ್ನೂ ನೋಡಿ ದಾಸಯ್ಯನ ಮುಖವೂ ಕನಿಕರದಿಂದ ತುಂಬಿತ್ತು. ಜವರ ತನ್ನ ಕೈಯನ್ನು ಹೊಸೆದುಕೊಳ್ಳುತ್ತಿದ್ದ, ತಲೆಯನ್ನು ತಗ್ಗಿಸಿಯೇ ಕುಳಿತಿದ್ದ.

* * * *

ಕೊಂಡೆನಕಪಲ್ಲಿಯ ಆಲದಮರದ ತೋಪಿನಂಚಿನಲ್ಲಿ ಪೂಜಾರಪ್ಪನು ಕುಳಿತಿದ್ದ, ಆಗತಾನೇ ಬೆಳಗಿನ ಪೂಜೆ ಮುಗಿಸಿಕೊಂಡು, ಕರುವೊಂದನ್ನು ಆಡಿಸುತ್ತಾ ಬಂದು ಕುಳಿತಿದ್ದ. ಸುತ್ತಲೂ ಹಸಿರು ಗರುಕೆಯ ಹಾಸಿಗೆ ಹಾಸಿಟ್ಟಂತಿತ್ತು. ಛಂಗುತ್ತಿದ್ದ ಕರುವನ್ನೇ ನೋಡುತ್ತ ಮೈಮರೆತವನಂತಿದ್ದ. ಟಗರೊಂದು ರಭಸದಿಂದ ಓಡಿಬಂತು. ಹಸಿರು ಹುಲ್ಲನ್ನು ಕಂಡು ತಿನ್ನುತ್ತಾ ನಿಂತಿತು. ಅದರ ಹಿಂದೆಯೇ ಓಡೋಡಿ ಬಂದವನು ತೆಪ್ಪನೆ ನಿಂತಿದ್ದ ಟಗರನ್ನು ನೋಡಿ, "ಎಲಾ! ಇಷ್ಟುಹೊತ್ತು ಎಲ್ಲೆಲ್ಲೂ ಕೈಗೆ ಸಿಕ್ಕದೆ ಓಡಾಡಿಸಿದೆ. ಇಲ್ಲಿಗೆ ಬಂದು ತೆಪ್ಪಗೆ ಹುಲ್ಲು ಮೇಯ್ತಿದ್ದೀಯಲ್ಲಾ" ಎಂದು ಅದನ್ನು ತಡವರಿಸಿದ. ನಂತರ ಕರುವು ಕಾಣಿಸಿತು. ಪೂಜಾರಪ್ಪನನ್ನೂ ಕಂಡ.

ಕೈಜೋಡಿಸಿ ಅಡ್ಡಬಿದ್ದ. ಪೂಜಾರಪ್ಪನು, "ಏನ್ಮಾಡ್ತಿದ್ದೆ ಬೆಳಿಗ್ಗೆ ಜಗ್ಗೋಜಿ? ಹಣೆಯೆಲ್ಲಾ ಬೆವರಿದೆ. ಮುಖವೆಲ್ಲಾ ಧುಮುಗುಡ್ತಿದೆ" ಎಂದು ಕೇಳಿದ.

"ಮನಸ್ಸಿಗ್ಯಾಕೋ ಬೇಜಾರಾಗ್ತಿತ್ತು, ಅಂತ ಸಮಯದಲ್ಲಿ ಬೆವರು ಸುರಿಸೋಹಾಗೆ



ಮಾಡಿದರೆ ಮನಸ್ಸು ಹಗೂರಾಗುತ್ತೆ ಅಂತ ನೀವು ಹೇಳಿರ್ಲಿಲ್ಲಾ! ಅದಕ್ಕೇ ಈ ಟಗರಿನೊಂದಿಗೆ ಆಡ್ತಾ ಇದ್ದೆ. ಆದರೂ ಮನಸ್ಸಿಗ್ಯಾಕೋ ಹೇಗೋ ಇದೆ.

ಮೂರು ದಿನಗಳ ಹಿಂದೆಯೇ ಇವರಿಬ್ಬರೂ ಬರಬೇಕಾಗಿತ್ತು. ಅಜ್ಜಂಪುರದ ಸಂತೆಮಾಳದಲ್ಲಿ ಅವರಿಗೆ ಎಲ್ಲಾ ತಪಶೀಲನ್ನೂ ಹೇಳಿ, ಹೀಗೆ ಹೀಗೆ ಮಾಡಿ ಅಂತೆಲ್ಲಾ ಬಾಯಿಪಾಠ ಮಾಡಿಸಿದೆ. ಆ ಮೇಲೆ ಮೂರು ದಿನ ಅಲ್ಲೇ ಇದ್ದು ಊರಿನಲ್ಲಿ ಇನ್ನೇನಾದರೂ ಆಗ್ತದೇನೋ ನೋಡಿಕೊಂಡು, ಏನೂ ಇಲ್ಲದ್ದನ್ನು ನೋಡಿ ಹಿಂತಿರುಗಿ ಬಂದೆ. ಯಾಕೆ ಇನ್ನೂ ಇವರು ಬರ್ಲಿಲ್ಲ? ಏನಾರ ಪೆಚ್ಚು ಮಾಡಿಕೊಂಡರೋ ಹೇಗೋ!" ಎಂದು ಖಿನ್ನನಾಗಿ ನುಡಿದ.

"ಬೆಳೆದ ಹುಡುಗರು, ಅವರಿಗೆ ಅವರಲ್ಲಿರೋ ಧೈರ್ಯ, ಅವರಲ್ಲಿ ನಿನಗಿಲ್ವಲ್ಲಾ ಜಗ್ಗು! ಯಾಕೆ ಕಾತುರಪಡ್ತಿ, ಬೆಳಿಗ್ಗೆ ಪೂಜೆ ಮಾಡ್ತಿದ್ದಾಗ ಕವಡೆ ಹಾಕಿ ನೋಡಿದೆ. ಇವತ್ತು ಸಂಜೆ ಪೂಜೆ ಹೊತ್ತಿಗೆ ಬಂದೇ ಇರ್ತಾರೆ" ಎಂದು ಪೂಜಾರಪ್ಪ ಸಮಾಧಾನ ಹೇಳಿದ.

ತೋಪಿನ ಕಡೆಗೆ ಯಾರೋ ಬರುತ್ತಿದ್ದ ಕಾಲು ಸಪ್ಪಳ ಕೇಳಿಸಿತು. ಹತ್ತಿರ ಹತ್ತಿರಕ್ಕೆ ಹೆಜ್ಜೆಯ ಸದ್ದು ಕೇಳಿಸಿತು. ಕರುವು ಆ ಕಡೆಗೆ ಓಡಿತು. ಪೂಜಾರಪ್ಪನೂ, ಜಗ್ಗೋಜಿಯೂ ಕರುವು ಓಡಿದ ಕಡೆಯೇ ನೋಡುತ್ತಿದ್ದರು.

ಎರಡು ಕ್ಷಣದಲ್ಲಿ, ಅದವಾನಿ ಕಡೆಯವರ ಹಾಗೆ ಕಂಡ, ಕೋರೆ ರುಮಾಲಿನ ಇಬ್ಬರು ಯುವಕರು ಬಂದರು. ಅವರ ಮಧ್ಯೆ ಕರುವು ಛಂಗುತ್ತ ಬಂದಿತ್ತು. ಬಂದವರಿಬ್ಬರೂ ಪೂಜಾರಪ್ಪನಿಗೆ ನಮಸ್ಕಾರ ಮಾಡಿ, ಕಾಲ ಬಳಿಯಲ್ಲಿ ಗಂಟೊಂದನ್ನಿರಿಸಿದರು. ಜಗ್ಗೋಜಿಗೂ ನಮಸ್ಕಾರ ಮಾಡಿದರು. ಪೂಜಾರಪ್ಪನು ಕೊಟ್ಟ ಕುಂಕುಮವನ್ನು ಹಣೆಗಿರಿಸಿಕೊಂಡು ಕರುವಿನ ಮೈದಡವುತ್ತಾ ಕುಳಿತುಕೊಂಡು ತಮ್ಮ ವರದಿಯನ್ನು ಒಪ್ಪಿಸಿದರು.

"ಅಜ್ಜಂಪುರದ ಸಂತೆಮಾಳದಲ್ಲಿ, ಹೇಸರಕತ್ತೆಗಳಿಗೆ ಲಾಳ ಕಟ್ಟಿಸಲು ಹೋದಾಗ ಅಣ್ಣನಿಂದ ಮುಂದೆ ಮಾಡಬೇಕಾದ ತಪಶೀಲೆಲ್ಲವನ್ನೂ ತಿಳಿದೆವು. ಅದಕ್ಕೆ ಮೂರು ದಿನ ಮುಂಚೆಯೇ ಅಣ್ಣನು ನಾಲ್ಕು ಹೇಸರಕತ್ತೆಗಳನ್ನು ತನ್ನಿ ಎಂದು ಹೇಳಿದ್ದ. ಬ್ರಿಂಜಾರಿಗಳ ಹತ್ತಿರ ಅವನ್ನು ಕೊಂಡು ತರೋದಕ್ಕೆ ಮೂರು ದಿನಗಳಾಗಿತ್ತು. ಆಮೇಲೆ ಕೊರಕಲ ಬಳಿ ಬೂರುಗದ ಮರವನ್ನು, ಬೇರಿಗೆ ಸುರಂಗ ಇಟ್ಟು ಹೊಡೆದು ರಸ್ತೆಗೆ ಅಡ್ಡಲಾಗಿ ಬೀಳಿಸಿದೆವು. ಗುಡುಗಿನ ಗಲಾಟೆಯಲ್ಲಿ ಸುರಂಗದ ಶಬ್ದ ಯಾರಿಗೂ ಕೇಳಿಸಲಾರದು ಎಂದು ಧೈರ್ಯ ಇತ್ತು. ರಾತ್ರಿ ಜೋಗಿ ಮಂಟಪದಲ್ಲಿ ಪೂಜೆ ಹಾಕಿದೆವು. ಅಣ್ಣ ಊಹಿಸಿದಂತೆ ಗಾಡಿಯವರು ಮಂಟಪಕ್ಕೆ ಬಂದಾಗ ನೈವೇದ್ಯಕ್ಕೆ ಪಾಯಸಮಾಡಿ ಕುಡಿಸಿದೆವು. ಎಣಿಸಿ ನೂರಾ ಎಂಟು ದತ್ತೂರದ ಬೀಜಗಳನ್ನು ಹಾಕಿದ್ದೆವು. ಅಷ್ಟಕ್ಕೇ ಹ್ಯಾಗೆ ಮೈಮರೆತು ಬಿದ್ದರು ಅಂತೀರಿ! ಓಡಿಬಂದು ಗಾಡಿಯ ಹೇರನ್ನೆಲ್ಲಾ ಲಿಂಗದಹಳ್ಳಿ ತೋಪಿಗೆ ಹೇಸರಕತ್ತೆಗಳ ಮೇಲೆ ಸಾಗಿಸಿದೆವು. ಅಲ್ಲಿಂದ ತುಂಕೂರಿಗೆ ಹೋಗಿ ಹೇರು ಮಾರಿದಾಗ ನೂರು ಹಣ ಬಂತು. ಸ್ವಲ್ಪ ಚೌಕಾಶಿ ಮಾಡಿದ್ದರೆ ಇನ್ನೊಂದು ಹತ್ತು ಹಣ

ಬಂದಿರಬೋದೇನೋ, ಆದರೆ ಈವತ್ತೇ ಹಿಂತಿರುಗಿ ಬರಬೇಕಾದ್ದರಿಂದ ವೇಳೆಮಾಡ ಸಿಕ್ಕಿದ್ದನ್ನು ಗಿಟ್ಟಿಸಿಕೊಂಡು ಬಂದೆವು."

ಜಗ್ಗೋಜಿಯ ಮುಖದಲ್ಲಿ ಕೋಪವು ಮಿಡಿಯುತ್ತಿತ್ತು. ನಡುಗುತ್ತಿದ್ದ ದನಿಯಲ್ಲಿ

"ಎಷ್ಟು ಬಾರಿ ನಿನಗೆ ಹೇಳಿಲ್ಲ, ಕನ್ನು! ಹೇಳಿದ್ದನ್ನೆಲ್ಲಾ ಚಾಚೂ ತಪ್ಪದೆ ಮಾಡಬೇಕು ಅಂತ. ಅರಳೆಯ ದೊಡ್ಡ ಹೇರನ್ನೆಲ್ಲಾ, ಸಣ್ಣ ಸಣ್ಣ ಗಂಟುಮಾಡಿ, ನಂತರ ತುಂಕೂರಿನಲ್ಲಿ ಮಾರಬೇಕು ಅಂತ ಹೇಳಲಿಲ್ಲವೇ? ಲಕ್ಕೋಜಿ ನಿಂಗೂ ಹೇಳಿರ್ಲಿಲ್ಲವೇ? ಹಾಗೇಕೆ ಮಾಡಲಿಲ್ಲ?" ಎಂದನು.

"ದೊಡ್ಡ ಹೇರು ಬಿಚ್ಚಿ, ಸಣ್ಣ ಸಣ್ಣ ಗಂಟು ಮಾಡೋದಕ್ಕೆ ಸುಮಾರು ಹೊತ್ತಾಗುತ್ತೆ, ತೂಕ ಹಾಕಿಯೇ ಅರಳೇನ ಮಾರೋದಲ್ವೇ ಅಂತ ನಾನೇ ಹೇಳಿದ" ಎಂದ ಲಕ್ಕೋಜಿ. ತನ್ನ ಕೋರೆ ರುಮಾಲನ್ನು ತೆಗೆದಿರಿಸಿದ, ಮಿರುಮಿರುಗುವ ನುಣ್ಣಗೆ ಬೋಳಿಸಿದ ಬಟ್ಟ ತಲೆ!!

"ಲಕ್ಕೋಜಿ! ಈಗ ಹೇಳೋದನ್ನು ಮರಿಯಬ್ಯಾಡ. ದೊಡ್ಡೋರು ಹೇಳಿದ ಹಾಗೆ ಚಾಚೂ ತಪ್ಪದೆ ಕಿರಿಯರು ಕೇಳಿದರೇ ಚೆನ್ನು. ಹಾಗೆ ಮಾಡಿದರೇನೇ, ಚಿಕ್ಕೋರು ದೊಡ್ಡೋರಾದಾಗ ಬುದ್ಧಿವಂತರಾಗಬಹುದು. ಕಿವಿಗೊಟ್ಟು ಕೇಳಿ ಇಬ್ಬರೂ, ಕಲಾಯಿ ಮಾಡೋನ ವೇಷ ಹಾಕ್ಕೊಂಡು ಮೂರು ವಾರಗಳ ಕಾಲ ಅಜ್ಜಂಪುರ, ಬೀರೂರು, ಲಿಂಗದಹಳ್ಳಿ, ಅಲ್ಲೆಲ್ಲಾ ಸುತ್ತಾಡಿದೆ. ಆಗ ತಿಳಿದುಬಂತು. ಸಿರಾ ನವಾಬನ ಅರಮನೆಯನ್ನು ಕೆಡವಿದಾಗ, ಅಲ್ಲಿದ್ದ ತಳವಾರ ತುರ್ತು ವರ್ಗಮಾಡಿಸಿಕೊಂಡು ಹೋದ ಅಂತ. ನವಾಬನ ಜನಾನಾದಲ್ಲಿದ್ದ ಲಂಬಾಣಿ ಲಖಿಂಬಾಯಿಯ ಕತ್ತಿನಲ್ಲಿ ಹತ್ತು ಸಾವಿರ ಹೊನ್ನು ಬಾಳುವ ವಜ್ರ ಪಚ್ಚೆಯ ಅಡ್ಡಿಕೆ ಇತ್ತೆಂದೂ ಜನರು ಆಡಿಕೊಳ್ಳುತ್ತಿದ್ದರು. ವರ್ಗವಾದ ತಳವಾರರು ಅಜ್ಜಂಪುರಕ್ಕೆ ಬಂದಿದ್ದರೆಂದೂ ತಿಳಿಯಿತು. ಕುಂಪಣಿಯವರಿಗೂ ತಳವಾರರ ಮೇಲೆ ಕಣ್ಣಿತ್ತು ಎಂದು ಜನರನ್ನುತ್ತಿದ್ದರು. ತಳವಾರರ ಲಾಯದ ಆಳನ್ನು ಸುಬೇದಾರ್ರೇ ಗುಪ್ತಚಾರನನ್ನಾಗಿ ಕಳಿಸಿದ್ದರೆಂದೂ ಜನ ಆಡಿಕೊಳ್ಳುತ್ತಿದ್ದರು. ಅಳಿಯನಿಗೆ ನವಿರುಹತ್ತಿ ಕಳಿಸ್ಬೇಕು ಅಂತ ತಳವಾರರು ಕಾಳೇಗೌಡನಿಗೆ ಹೇಳಿದ್ದೂ ತಿಳಿಯಿತು. ಅಡ್ಡಿಕೇನ ಅರಳೇ ಮೂಟೇಲಿ ಬೀರೂರಿಗೆ ಸಾಗಿಸ್ತಾರೆ ಎಂದು ನನಗೆ ಅನುಮಾನ ಬಂತು. ಇಲ್ಲದೇ ಇದ್ದರೆ, ಕೆಲವೇ ದಿನಗಳಲ್ಲಿ ಸುಬೇದಾರರು ಬಂದು ಜರೂರು ಜಪ್ತಿ ಮಾಡಬೋದು ಅಂತ ತಳವಾರರಿಗೂ ಅನುಮಾನ ಇದ್ದೇ ಇರಬೇಕು. ದೊಡ್ಡ ಹೇರನ್ನು ಸಣ್ಣ ಸಣ್ಣ ಗಂಟು ಮಾಡಿದ್ದರೆ ನಿಮಗೆ ಸಿಕ್ತಿತ್ತು-ತ್ಲು-ಈಗೇನು ಮಾಡೋದು. ಕೆಟ್ಟ ಮೇಲಾದರೂ ನಿಮಗೆ ಬುದ್ಧಿ ಬಂದರೆ ಸಾಕು" ಎಂದು ಜಗ್ಗೋಜಿ ನಿರಾಸೆಯ ದನಿಯಲ್ಲಿ ಹೇಳಿದ.

ಜಗ್ಗೋಜಿಯ ಕಾಲಿಗೆ ಬಿದ್ದು ಲಕ್ಕೋಜಿಯು ಹೇಳಿದ:

"ಅಣ್ಣಾ! ನನ್ನ ಮಾತು ಕೇಳಿ ಕನ್ನೋಜಿ ಹೀಗೆ ಆಡಿದ. ತಪ್ಪಾಯ್ತು. ಕೆನ್ನೆಗೆ ಹೊಡಕೊಂಡು ಹೇಳ್ತೀನಿ, ಇನ್ನು ಮ್ಯಾಗೆ ಹೀಗೆ ಮಾಡೊಲ್ಲ.

ನೀನು ಹೇಳಿದ್ಹಾಂಗೇ, ಚಾಚೂ ತಪ್ಪದೆ ಎಲ್ಲವನ್ನೂ ಮಾಡಿದೆವು. ಹತ್ತಿ ಹೇರಿನಲ್ಲಿ





ಈ ಸಣ್ಣ ತವರದ ಪೆಟ್ಟಿಗೆಯು ಸಿಕ್ಕಿತು. ಅದರಲ್ಲಿ ಪಚ್ಚೆ ವಜ್ರದ ಅಡ್ಡಿಕೆ ಇತ್ತು. ಅಣ್ಣಂಗೆ ಇದು ಗೊತ್ತಿರಲಾರದು. ದೊಡ್ಡ ಹೇರು ಮಾರಿದರೆ ಸಿಕ್ಕಿ ಹಾಕಿಕೋಬಹುದು ಅಂತ ಅಣ್ಣಾ ಹೀಗೆ ಹೇಳಿರಬಹುದು. ಪೂಜಾರಪ್ಪನ ಹತ್ತಿರ ಹೋದಾಗ ಪರೀಕ್ಷೆ ಮಾಡೋಣ ಎಂದು ನಾನೇ ಸಲಹೆ ಮಾಡಿದೆ. ಕನ್ನೋಜಿಯೂ 'ಹ್ಞೂ' ಅಂತ ತಲೆ ಕೆಟ್ಟು ಒಪ್ಪಿದ."

"ನಮ್ಮಿಬ್ಬರಿಗೂ ಏನೋ ಕೆಟ್ಟ ಬುದ್ಧಿ ಬಂತು. ಹುಡುಗ ಬುದ್ಧಿ. ನಿನ್ನ ಮನಸ್ಸನ್ನು ಅನ್ಯಾಯವಾಗಿ ನೋಯಿಸಿದೆವು. ನಮ್ಮ ತಲೆಮೇಗೆ ಅಂಗೈ ಇಟ್ಟು ಕಲಾಯಿಮಾಡು. ಹೇಳಿದ ಹಾಗೆ ಕೇಳೋತರಹ ಕಾಲಿಗೆ ಲಾಳ ಕಟ್ಟು. ನಮ್ಮ ತಪ್ಪು ಮರೆತುಬಿಡಣ್ಣಾ!" ಎಂದು ಲಕ್ಕೋಜಿ, ಕನ್ನೋಜಿ ಇಬ್ಬರೂ ತಿರುಗಿ ಅಡ್ಡಬಿದ್ದು ತವರದ ಪೆಟ್ಟಿಗೆಯನ್ನು ಹೆಗಲ ಚೀಲದಿಂದ ತೆಗೆದು ಜಗ್ಗೋಜಿಯ ಕೈಲಿಟ್ಟರು.

"ಬಲು ಪಸಂದಾಯ್ತು! ಕನ್ನು, ಲಕ್ಕು, ಅಣ್ಣನ್ನೇ ಪರೀಕ್ಷೆ ಮಾಡುಕ್ಕೆ ಹೊಂಟ್ರಲ್ಲಾ! ನಿಮ್ಮ ಧೈರ್ಯಕ್ಕೆ ಮೆಚ್ಚಿದೆ. ಹಾಗಿರಬೇಕು. ದೊಡ್ಡೋರು ಹೇಳಿದ ಹಾಗೆ ಗೆರೆ ಮೀರದೆ ಕೇಳ್ಬೇಕು. ಆದರೆ ನಿಮ್ಮ ಸ್ವಂತ ಬುದ್ಧೀನೂ ಉಪಯೋಗಿಸಿ ಬೆಳೆಸ್ಕೋಬೇಕು" ಎಂದ ಪೂಜಾರಪ್ಪ, ಜಗ್ಗೋಜಿಯು ಕೊಟ್ಟ ತೆರೆದ ತವರದ ಪೆಟ್ಟಿಗೆಯನ್ನು ನೋಡುತ್ತಾ.

ಜಗ್ಗೋಜಿಯ ಮುಖದ ಮೇಲೆ ಸಂತಸದ ನಗೆಯಾಡುತ್ತಿತ್ತು.

-ಹಾಲಕ್ಕಿ ಸುಡಿಯತ್ತೈತಿ
ಮಂಗಳವಸ್ತು ಗಟ್ಟಿಯೈತಿ-

1791-ಅಂಬಾಜಿ ದುರ್ಗಕ್ಕೆ ಕುಂಪಣಿಯ ಸೇನೆಯು ಮುತ್ತಿಗೆ ಹಾಕಿತು. ಸುಲ್ತಾನನ ಸಹಾಯವು ಸಕಾಲದಲ್ಲಿ ಬರಲಿಲ್ಲ. ಖಿಲ್ಲೇದಾರ್ ಮಲ್ಲಾನಾಯಕನು ಆ ದಿನ ಕೋಟೆಯಾಚೆ ಹೊರಟ. ಹೊರಟ ಮೂರು ದಾರಿಯಲ್ಲಿ ಕೋಟೆಯಾಚೆ ಹೊರಟ. ಹೊರಟ ಮೂರು ದಿನಗಳಲ್ಲಿ ದುಶ್ಶಕುನಗಳು ಆದಾಗ, ಎಂಟು ತಿಂಗಳ ಹಿಂದೆ ಮದುವೆಯಾಗಿ ಬಂದಿದ್ದ ಆತನ ಹೆಂಡತಿ, ತನ್ನ ಮಂಗಳ ವಸ್ತುಗಳನ್ನು ಹಿತ್ತಾಳೆ ಸಂಪುಟದಲ್ಲಿರಿಸಿ ತುಳಸಿಕಟ್ಟೆಯ ಬಳಿ ಹುದುಗಿರಿಸಿ, ಮೂಗು ಬಟ್ಟಿನ ವಜ್ರವನ್ನು ಅರೆದು ನುಂಗಿ, ಮುತ್ತೈದೆ ಸಾವನ್ನಪ್ಪಿದ್ದಳು, ಎಂದು ಪ್ರತೀತಿ.

"ದೇವಸ್ಥಾನಕ್ಕೆ ಹೊರಟಿದ್ದೀನಿ, ಇವತ್ತು ರಾಮಲಿಂಗಯ್ಯನವರ ಸೇವೆ. ದೇವರಿಗೆ ಬಲು ಚೆನ್ನಾಗಿ ಅಲಂಕಾರ ಮಾಡಿರುತ್ತಾರೆ. ನೀನೂ ಬರ್ತೀಯಾ?" ಎಂದು ಕುಮಾರಯ್ಯನವರು ತಮ್ಮ ಹೆಂಡತಿಯನ್ನು ಸಂಜೆ ಏಳು ಗಂಟೆ ಹೊತ್ತಿನಲ್ಲಿ ಕೇಳಿದರು.

"ತುಂಬಾ ಆಸೆಯಾಗಿದ್ದೆ. ಬೆಳಿಗ್ಗೆ ಬಂದು ಕರೆದು ಹೋಗಿದ್ದರು. ಆದರೆ ಸಾಯಂಕಾಲದಿಂದ ಹೊರಗೆ ಹೋಗೋ ಆಗಿಲ್ಲ" ಎಂದು ಆಕೆಯು ಹೇಳಿದಳು.

"ಅದಕ್ಕೆ ಯಾರೇನು ಮಾಡುಕ್ಕೆ ಆಗುತ್ತೆ. ಸಮಯ ಸಿಕ್ಕಾಗ ನನ್ನನ್ನೇನಾದರೂ ಕೇಳಿದರೆ ಹೇಳ್ತೀನಿ" ಎಂದು ಹೇಳಿ ಕುಮಾರಯ್ಯನವರು ಕೊಳದ ಬೀದೀಲಿ ನಡೆದುಹೋದರು.

ರಾತ್ರಿ ಮನೆಗೆ ಹಿಂತಿರುಗಿದಾಗ ಒಂಭತ್ತು ಗಂಟೆಯನ್ನು ಕೊತ್ವಾಲರ ಛಾವಡಿಯಲ್ಲಿ ಬಾರಿಸುತ್ತಿದ್ದರು. ಊಟಮಾಡಿ ಹೊರಜಗುಲಿಯ ಮೇಲೆ ಎಲಡಿಕೆ ಜಗಿಯುತ್ತಾ ಕುಳಿತಾಗ "ಲೇ... ಲೇ..." ಎಂದು ಮೆಲುದನಿಯಲ್ಲಿ ಕೂಗಿದರು. ಆಕೆಯು ಹಜಾರದಿಂದ ಬಂದು ದೂರದಲ್ಲಿ ನಿಂತುಕೊಂಡಳು.

"ಕೂತುಕೋ ಎರಡು ಕ್ಷಣ. ನಿನ್ನ ಹತ್ತಿರ ಮಾತನಾಡೋದು ಇದೆ," ಎಂದು ಕುಮಾರಯ್ಯನವರು ಹೇಳಿದಾಗ ಆಕೆ ದೂರದಲ್ಲೇ ಮುದುಡಿ ಕೂತುಕೊಂಡಳು.

"ಈವತ್ತು ದೇವರಿಗೆ ಮಂಗಳಾರತಿಯಾಗಿ, ಪ್ರಸಾದದ ವಿನಿಯೋಗಕ್ಕೆ ನಿಂತಿದ್ದಾಗ ರಾಮಲಿಂಗಯ್ಯನವರು ನನ್ನ ಬಲಗಡೆಯಲ್ಲೇ ಇದ್ದರು. ಈ ವರ್ಷ ತಮ್ಮ ಮಗನಿಗೂ ಮದುವೆ ಮಾಡಬೇಕೆಂದಿದ್ದಾರೆಂದು ಹೇಳಿದರು. ನಿಮ್ಮ ಮಗಳ ಜಾತಕವನ್ನೂ ಕೊಟ್ಟರೆ ನೋಡಿಸುತ್ತೇನೆ ಎಂದರು. ಆಮೇಲೆ ಬಂದು ನೋಡ್ತೀನಿ ಎಂದು ಹೇಳಿದೆ. ನಿನ್ನ ಇರಾದೆ ಏನು?" ಎಂದು ಕೇಳಿದರು.

"ರಾಮಲಿಂಗಯ್ಯನವರ ಮನೆಗೆ ಹೆಣ್ಣು ಕೊಡುಕ್ಕೆ ಪುಣ್ಯ ಮಾಡಿರಬೇಕು ಅಂದ್ರೇ... ತಲತಲಾಂತರದಿಂದ ಅವರ ಮನೆ ಹಿರಿಯ ಸೊಸೆಯರೆಲ್ಲರಿಗೂ ಮುತ್ತೈದೆ ಸಾವೇ ದೊರಕಿತು. ನಮ್ಮ ತಂದೆ ಮನೇಲಿ, ತಂದೆ ಮನೆ ಮಾತ್ರ ಯಾಕೆ, ಚಿಂತಾಮಣಿಯ ನಮ್ಮವರ ಮನೆಗಳಲ್ಲೆಲ್ಲಾ ಮದುವೆಯಾದಾಗ, ರಾಮಲಿಂಗಯ್ಯನವರ ಮನೆತನದ ಹಿರಿಯ ಸೊಸೆಯ ಕೈಯಲ್ಲೇ ಮಾಂಗಲ್ಯವನ್ನು ಮೊದಲು ಮುಟ್ಟಿಸಿ, ಆಮೇಲೆ ಹಿರಿಯರ ಕೈಲಿ ಮುಟ್ಟಿಸುತ್ತಿದ್ದರು.

ಅವರ ನಂಟರು, ಸೋದರ ಸಂಬಂಧದವರು, ಬೇಕಾದಷ್ಟು ಜನ ಶ್ರೀಮಂತರು ಚಿಂತಾಮಣಿಯಲ್ಲೇ ಇದ್ದಾರೆ. ಎರಡು ತಲೆಮಾರಿನಿಂದ ಇವರು ಕೋಲಾರಕ್ಕೆ ಬಂದು ನೆಲೆಸಿರೋದು. ಆ ಕಡೆ ಹೆಣ್ಣುಗಳೂ ಬೇಕಾದಷ್ಟು ಇವೆ! ನಮಗೆಲ್ಲಿ ಅಂಥ ಪುಣ್ಯ!! ಜಾತಕಕೊಡೋದು ಕೊಡಿ. ಹುಡುಗಿ ಪುಣ್ಯ ಇದ್ದ ಹಾಗಾಗುತ್ತೆ," ಎಂದಳು ಆಕೆ.

"ನನಗೂ ಹಾಗೆಯೇ ಅನ್ನಿಸಿತ್ತು. ಆದರೆ ಒಬ್ಬನೇ ಮಗ ಅವರಿಗೆ. ತುಂಬಿದ ಮನೆ ಅಲ್ಲ. ನೀನೇನಂತೀಯೋ ಅಂತ ಕೇಳಿದೆ" ಎಂದರು ಕುಮಾರಯ್ಯನವರು.

"ಒಬ್ಬನೇ ಮಗ ದಿಟ! ಆದರೆ ಅವರ ಮನೇಲಿ ಯಾವಾಗಲೂ ಎಂಟು ಹತ್ತು

ಹುಡುಗರನ್ನು ಸಾಕುತ್ತಾ ಓದಿಸುತ್ತಾ ಇದಾರಲ್ಲ! ಗುಂಪಿನಲ್ಲಿ ಬೆಳೆದೋನು, ಅದನ್ನಾ... ಯೋಚನೆ ಮಾಡಬೇಕು" ಎಂದಳು ಆಕೆ.

"ನಾಳೇನೆ ಹೋಗಿ ಜಾತಕ ಕೊಟ್ಟು ಬರ್ತೀನಿ. ಮೂರು ದಿನದಿಂದ ಬಲಭುಜ ಹಾರ್ತಾ ಇದೆ. ಏನೋ ಶುಭ ಸೂಚನೆಗೇ ಇರಬೇಕು" ಎಂದು ಕುಮಾರಯ್ಯನವರಂದರು.

* * * *

ಬಂದವರನ್ನೆಲ್ಲಾ ಆದರದಿಂದ ಮಾತಾಡಿಸಿ, ಸಂತುಷ್ಟಿಯಾಗಿ ಭೋಜನ ಮಾಡಿಸಿ, "ನಿಶ್ಚಿತಾರ್ಥಕ್ಕೆ ನೀವು ಬಂದ ಹಾಗೆಯೇ ವಿವಾಹಕ್ಕೂ ಬಂದು ಮಕ್ಕಳನ್ನು ಹರಸಿ ಹೋಗಬೇಕು," ಎಂದು ರಾಮಲಿಂಗಯ್ಯನವರೂ ಅವರ ಹೆಂಡತಿಯೂ ಹೇಳಿ ಕಳಿಸಿ ಕೊಟ್ಟಾಗ ರಾತ್ರಿ ಹತ್ತು ತಾಸು ಆಗಿತ್ತು. ತಮ್ಮ ಕೊಠಡಿಗೆ ಹೋಗುವಾಗ, "ರಾಜನನ್ನೂ ಕರಕೊಂಡು ಬಾ. ಒಂದೆರಡು ಮಾತು ಹೇಳೋದಿದೆ" ಎಂದು ರಾಮಲಿಂಗಯ್ಯನವರು ಹೆಂಡತಿಗೆ ಹೇಳಿದರು. ಬಾಗಿಲೆಲ್ಲಾ ಹಾಕಿಕೊಂಡು, ಬಂದುಬಿಟ್ಟೆ ಎಂದು ಆಕೆಯು ಹೇಳಿ, ಆಳುಕಾಳುಗಳಿಗೆ ಹುಷಾರು ಹೇಳಿ "ರಾಜ, ರಾಜ" ಎಂದು ಹಜಾರಕ್ಕೆ ಬಂದಾಗ ಕೂಗಿದಳು. ಉಪ್ಪರಿಗೆಯ ಮೇಲಿಂದ ಮಗನು, "ಯಾಕಮ್ಮ! ಏನು ಬೇಕಾಗಿತ್ತು?" ಎಂದು ಕೇಳುತ್ತಾ ಇಳಿದು ಬಂದ. "ನಿಮ್ಮಪ್ಪಂದ ಏನೋ ಮಾತನಾಡಬೇಕಂತೆ, ಬಾ" ಎಂದು ಅವನನ್ನೂ ಕರೆದುಕೊಂಡು ಯಜಮಾನರ ಕೊಠಡಿಗೆ ಹೋದಳು. ಮಗನನ್ನೂ ಹೆಂಡತಿಯನ್ನೂ ಕೂತುಕೊಳ್ಳಲು ಹೇಳಿ, ರಾಮಲಿಂಗಯ್ಯನವರು ಕಬ್ಬಿಣದ ಪೆಟ್ಟಿಗೆಯಿಂದ ಕೃಷ್ಣಾಜಿನದ ಚೀಲವೊಂದನ್ನು ಹೊರಕ್ಕೆ ತೆಗೆದರು. ಅದನ್ನು ತೆರೆದಾಗ ತಾಮ್ರದ ಶಾಸನವೊಂದಿತ್ತು.

"ರಾಜರಾಜ, ನಮ್ಮ ವಂಶದಲ್ಲಿ ನಡೆಯುತ್ತ ಬಂದಿರುವ ಸಂಪ್ರದಾಯವಿದು. ಮೊದಲ ಮಗನಿಗೆ ಮದುವೆಯಾಗುವ ಕಾಲದಲ್ಲಿ, ಅವನ ಕೈಲಿ ತಂದೆಯು ಈ ಶಾಸನವನ್ನು ಕೊಟ್ಟು ಪ್ರಮಾಣ ಮಾಡಿಸಬೇಕು. ನಮ್ಮ ವಂಶದ ವಿಷಯವನ್ನೂ ತಿಳಿದುಕೊಳ್ಳುವುದು ಒಳ್ಳೆಯದು. ಅರವತ್ತರ ಶಾಂತಿಯಾದ ಮೇಲೆ ನೀನು ಈ ಮನೆಯಲ್ಲಿ ಹುಟ್ಟಿ ಬಂದಿದ್ದು. ಕೇಳು!

ನನ್ನ ಮದುವೆ ನಿಶ್ಚಯವಾದಾಗ ನಮ್ಮ ತಂದೆಯು ಈ ಶಾಸನವನ್ನು ನನ್ನ ಕೈಲಿಟ್ಟು 'ರಾಮಾ! ಇದನ್ನು ಓದಿಕೋ. ನಿಮ್ಮ ಅಮ್ಮ ಪೂಜೆ ಮಾಡುತ್ತಿರುವ ಗೌರೀ ಪೆಟ್ಟಿಗೆಯಲ್ಲಿ ಮಂಗಳ ವಸ್ತುಗಳೆಲ್ಲವನ್ನೂ ಇಟ್ಟು ಮೊದಲ ಸೊಸೆಗೆ ಕೊಡುವ ಸಂಪ್ರದಾಯ ನಮ್ಮ ವಂಶದಲ್ಲಿ ಲಾಗಾಯ್ತಿನಿಂದ ನಡೆದುಬಂದಿದೆ. ನೀನು ಬೆಳೆದು, ನಿನಗೆ ಮಗನಾಗಿ, ಅವನ ಮದುವೆಯ ನಿಶ್ಚಿತಾರ್ಥವಾದಾಗ, ಅವನ ಕೈಲಿ ಈ ಶಾಸನವಿಟ್ಟು, ಅವನ ಹೆಂಡತಿಯು ಹಬ್ಬ ಹರಿದಿನಗಳಲ್ಲಿ, ಪೂಜಾಕಾಲದಲ್ಲಿ ಈ ಮಂಗಳ ವಸ್ತುಗಳನ್ನೇ ಉಪಯೋಗಿಸಬೇಕೆಂದು ನೀನು ಪ್ರಮಾಣ ಮಾಡಿಸಬೇಕು' ಎಂದು ನನ್ನ ಕೈಲಿ ಪ್ರಮಾಣ ಮಾಡಿಸಿದ್ದರು. ಹೀಗಂತ ನೀನು ಈಗ ನನ್ನೆದುರಿಗೆ ಪ್ರಮಾಣ ಮಾಡಬೇಕು" ಎಂದು ಹೇಳಿದರು. ತಾಮ್ರದ ಶಾಸನವನ್ನೂ ಮಗನ ಕೈಲಿರಿಸಿದರು.



ಅಮ್ಮನ ಅಂಗೈಯಲ್ಲಿ ಮಗನ ಕೈ ಇರಿಸಿ ಪ್ರಮಾಣ ಮಾಡಿಸಿದರು.

ತಾಮ್ರದ ಶಾಸನವನ್ನು ತೆಗೆದುಕೊಂಡು ಉಪ್ಪರಿಗೆಯ ತನ್ನ ಕೊಠಡಿಗೆ ಹೋದ ರಾಜರಾಜಯ್ಯ ಕಂದೀಲು ದೊಡ್ಡದು ಮಾಡಿ ಓದಲು ಆರಂಭಿಸಿದ.

* * * *

ಸ್ವಸ್ತಿ! ಶಾಲಿವಾಹ ಶಕ 1820ರ ಚೈತ್ರ ಬಹುಳ ಸಪ್ತಮೀ ಶುಕ್ರವಾರ ಚಿಂತಾಮಣಿಯ ಬಸವನ ಬೀದಿಯ ಮುತ್ಯಾಲಪ್ಪನು ವಂಶಸ್ಥರಿಗೆ ಬರಿಸಿಟ್ಟ ನಿರೂಪ.

ನಮ್ಮ ತಾಯಂದಿರಾದ ಅಚ್ಚಮ್ಮನವರು ಹದಿನೆಂಟನೇ ವಯಸ್ಸಿನಲ್ಲಿ ಯಜಮಾನರನ್ನು ಕಳೆದುಕೊಂಡು, ಅನಂತರ ಹದಿನೇಳು ವರ್ಷಗಳು ವ್ಯಾಪಾರ ವಹಿವಾಟು ಎಲ್ಲವನ್ನೂ ದಕ್ಷತೆಯಿಂದ ನಡೆಸಿಕೊಂಡು ಬಂದು, ನನಗೆ ವಹಿಸಿಕೊಟ್ಟಾಗ ಐಶ್ವರ್ಯವನ್ನು ಹತ್ತರಷ್ಟು ಹೆಚ್ಚಿಸಿದ್ದರು. ನಮ್ಮ ವಂಶದಲ್ಲಿ ಎಂದೆಂದಿಗೂ ಹಿರಿಯ ಸೊಸೆಗೆ ವೈಧವ್ಯ ಪ್ರಾಪ್ತಿಯಾಗಬಾರದು ಎಂದೇ ಆಕೆಯ ನಿರಂತರ ಹಂಬಲವಾಗಿತ್ತು. ಆಕೆಯು 60ರ ಮುದಿತನದಲ್ಲಿ, ಕನಸೊಂದು ಬಿದ್ದು, ಅದಕ್ಕೆ ಅನುಸಾರವಾಗಿ ಅಂಬಾಜಿದುರ್ಗದ ಕಡಿದಾದ ಸಾವಿರ ಮೆಟ್ಟಲುಗಳನ್ನೂ, ಯಾರು ಎಷ್ಟು ಬೇಡ ಅಂದರೂ ಕೇಳದೆ, ಹತ್ತಿಹೋಗಿ ಖಿಲ್ಲೇದಾರ್ ಮಲ್ಲಾನಾಯಕನಿದ್ದ, ಈಗ ಪಾಳುಬಿದ್ದಿರುವ ಹದಿನೆಂಟಂಕಣದ ಮನೆಯ ತುಳಸಿಕಟ್ಟೆಯ ಬಳಿ ಅಗೆಸಿದಳು. ಕನಸಿನಲ್ಲಿ ಕಂಡುಬಂದಿದ್ದ ಹಿತ್ತಾಳೆ ಸಂಪುಟವೊಂದು ದೊರಕಿತು. ಅದರೊಳಗೆ ಗೌರಿ ವಿಗ್ರಹವೊಂದು, ಒಂದು ಜತೆ ವಜ್ರದ ಒಲೆಗಳು, ಕಾಲುಂಗರ, ಕೆಂಪುಪಚ್ಚೆಯ ಬಾವಲಿಗಳು ಇದ್ದುವು. ಅದನ್ನು ತಂದು ನನ್ನ ಕೈಲಿಟ್ಟು ಪ್ರಮಾಣ ಮಾಡಿಸಿದಳು.

"ನಮ್ಮ ವಂಶದಲ್ಲಿ ಇನ್ನು ಮುಂದೆ ಬರುವ ಹಿರಿಯ ಸೊಸೆಗೆ ಈ ಮಂಗಳ ವಸ್ತುಗಳನ್ನು ಕೊಡಬೇಕು. ಆಕೆಯು ಪೂಜಾಕಾರ್ಯಕ್ಕೆ ಇವುಗಳನ್ನೇ ಉಪಯೋಗಿಸಬೇಕು. ಹೀಗೆ ಮಾಡುತ್ತೇನೆಂದು ಮಗನ ನಿಶ್ಚಿತಾರ್ಥವಾದಾಗ ತಂದೆಯು ಪ್ರಮಾಣ ಮಾಡಿಸಬೇಕು. ಇದು ಕನ್ಯಕಾ ಪರಮೇಶ್ವರಿಯ ಆಣತಿ. ವಂಶೀಯರಾರಾದರೂ ಈ ನಿಯಮವನ್ನು ಅನುಸರಿಸದೆ ಹೋದರೆ ನಮ್ಮ ವಂಶವು ಅಂದೇ ಮುಕ್ತಾಯವಾಗಲಿ-ಹಾಗಾಗಿಯಾದರೂ ವೈಧವ್ಯ ಬಾರದೆ ಇರಲಿ."

ಈ ಪ್ರಮಾಣವನ್ನು ನಾನೂ ಮಾಡಿದೆ. ನಮ್ಮ ತಾಯಿಯು ಬಲು ಧೀರಳು ಎಂದಿದ್ದೆ. ಆದರೆ ವೈಧವ್ಯದ ಕೊರಗು ಅಷ್ಟು ಕಾಲವೂ ಆ ರೀತಿ ಕಾಡಿಸಿತ್ತೆಂಬುದು ತಿಳಿದಿರಲಿಲ್ಲ. ನಮ್ಮ ಮನೆಗೆ ಬಂದ ಯಾವ ಹೆಣ್ಣು ಮಗುವಿಗೂ ಈ ಸಂಕಟವು ಬಾರದೇ ಇರಲಿ ಎಂದೇ ನನ್ನ ಹಿರಿಯ ಹಂಬಲವಾಗಿದೆ. ಈ ನಿಯಮವು ಆಚಂದ್ರಾರ್ಕವಾಗಿ ನಡೆದು ಬರಲಿ.

ಮುತ್ಯಾಲಪ್ಪನ ಹಿರಿಬೆರಳ ಗುರುತು.

ಇದನ್ನು ಕಷ್ಟಪಟ್ಟು ಓದಿದ ರಾಜರಾಜಯ್ಯನಿಗೆ ನಿದ್ರೆಯು ಬೇಗ ಬರಲಿಲ್ಲ. ತನ್ನ ಮದುವೆ, ಹೆಂಡತಿ, ಸಂಸಾರ, ಮಗ, ಅವನ ಮದುವೆಯ ನಿಶ್ಚಿತಾರ್ಥ, ಆಗ ತಾನು

ಇದೇ ನಿಯಮವನ್ನು ಆಚರಿಸುವುದು-ಇವೆಲ್ಲದರ ಊಹೆಯ ಚಿತ್ರಗಳೇ ಬಲು ಹೊತ್ತು ಕಣ್ಣುಮುಂದೆ ಮಿಂಚುತ್ತಿದ್ದುವು, ಕಾಡುತ್ತಿದ್ದುವು.

* * * *

ಕೋಲಾರದ ಅಂತರ್ಗಂಗೆಯ ಬೆಟ್ಟದ ಕಿಬ್ಬಿಯಲ್ಲಿ ಮಾರಿ ಗುಡಿಯೊಂದಿದೆ. ಅದರ ಪಡಸಾಲೆಯಲ್ಲಿ ಮಲಗಿದ್ದವನೊಬ್ಬ ಕತ್ತಲಾಗಿದ್ದಾಗಲೇ ಎದ್ದು, ಕೊಳದಲ್ಲಿ ಮಿಂದು, ವೇಷಭೂಷಣಗಳೆಲ್ಲವನ್ನೂ ಹಾಕಿಕೊಂಡು, ಕೆಂಪು ಬಣ್ಣದ ದೊಡ್ಡ ಚೌಕಳಿ ಕರವಸ್ತ್ರದ ಒಂದು ತುದಿಗೆ ಬುಡುಬುಡಿಕೆಯನ್ನು ಕಟ್ಟಿದ.

ಪಕ್ಕದಲ್ಲಿದ್ದ ಪಂಜರದ ಮೇಲೆ ಹೊದಿಸಿದ್ದ ಹಳೇ ಪೀತಾಂಬರದ ತುಂಡೊಂದನ್ನು ತೆಗೆದು ಸೊಂಟಕ್ಕೆ ಕಟ್ಟಿಕೊಂಡ.

ಪಂಜರದೊಳಗಿದ್ದ ಹಾಲಕ್ಕಿ ನುಡಿಯಿತು.

"ಕುಹು ಉಹೂ-ಉಹು ಕುಹೂ-ಕುಗಿಟ್ಟೆ ವ್ಪೂ-"

ಬುಡುಬುಡಿಕೆಯವನ ಮುಖವು ಮೊರದಗಲ ಆಯಿತು.

ಜತೆಗೂಡುವಾಗ, ಸುಖ ಉಕ್ಕಿಬಂದಾಗ ಮಾತ್ರ ಹಾಲಕ್ಕಿ ಹಾಗೆ ನುಡಿಯುತ್ತೆಂದು ಅವನಿಗೆ ಗೊತ್ತಿತ್ತು. ಹಾಲಕ್ಕಿಗೆ ಸುಖವಾದರೆ ಸುತ್ತಲಿದ್ದವರಿಗೂ ಹಿತವಾಗುತ್ತೆಂದೂ ಗೊತ್ತಿತ್ತು.

ತಾನು ಹೊದ್ದಿದ್ದ ಯಾವುದೆಲ್ಲಾ ಚಿಂದಿಬಟ್ಟೆಗಳ ರಾಶಿಯೊಳಗೆ ಕುರುತೇಟು ಹಾಕಿದಂತೆ ಕೈಹಾಕಿ, ಆರೆಂಟು ಕಡಲೇಕಾಯಿ ಬೀಜಗಳನ್ನು ಸರ್ರಂತ ತೆಗೆದು ಪಂಜರದೊಳಕ್ಕೆ ಎಸೆದ. ಹಾಲಕ್ಕಿಯು ಅವುಗಳನ್ನು ತಿನ್ನಲು ಶುರು ಮಾಡಿತು. ಮುಂಜಾವಿನ ತುಸು ಬೆಳಕು ಹರಡಿತ್ತು. ಹಾಲಕ್ಕಿಯು ಕಾಳನ್ನು ತಿನ್ನುವುದನ್ನೇ ನೋಡುತ್ತಿದ್ದ, ಬುಡುಬುಡುಕೆಯವನು. ಕಾಳುಗಳೆಲ್ಲಾ ಮುಗಿದಮೇಲೆ, ಹಾಲಕ್ಕಿಯು ಮತ್ತೊಮ್ಮೆನುಡಿಯಿತು.

"ಉಹು ಕುಹೂ-ಕುಹು-ಉಹೂ-ಕೂಗಿಟ್ಟೆವ್ಪೂ-"

ಇಂತಹ ಶುಭ ಶಕುನಗಳು ಬೆಳಗಾಗುವ ಮೊದಲೇ ಬುಡುಬುಡಿಕೆಯವನಿಗೆ ಕಂಡಾಗ ಅವನ ಮೋಜು ಕೇಳಬೇಕೇ! ಸಂತಸ ಕೊಡುವ ಸುಭಿಕ್ಷೆ ದೊರೆಯುತ್ತೆಂಬ ನಂಬಿಕೆ ಬಂದಾಗ! ಸರ್ರಂತ, ಎದ್ದು, ಪಂಜರವನ್ನು ಎಡಗೈಲಿರಿಸಿಕೊಂಡು, ಬಲಗೈಯ್ಯಲ್ಲಿ ಬುಡುಬುಡಿಕೆಯನ್ನು ನುಡಿಸುತ್ತಾ, ಮಾರಿಗುಡಿಪಡಸಾಲೆಯನ್ನು ಬಿಟ್ಟು ಹೊರಟ.

ಗಿಡಮರಗಳಲ್ಲಿದ್ದ ಹಕ್ಕಿಗಳೆಲ್ಲವೂ ಚಿಲಿಪಿಲಿಗುಟ್ಟುಕ್ಕೆ ಶುರುಮಾಡಿದ್ದುವು!!! ಎಲೆಗಳ ಮರೆಯಲ್ಲಿದ್ದ ಹೂವು ಕಾಯಿಗಳ ಮೇಲೆ ಹೊಂಬೆಳಕು ಬಿದ್ದಿತ್ತು!! ಚುಕ್ಕಿಗಳ ಬೆಳಕಿನಿಂದಲೇ ಬುಡುಬುಡಿಕೆಯವನು ನಡೆಯಬೇಕಾಗಿತ್ತು! ಭಾನುವಾರ ಸಾಕಷ್ಟು ಭಿಕ್ಷವು ಸಿಕ್ಕೇ ಸಿಗುತ್ತೆಂದು ನಂಬಿ ಹಗೂರಾಗಿ ನಡೆಯುತ್ತಿದ್ದ.

* * * *



ಕೋಲಾರಮ್ಮನ ಗುಡಿ ಬೀದೀಲಿ ನೆಟ್ಟಗೆ ಹೋದರೆ ಕೊಳವೊಂದು ಸಿಕ್ಕುತ್ತಲ್ಲವೆ? ಅಲ್ಲಿ ಬಲಗಡೆಗೆ ತಿರುಗಿದರೆ ಮುತ್ತ್ಯಾಲಪ್ಪನ ರಸ್ತೆ ಸಿಗುತ್ತೆ. ಆ ರಸ್ತೆಯಲ್ಲಿ ಕೊಂಬಿನಕೂಗುದೂರ ನಡೆದುಹೋದರೆ ಉಪ್ಪರಿಗೆಯ ಮನೆಯೊಂದು ಕಾಣಿಸುತ್ತೆ. ನೀಲಿ ಹಸಿರು ಬಣ್ಣದ ಗಾಜುಗಳನ್ನು ಹಾಕಿದ ಕಿಟಕಿಗಳಿರುವ ಮನೆಯು ಕೋಲಾರದಲ್ಲೆಲ್ಲಾ ಅದೊಂದೇ! ಆ ಮನೆಯ ಮುಂದೆ ಹೂವುಗಳ ತುಳಸಿಯ ಕೈತೋಟವಿದೆ. ಬೀದಿಯಿಂದ ಜಗುಲಿ ಮೆಟ್ಟಲತನಕ ನಡೆದುಹೋಗುವ ಅಚ್ಚುಕಟ್ಟಾದ ಪುಟ್ಟ ಹಾದಿಗೆ ಸಗಣಿನೀರೆರಚಿ ಅಂಚಿನಲ್ಲೆರಡೂ ಕಡೆ ಲಕ್ಷಣವಾಗಿ ರಂಗೋಲಿ ಹಾಕಿದ್ದಾರೆ.

ಕೈತೋಟದಲ್ಲಿ ಹಿರಿಯ ಮುತ್ತೈದೆಯೊಬ್ಬಳು ಕೈಲಿದ್ದ ಬುಟ್ಟಿಗೆ, ಹೂವು ತುಳಸಿಗಳನ್ನು ತುಂಬಿಸುತ್ತಿದ್ದಾಳೆ. ಸೂರ್ಯನುದಯಿಸಿ ಅರೆಘಳಿಗೆಯಾಗಿದೆ. ಬೀದಿಯಲ್ಲಿ ಆ ಮನೆಯ ಮುಂದೆ ಬುಡುಬುಡಿಕೆಯವನು ತನ್ನ ವಾಗ್ಝರಿಯನ್ನು ಹರಿಸುತ್ತಿದ್ದಾನೆ.

ಹಾಲಕ್ಕಿ ನುಡಿಯತ್ತೈತಿ, ಬೆಳಗಾಗತ್ತೈತೀ!
ಬುಡುಬುಡು: - ಬುಡ್ ಬುಡ್ ಬುಡು: - ಬುಡು ಬುಟ್ಬುಡೂ;

ತಾಳಕ್ಕೆ, ನಾದಕ್ಕೆ, ಸರಿಯಾಗಿ ನುಡಿಸುತ್ತಿದ್ದಾನೆ ಬುಡುಬುಡಿಕೆಯವನು.

ಹೂದೋಟದಲ್ಲಿದ್ದ ಮುತ್ತೈದೆಯು, ಬುಟ್ಟಿಯನ್ನಲ್ಲೇ ಇರಿಸಿ, ಮನೆಯೊಳಕ್ಕೆ ಹೋಗಿ, ಬೊಗಸೆ ತುಂಬಾ ಅಕ್ಕಿಯನ್ನು ತಂದು, ಬೀದಿಯ ಅಂಚಿಗೆ ಬಂದು ನಿಂತು ಬುಡುಬುಡುಕಿಯೆವನು ತೆರೆದಿಟ್ಟ ಚೀಲಕ್ಕೆ ಹಾಕಿದಳು.

ತುಂಬಿದ ಬೊಗಸೆಯ ಹಿರಿಯ ಮುತ್ತೈದೆಯನ್ನು ಬುಡುಬುಡಿಕೆಯವನು ಕಣ್ಣುರೆಪ್ಪೆ ಹಾರಿಸದೆ ನೋಡಿದ. ಬೆಳ್ಳಿಯ ಬೈತಲೆಯಿಂದ, ದೃಷ್ಟಿಯನ್ನು ಆಕೆಯ ಕಾಲುಂಗರದ ಬಳಿಯತನಕ ಹರಿಸಿದ. ಏನಾಯ್ತೋ ಏನೋ ಅವನಿಗೆ.

ಬುಡುಬುಡುಕಿಯನ್ನು ಸಡಗರದಿಂದ ನುಡಿಸಿದ.

ಬುಡುಬುಡಿಕೆಯು ಸ್ವಚ್ಛಂದವಾಗಿ ಉಲಿಯಿತು.

ಹಾಲ್ಹಕ್ಕಿ ನುದಿತ್ತೈತೆ-ತಾಯೀ
ಸತ್ಯಾನೇ ನುದಿಯತ್ತೈತೆ!
-ಬುಡುಬುಡು-ಬುಟ್ಬುಡು, ಬುಟ್ ಬುಟ್ ಬುಡು-
ಸೋಗ್ಲಕ್ಕಿ ಕಾಯೈತೆ - ತಾಯೀ
ಜತೆಯನ್ನೆ ಉಳಿಸ್ಯೆತೆ
-ಬುಡು ಬುಡು - ಬುಟ್ಬುಡು, ಬುಟ್ ಬುಟ್ ಬುಡು-
ಕದ್ದವರೆಲ್ಲ ಎಡವುತಾರೆ - ತಾಯೀ
ಬದೆತಾವ ಅವರ್ತಿಂತಾರೆ
-ಬುಡು ಬುಡು - ಬುಟ್ಬುಡು, ಬುಟ್‌ಬುಟ್ಟೆ ಬುಡು!-

ಬಿದ್ದಬೇನೆ ಎದ್ದೋಗ್ಯೆತೆ - ತಾಯೀ
ಸತ್ತಾನೇ ನಾನಂತಿರೋದು
-ಬುಡು ಬುಡು - ಬುಟ್ಬುಡು, ಬುಟ್ ಬುಟ್ ಬಿಡು-
ಮಂಗಳವಸ್ತು ಗಟ್ಟಿಯಾಗ್ಯೆತೆ-ತಾಯೀ
ನಿತ್ಯಾನೂ ಅದ್ನೇ ಕಂಡ್ಯೆತಿ
-ಬುಡು ಬುಡು-ಬುಟ್ಬುಡು, ಬುಟ್‌ಬುಟ್ಟೇಬುಡು-

ಬುಡುಬುಡುಕೆಯು ಮೌನವಾಯ್ತು. ಬುಡುಬುಡುಕೆಯವನೂ ತುಟಿಗಳನ್ನು ಮುಚ್ಚಿದ.

ಮುತ್ತೈದೆಯು ಬುಡುಬುಡುಕೆಯನ್ನೇ ನೋಡುತ್ತಿದ್ದಳು. ಕಿವಿಗಳೂ ನೆಟ್ಟಗಾಗಿದ್ದುವು. ವಯಸ್ಸಿನಲ್ಲಿ ಬುಡುಬುಡಿಕೆಯವನ ತಾಯಿಯಾಗಬಹುದಾಗಿತ್ತು. ಆ ಸಲಿಗೆಯಿಂದ, "ನಿನ್ನ ನೆತ್ತಿ ತಂಪಾಗಿರ್ಲಪ್ಪ! ನಿನ್ನ ಬಾಯಿಗೆ ಜೇನು ಬೀಳಲಿ, ನೀನಂದಿದ್ದು ಸತ್ಯವಾಗಲಿ" ಎಂದು ಹೇಳಿದಳು.

ಬುಡುಬುಡಿಕೆಯವನು ಮುಂದಕ್ಕೆ ಹೊರಟಿದ್ದ.

"ಸ್ವಲ್ಪ ನಿಂತುಕೋಪ್ಪ!" ಎಂದಳು ಆ ಹಿರಿಯ ಮುತ್ತೈದೆ.

ತಿರುಗಿ ಮನೆಯೊಳಕ್ಕೆ ಹೋದಳು. ಕೈನಲ್ಲೇನೋ ತಂದಳು. ಬುಡುಬುಡುಕಿಯವನ ಚೀಲವನ್ನು ತಾನೇ ತೆರೆದು ಹಾಕಿದಳು. ಕೈತೋಟದತ್ತ ಹೋಗಿ ಹೂವಿನ ಬುಟ್ಟಿಯನ್ನು ಕೈಗೆತ್ತಿಕೊಂಡಳು. ಮುಂದೆ ಮುಂದಕ್ಕೆ ಬುಡುಬುಡುಕೆಯವನು ಆ ಹೊತ್ತಿಗೆ ಹೋಗಿದ್ದನು.

* * * *

ಕೊತ್ವಾಲರ ಛಾವಡಿಯ ಹತ್ತಿರ ಬೀದಿಯನ್ನೆಲ್ಲಾ ಗುಡಿಸಿ, ಕಸವನ್ನೆಲ್ಲಾ ತೆಗೆದು ನೀರು ಚುಮುಕಿಸುತ್ತಿದ್ದರು. ಛಾವಡಿಯೊಳಗೆ ತೋಟಿಗಳೂ, ಕುಳವಾಡಿಗಳೂ ಗುಡಿಸಿ ಸಾರಿಸುತ್ತಿದ್ದರು. ಮಣೆಗಾರರು ಛಾವಡಿಯ ಲೆಕ್ಕ ಪತ್ರದ ದಾಖಲೆಗಳನ್ನು ಅಜಮಾಯಿಷಿ ಮಾಡುತ್ತಿದ್ದರು.

"ಇದೇನೆಲ್ಲಾ ಸಂಭ್ರಮ! ಇಷ್ಟೆಲ್ಲಾ ಹುಷಾರ್! ಹುಜೂರರೇನಾರೂ ಬರ್ತಾರೋ?" ಎಂದು ರಸ್ತೆಯಲ್ಲಿ ಹೋಗುತ್ತಿದ್ದವ, ಗುಡಿಸುತ್ತಿದ್ದವನನ್ನು ಕೇಳಿದ.

"ನಂಗೇನೂ ಗೊತ್ತಿಲ್ಲಪ್ಪಾ ಬೈಸಾರೇನೇ ಎಲ್ಲರೂ ಬಂದು ರಸ್ತೇನೆಲ್ಲಾ ಗುಡಿಸಿ ನೀರು ಚುಮಕಿಸ್ಬೇಕು ಅಂತ ನಿನ್ನೆ ಸಂಜೇನೇ ತಳವಾರ್ರು ಕಟ್ಟಪ್ಪಣೆ ಮಾಡಿದ್ರು, ಬಂದ್ವಿ" ಎಂದು ಅವ ಹೇಳಿದ.

"ನಿಂಗೊತ್ತಿಲ್ವಾ? ದಳವಾಯೋರು ಫೌಜಿನೊಂದಿಗೆ ಇತ್ತ ಬರ್ತಾರಂತೆ. ಯಾಕೆ ಬರ್ತಾರೋ ಯಾರಿಗೂ ತ್ಳೀದು. ಮೊನ್ನೆ ದಿನಾನೇ ಅವರ ಕಡೆಯೋರು ಬಂದು ಮುಸಾಫರಖಾನೇಲಿ ಇಳ್ಕೊಂಡವ್ರೆ" ಎಂದ ಇನ್ನೊಬ್ಬ ಗುಡಿಸುವವ.



"ದಳವಾಯೋರು ಬಂದರೆ, ಗುಡಾರ ಹಾಕ್ಕೊಂಡು ಉಳ್ಕೋತಾರೆ. ಮುಸಾಫರಖಾನೇಲಿ ಯಾಕಾರ ಉಳಕೋತಾರೆ?" ಎಂದ ರಸ್ತೆಯಲ್ಲಿ ನಡೆಯುತ್ತಿದ್ದವ.

"ಅದಕ್ಕೇ ನಾನನ್ನೋದು, ಊರ ಮಾರ್ಗವಾಗಿ ಇನ್ನೆತ್ತಲೋ ಹೋಗ್ತಾರೆ. ಇಲ್ಲಿಂದ ಹಾಸಿಹೋಗೋವಾಗ, ಛಾವಡೀನೂ ಅಜಮಾಯಿಸ್ಬಹುದು ಅಂತ ಯೋಚಿಸಿ, ಕೊತ್ವಾಲರು ಹಿಂಗೆಲ್ಲಾ ಸಾಫ್ ಮಾಡಿಸ್ತಾರೆ ಅಂತೀನಿ" ಎಂದ ಮತ್ತೊಬ್ಬ.

"ಮುಸಾಫರ್ ಖಾನೇಲಿ ಎಷ್ಟು ಜನ ಬಂದಿಳ್ದವ್ರೆ?" ಎಂದ ಮೊದಲನೆಯವ.

"ನಾಲ್ಕು ಜನ ಬಂದವ್ರೆ. ಎಂಥ ಜರ್ಬಿನ ಉಡುಪಂತೀ! ಸೊಂಟಕ್ಕೆ ಕತ್ತಿ ಕಟ್ಕೊಂಡು ಕೈಯಲ್ಲಿ ಕೊರ್ಡಾ ಹಿಡ್ಕೊಂಡೇ ಅವರು ಓಡಾಡೋದು! ದಿಟವಾಗಲೂ ಗಾಬರಿಯಾಗುತ್ತೆ ಅವರ್ನ ಕಂಡ್ರೆ" ಎಂದ ಎರಡನೆಯವ.

"ಹಸೀ ಕುರೀ ಮಾಂಸಾನೇ ತಿಂನ್ತಾರಂತೆ ಕಣ್ಲಾ! ಭಾಳ ಕ್ರೂರಿಗಳಂತೆ! ಅವರೇನಾರ ಕೊರ್ಡಾದಲ್ಲಿ ಎರಡು ಮಡಗಿದರೆ, ಬೆನ್ನು ಮೂಳೇನೇ ಕಳಚಿಕೊಂಡ್ಬಿಡ್ತೈತಂತೆ" ಎಂದ ಮತ್ತೊಬ್ಬ.

"ಹಿಂಗೇ ಮಾತಾಡ್ತಾ, ಕೆಲ್ಸ ಮಾಡ್ದೇ ಇದ್ರೆ, ನಿಮ್ಮ ಛಮ್ಡಾನ ನಾನೇ ಸುಲಿದುಬಿಡ್ತೀನಿ" ಎಂದರು, ಆವೇಳೆಗೆ ಅಲ್ಲಿಗೆ ಬಂದು ನಿಂತ ಕೊತ್ವಾಲರು!

ಎಲ್ಲರೂ ಸರಸರ ಗುಡಿಸಲಾರಂಭಿಸಿದರು. ರಸ್ತೆಯಲ್ಲಿ ಹೋಗುತ್ತಿದ್ದವನು ಪಕ್ಕದ ಓಣಿಗೆ ತಿರುಗಿದ. ಕೊತ್ವಾಲರು ಛಾವಡಿಯೊಳಕ್ಕೆ ಹೋದರು.

* * * *

ಖಾರದ ಬಟಾಣಿ, ಉಪ್ಪುಕಡಲೆ ನೆಲಗಡಲೆ ಕಾಯಿಗಳನ್ನು ಮುಳಬಾಗಿಲ ರಸ್ತೆ ಅಂಚಿನಲ್ಲಿ ಇಟ್ಟುಕೊಂಡು ಮಾರುತ್ತಿದ್ದ ಹೆಂಗಸಿಗೆ ಸುಮಾರು 30-35ರ ಪ್ರಾಯ. ಸಾಲು ಹೊಂಗೆಮರದ ನೆರಳಲ್ಲಿ ಆಕೆ ದಿನವೆಲ್ಲಾ ಕುಳಿತು, ಕಾಸು, ದುಗ್ಗಾಣಿ ವ್ಯಾಪಾರ ಮಾಡೋದರಲ್ಲೇ ತನ್ನ ಜೀವನಕ್ಕೆ ಬೇಕಾದಷ್ಟು ದುಡಿದುಕೊಳ್ಳುತ್ತಿದ್ದಳು.

ಸೋಮವಾರ, ನೆತ್ತಿ ಮೇಲೆ ಸೂರ್ಯ ಬಂದ ಹೊತ್ತು. ಮರಕ್ಕೆ ಒರಗಿಕೊಂಡಿದ್ದ ಆಕೆಗೆ ಝೊಂಪು ಹತ್ತಿತ್ತು. ಬುಡುಬುಡುಕೆಯ ಶಬ್ದ ಕೇಳಿಸಿತು. ಎಚ್ಚೆತ್ತಳು. ಬುಡುಬುಡುಕೆಯವನು ನಡೆದು ಬರುತ್ತಿದ್ದ. ಬಂದವನು ಗುಡ್ಡೆ ಹಾಕಿದ್ದ ಬಳಿ ಕೂತುಕೊಂಡ. ಸೊಂಟದಿಂದ ದುಗ್ಗಾಣಿಯೊಂದನ್ನು ತೆಗೆದು ಆಕೆಗೆ ಕೊಟ್ಟು, "ಖಾರದ ಬಟಾಣಿ ಕೊಡವ್ವಾ! ಮೆಣಸಿನಕಾಯನ್ನು ಹೆಚ್ಚಾಗಿ ಅರೆದು ಹಾಕಿಲ್ದಿದ್ರೆ," ಎಂದು ಕೇಳಿದ. "ಈ ಊರಾಗೆ ಸಪ್ಪೆ ಬಟಾಣೀನ ಯಾರು ತಿಂತಾರಪ್ಪ! ಸ್ವಲ್ಪ ಖಾರ ಅರೆದು ಹಾಕಿದ್ದೀನಿ. ತಿಂದು ನೋಡು, ಛಂದಾಗೈತೆ" ಎಂದಳು ಆಕೆ. "ನನಗಲ್ಲವ್ವಾ! ಹಾಲಕ್ಕೀಗೆ ಹಾಕುಕ್ಕೆ ಬೇಕು. ಹಂಗಾಗಿದ್ದರೆ ನೆಲಗಡಲೆಕಾಯಿ ಕೊಡವ್ವಾ!" ಎಂದ ಬುಡುಬುಡಿಕೆಯವನು.

ಒಂದು ಸೇರು ನೆಲಗಡಲೆ ಕಾಯನ್ನು ಅಳೆದು ಗುಡ್ಡೆ ಹಾಕಿದಳು. "ಇದನ್ನು ಇಲ್ಲೇ ಬಿಡಿಸಿಕೊಂಡು ಚೀಲಕ್ಕೆ ಹಾಕ್ಕೋತೀನವ್ವಾ" ಎಂದು ಹೇಳಿ ಅವನು ಕಾಳು ಬಿಡಿಸುತ್ತಾ ಕುಳಿತ.

ಎದುರಿಗೇ ಒಂದು ಅಂಗಡಿ ಇತ್ತು. ಅಂಗಡಿಯ ಎಡಗಡೆಯೇ ಇದ್ದ ಓಣಿಯಿಂದ ಹದಿನಾರು-ಹದಿನೆಂಟು ವಯಸ್ಸಿನ ಹುಡುಗನೊಬ್ಬ ಬಂದ. ಈಕೆಯ ಹತ್ತಿರ ಬಂದು ಒಂದು ಪಾವಲಿ ಎಸೆದು, ಉಪ್ಪುಕಡಲೆ ಕಟ್ಟಿಕೊಡು ಎಂದು ಜಬರ್ದಸ್ತಿನಿಂದ ಹೇಳಿದ. ಆಕೆಯು ಉಪ್ಪುಕಡಲೆ ಅಳೆದು ಬಿಡಿಯೆಲೆಯ ದೊನ್ನೆಯಲ್ಲಿಟ್ಟು ಕೊಡುತ್ತಾ ಅವನನ್ನೇ ದುರುದುರು ನೋಡುತ್ತಿದ್ದಳು. ಹುಡುಗ ಏನೊಂದನ್ನೂ ನೋಡದವನಂತೆ ಬೇಗ ಬೇಗ ನಡೆಯುತ್ತಾ ಹೊರಟುಹೋದ.

"ಗೌಡ್ರ ಹೈದ ಇರ್ಬೇಕು ಅವ. ಇಲ್ದಿದ್ರೆ ಪಾವಲೀನ ಹಂಗೆ ಎಸೀತಿರ್ಲಿಲ್ಲ" ಎಂದು ಬುಡುಬುಡಿಕೆಯವನು ಅಚ್ಚರಿ ತೋರಿ ನುಡಿದ.

"ಗೌಡ್ರ ಹೈದ ಯಾಕಾದಾನು! ಉಪ್ಪರಿಗೆ ಮನೇಲಿ ದನಕಾಯೋ ಹುಡುಗ! ಈ ದಿನ ಸಂಬಳ ಕೊಟ್ಟಿರ್ಬೇಕು. ಮೋಜುಮಾಡ್ತಿದಾನೆ," ಎಂದಳು ಆಕೆ.

"ಮತ್ತೆ ಈ ಓಣಿಯಿಂದ್ಯಾಕ ಬಂದ?" ಎಂದು ಬುಡುಬುಡಿಕೆಯವನು ಕೇಳಿದ.

"ಎದುರಿಗೆ ಕಾಣುಲ್ವಾ ಅಂಗಡಿ, ಅದಕ್ಕೇ ಓಣಿ ಕಡೆಗೂ ಒಂದು ಬಾಗಿಲಿದೆ. ಅಂಗಡೀಗೆ ಯಾಕಾದ್ರೂ ಹೋಗಿದ್ದಿರಬೋದು" ಎಂದಳು ಆಕೆ.

"ವಸೀ ಹೊತ್ತಿಂದ ನೋಡ್ತಾನೆ ಇದೀನಿ. ಯಾರೂ ವ್ಯಾಪಾರಕ್ಕೆ ಬಂದ್ಹಾಂಗೆ ಕಾಣೆಸ್ಲಿಲ್ಲ. ಯಾರ ಅಂಗಡಿ, ಏನು ವ್ಯಾಪಾರ ಮಾಡ್ತಾನೆ?" ಎಂದು ಕೇಳಿದ.

"ಅಯೋಧ್ಯಾರಾಮಪ್ಪಂದು ಅಂಗಡಿ. ಭಾರಿಕುಳ! ಅಂಗಡಿ ಏನೋ ಗಿರಿವಿಯದು, ಹಿತ್ತಾಳೆ ಪಾತ್ರೆಗಳನ್ನು ಮಾರ್ತಾನೆ. ಆದರೆ ದೊಡ್ಡ ದೊಡ್ಡ ವ್ಯಾಪಾರಾನೂ ಕಾಣದ ಹಾಗೆ ಮಾಡ್ತಾನಂತೆ. ಯಾವು ಯಾವುದೋ ಊರಲ್ಲಿ ಕೊಂಡು, ಯಾವು ಯಾವುದೋ ಊರಲ್ಲಿ ಮಾರ್ತಾನಂತೆ. ಭಾಳ ಶಹಣೆ ಅಂತ ಎಲ್ಲಾರೂ ಹೇಳ್ತಾರೆ. ನೋಡುಕ್ಕೇನೂ ಕಾಣಿಸೋದೇ ಇಲ್ಲ" ಎಂದು ಆಕೆ ಹೇಳಿದಳು.

ನೆಲಗಡಲೆಕಾಯನ್ನೆಲ್ಲಾ ಬಿಡಿಸಿದ್ದ ಆ ಹೊತ್ತಿಗೆ. ಅವನ್ನೆಲ್ಲಾ ಬುಡುಬುಡುಕೆಯವನು ಚೀಲಕ್ಕೆ ಹಾಕಿಕೊಂಡು ಮುಂದೆ ನಡೆದ.

* * * *

ಮುಸಾಫರಖಾನೆಯ ಮುಂದೆ, ಮೂಡಲಲ್ಲಿ ಆಳುದ್ದ ನೆರಳು ಬೀಳುವ ಹೊತ್ತಾಗಿದ್ದಾಗ, ಬುಡುಬುಡಿಕೆಯವನು ನಡೆದುಹೋಗುತ್ತಿದ್ದ. ಹಠಾತ್ತಾಗಿ ನಿಂತ. ಮುಸಾಫರಖಾನೆಯ ಮುಂದೆ ನಿಂತಿದ್ದ ದಳವಾಯಿಯ ಫೌಜಿನವನನ್ನು ನೋಡಿದ. ದುರುದುರುಗುಟ್ಟುತ್ತಾ ನೋಡಿದ.

"ಯಾಕ್ಲಾ ಹಂಗೆ ನೋಡ್ತಿ. ಮೈಸೂರ್ನಾಗೇನಾರ ಕಂಡಿದ್ನಾ?" ಎಂದ ಫೌಜಿನವ.

"ಮೈಸೂರೆಲ್ಲೈತೋ ಅದೂ ಕೂಡ ನಂಗೆ ತಿಳೀದಪ್ಪಾ! ನಿನ್ನ ಮುಖ ಚಹರೆ ನೋಡಿದೆ ಬಲು ದೊಡ್ಡ ಹುದ್ದೆಗೇರ್ತೀಪ್ಪ! ಇಂತಹ ಕಳೆಯಿರುವ ಮುಖದವರ ಬಲತೊಡೆಯ ಹಿಂದುಗಡೆ ಹೆಬ್ಬೆರಳಗಲ ಮಚ್ಚೆ ಇರಲೇಬೇಕು. ನಿಂಗೇನಾ ಇದೆಯಾಪ್ಪ?" ಎಂದು ಬುಡುಬುಡಿಕೆಯವನು ಕೇಳಿದ.



"ಹೌದು ಕಣ್ಲಾ, ನಿಂಗ್ಹ್ಯಾಗೆ ಗೊತ್ತಾಯ್ತು? ದೊಡ್ಡ ಹುದ್ದೇಗೇರ್ತೀನಾ? ಎಷ್ಟು ವರ್ಷದಲ್ಲಿ ಹಾಗಾಗ್ಬೋದು ಹೇಳೀಯಾ?" ಎಂದು ಕುತೂಹಲದಿಂದ ಫೌಜಿನವ ಕೇಳಿದ.

"ಕೈ ನೋಡಿ, ಗೆರೆ ಅಳೆದು ಹೇಳ್ಬೇಕು. ಒಬ್ಬನಿಗೆ ಹೇಳ್ತಾ ಕೂತರೆ, ಎಲ್ಲರೂ ಬಂದು ಅಂಗೈ ಚಾಚ್ತಾರೆ. ಅದ್ದೂರಿ ಬಾಳು ನಡೆಸಬಹುದು ಎಂದು ಕಂಡವರ ಕೈಮಾತ್ರ ನಾನು ನೋಡೋದು" ಎಂದ ಬುಡುಬುಡಿಕೆಯವ.

"ಇಲ್ಲಿ ಯಾರೂ ಇಲ್ಲ, ಕಣ್ಲಾ! ನನ್ ಜತೆಯೋರೆಲ್ಲಾ ಊರು ಸುತ್ತುಕ್ಕೆ 'ದಿರಸು' ತೆಗೆದಿಟ್ಟು ಹೊಂಟುಹೋದರು. ಬೆಳಗಿನ ಝಾವಕ್ಕೋ, ನಾಳೆ ಬೆಳಗ್ಗೇನೋ ಅವರು ಹಿಂತಿರುಗೋದು. ಒಳಗೆ ಹೋಗಿ ಕೂತುಕೊಳ್ಳೋಣ. ಕೈ ನೋಡಿ ಹೇಳು, ಭಾರಿ ಇನಾಂ ಕೊಡ್ತೀನಿ" ಎಂದು ಫೌಜಿನವನು ಆಸೆ ತೋರಿಸುತ್ತಾ ಹೇಳಿದ.

"ನಾ ಕೇಳಿದ್ದು ಕೊಡೋದಾದ್ರೆ ಕೈ ನೋಡ್ತೀನಿ. ದೊಡ್ಡ ಹುದ್ದೆಗೇರಿದಾಗ ನಿನ್ನನ್ನು ಕಾಣಲು ಕೂಡ ಸಾಧ್ಯವಾಗುಲ್ಲ" ಎಂದ ಬುಡುಬುಡುಕೆಯವ.

"ನನ್ನಿಂದ ಕೊಡುಕ್ಕೆ ಆಗೋದಾದರೆ, ಕೊಟ್ಟೇ ಕೊಡ್ತೀನಿ. ಬಾ, ಒಳಕ್ಕೆ," ಎಂದು ಹೇಳುತ್ತಾ ಫೌಜಿನವನು ಮುಸಾಫರಖಾನೆಯೊಳಕ್ಕೆ ಬುಡುಬುಡಿಕೆಯವನೊಂದಿಗೆ ಹೋದ.

* * * *

ರಾತ್ರಿ ಎಂಟು ಗಂಟೆಯಾಗಿರಬಹುದು. ದಳವಾಯಿಯ ಫೌಜಿನವನು ಕೊತ್ವಾಲರ ಛಾವಡಿ ಮುಂದೆ ಬೇಗ ಬೇಗ ನಡೆದುಹೋಗುತ್ತಿದ್ದ.

ತುಸು ದೂರದಲ್ಲಿ ಕೊತ್ವಾಲರ ಛಾವಡಿಯ ಪಹರೆ ಪ್ಯಾದೆಯೊಬ್ಬನು ಫೌಜಿನವನನ್ನು ಕಂಡು ನಿಮಿರಿ ನಿಂತು ಸಲಾಂ ಹೊಡೆದನು. ದಳವಾಯಿಯ ಫೌಜಿನವರು ಎಂದರೆ ಅಷ್ಟು ಹೆದರಿಕೆ, ಅಷ್ಟು ಮರ್ಯಾದೆ, ಎಲ್ಲರಿಗೂ. "ನನ್ನ ಜತೆಗೆ ಬಾ, ಸ್ವಲ್ಪ ಕೆಲ್ಸ ಇದೆ, ನಾಳೆ ಕೊತ್ವಾಲರಿಗೆ ಹೇಳ್ತೀನಿ" ಎಂದು ಫೌಜಿನವನು ಪ್ಯಾದೆಗೆ ಹೇಳಿದನು. ಸಮವಸ್ತ್ರ ಧರಿಸಿದ್ದ ಪ್ಯಾದೆಯು ಫೌಜಿನವನ ಹಿಂದೆ ನಡೆದನು.

ಮುಳಬಾಗಿಲ ರಸ್ತೆಯ ಕಡೆಗೆ ನಡೆಯುತ್ತಾ ಇಬ್ಬರೂ ಸಾಲು ಹೊಂಗೆ ಮರದ ಹತ್ತಿರ ಬಂದಾಗ, "ನೀನಿಲ್ಲಿ ನಿಂತುಕೊಂಡಿರು. ಹುಷಾರಾಗಿ ಎಚ್ಚರದಿಂದ ನೋಡುತ್ತಿರು. ಓಣಿಯ ಕಡೆಗೆ ನಾನು ಹೋಗ್ತೀನಿ. ಎದುರು ಅಂಗಡಿಯ ಕಡೆಯಿಂದ ಯಾರಾದರೂ ಬಂದರೆ ತಕ್ಷಣ ಅವರನ್ನು ದಸ್ತಗಿರಿಮಾಡು. ಶಿಲ್ಲು ಹಾಕು. ಸಹಾಯಕ್ಕೆ ಸಾಕಷ್ಟು ಜನ ಬರ್ತಾರೆ" ಎಂದು ಹೇಳುತ್ತಾ ಪ್ಯಾದೆಯನ್ನು, ಹಗಲಲ್ಲಿ ಕಡಲೆಕಾಯಿ ಅಂಗಡಿಯನ್ನು ಇರಿಸಿಕೊಂಡಿದ್ದ ಜಾಗದಲ್ಲಿ ಪಹರೆ ನಿಲ್ಲಿಸಿ, ಫೌಜಿನವನು ಅಂಗಡಿ ಪಕ್ಕದ ಓಣಿಯ ಕಡೆಗೆ ಹೋಗಿ, ಎಡಗಡೆ ಕಂಡ ಮೊದಲ ಬಾಗಿಲನ್ನು ತಟ್ಟಿದನು. ಬಾಗಿಲು ತೆಗೆಯದೇ, ಒಳಗಿನಿಂದ, "ಇವತ್ತು ವ್ಯಾಪಾರವನ್ನೆಲ್ಲಾ ಬಂದ್ ಮಾಡಿಯಾಯ್ತು. ನಾಳೆ ಬೆಳಿಗ್ಗೆ, ಬಾ" ಎಂದು ಅಯೋಧ್ಯಾ ರಾಮನು ಹೇಳಿದನು.

"ದೊಡ್ಡ ವ್ಯಾಪಾರಕ್ಕೆ ಬಂದಿರೋದು ನಾನು. ಬಾಗಿಲು ತೆಗೀ" ಎಂದು ಫೌಜಿನವನು ದೊಡ್ಡ ಗಂಟಲಿನಲ್ಲಿ ಹೇಳಿದಾಗ ಬಾಗಿಲು ತೆಗೆಯಿತು. ಫೌಜಿನವನನ್ನು ಕಂಡು ಅಯೋಧ್ಯಾರಾಮನು ಬೆದರಿದನು. ಫೌಜಿನವನು ಒಳಕ್ಕೆ ಹೋಗಿ ಬಾಗಿಲು ಮುಚ್ಚಿದನು. ಸೊಂಟದ ಪಟ್ಟೀಗೆ ಕಟ್ಟಿದ್ದ ಕತ್ತಿಯನ್ನೂ, ಕೈಲಿದ್ದ ಕೊರ್ಡಾವನ್ನೂ ಕಂಡು ಅಯೋಧ್ಯಾರಾಮನು ಬೆವರ ಹತ್ತಿದನು. ದೊಡ್ಡ ಕೊಠಡಿಯಾಗಿದ್ದರೂ ಸೆಖೆಯಾಗುತ್ತಿತ್ತವನಿಗೆ.

"ಕೊಳದ ಬೀದಿ ಉಪ್ಪರಿಗೆ ಮನೆಯ ದನ ಕಾಯುವ ರಂಗನನ್ನು ದಸ್ತಗಿರಿ ಮಾಡಾಯ್ತು. ಅವನು ಕದ್ದಿದ್ದ ಹಳೇಕಾಲದ ವಜ್ರದ ಓಲೆಗಳನ್ನು ನಿನ್ನ ಹತ್ತಿರ ಮಾರಿದ್ದೇನೆ ಎಂದು ಅವನು ಒಪ್ಪು ಹೇಳಿಕೆ ಕೊಟ್ಟಿದ್ದಾನೆ. ಎಲ್ಲಿ ತೆಗೆದು ಕೊಡು" ಎಂದು ಫೌಜಿನವನು ಕೊರ್ಡಾದ ಮೇಲೆ ಕೈಯ್ಯಾಡಿಸುತ್ತಾ ಹೇಳಿದನು.

ಅಯೋಧ್ಯಾರಾಮನಿಗೆ ಜಂಘಾಬಲವೇ ಉಡುಗಿಹೋಗಿತ್ತು. ದಳವಾಯಿಗಳ ಫೌಜಿನವರಿಗೆ ಸಿಕ್ಕಿಹಾಕಿಕೊಂಡರೆ ಮೂಳೆಗಳೂ ಉಳಿಯುಲ್ಲ ಎಂದು ಅವನಿಗೂ ತಿಳಿದಿತ್ತು. ಆದರೂ ಕಡೇ ಯತ್ನ ಮಾಡೋಣವೆಂದು,

"ಕಳ್ಳತನವಾಗಿದ್ದರೆ ಕೊತ್ವಾಲರೋ, ತಳವಾರ್ರೋ ಬರ್ತಿದ್ರು. ನೀನ್ಯಾಕೆ ಬಂದೆಯಪ್ಪಾ?" ಎಂದು ಕಿರುದನಿಯಲ್ಲಿ ಕೇಳಿದ.

"ಉಪ್ಪರಿಗೆ ಮನೆಯ ಮಗನೂ ದಳವಾಯಿಗಳ ಮಗನೂ ಜತೇಲಿ ಓದಿದವರು, ಖಾಸಾ ಸ್ನೇಹಿತರು. ಅದಕ್ಕೇ ದಳವಾಯಿಗಳು ನನ್ನ ಕಳಿಸಿದ್ದಾರೆ. ಊರ ಕೊತ್ವಾಲರಿಗೆ ಎಲ್ಲವನ್ನೂ ತಿಳಿಸಿ, ಅವರ ಒಪ್ಪಿಗೆ ಪಡೆದು, ಅವರ ಪ್ಯಾದೆಗಳನ್ನು ಕರಕೊಂಡು ಬಂದಿದ್ದೇನೆ. ಮನೆಯ ಸುತ್ತಲೂ ಪಹರೆ ಕಾಯ್ತಾ ನಿಂತಿದ್ದಾರೆ. ಎದುರು ಕಿಟಕೀಲಿ ಬೇಕಾರ ನೋಡು" ಎಂದು ಫೌಜಿನವನು ಹೇಳಿದನು. ಅಯೋಧ್ಯಾರಾಮನು ಕಿಟಕಿಯಲ್ಲಿ ನೋಡಿದಾಗ ಹೊಂಗೆ ಮರದ ಕೆಳಗೆ ರಸ್ತೆಯಂಚಿನಲ್ಲಿ, ಸೆಟೆದು ನಿಂತಿದ್ದ ಕೊತ್ವಾಲರ ಪ್ಯಾದೆಯು ಕಾಣಿಸಿದನು. ಕೈಲಿ ಉರಿಯುತ್ತಿದ್ದ ಮಷಾಲಿನ ಬೆಳಕಿನಲ್ಲಿ ಪ್ಯಾದೆಯು ಕೆಂಪು ಬಣ್ಣದ ರಾಕ್ಷಸನಂತೆಯೇ ಅಯೋಧ್ಯಾರಾಮನ ಕಣ್ಣಿಗೆ ಕಂಡಿತು. ತಪ್ಪಿಸಿಕೊಳ್ಳುವ ಮಾರ್ಗವಾವುದೂ ಕಾಣಿಸಲಿಲ್ಲ. ಇದೊಂದು ಬಹಿರಂಗವಾದರೆ ಮಾನವಾಗಿ ಬಾಳಲು ಇನ್ಮುಂದೆ ಸಾಧ್ಯವಿಲ್ಲ ಎಂದೂ ಅವನಿಗೆ ದೃಢವಾಯಿತು.

ಫೌಜಿನವನ ಕಾಲಿಗೆ ಬಿದ್ದು "ಅಯ್ಯಾ! ರಂಗ ಒಂದು ಜತೆ ಬಿಳಿ ಹರಳಿನ ಹಳೇ ಕಾಲದ ಓಲೆಗಳನ್ನು ನನಗೆ ಮಾರಿದಾಗ, ನಮ್ಮಜ್ಜೀದು, ಇದು. ಈಗ ನನಗೆ ಲಗ್ನಕ್ಕೋಸ್ಕರ ಹಣ ಬೇಕು ಎಂದು ಹೇಳಿದ. ಎಂಟು ಕಂಠೀರಾಯ ಹಣ ಕೊಟ್ಟೆ. ಬಂಗಾರದ ಒಡವೆ ಮಾಡಿಸ್ಕೋಬೇಕು ಎಂದ. ಅವನು ಕದ್ದಿದ್ದು ಎಂದು ನನಗೆ ತಿಳೀಲಿಲ್ಲ. ಹಿಂತಿರುಗಿ ಕೊಡ್ತೀನಿ, ನನ್ನ ಮಾನಾ ಕಾಪಾಡಪ್ಪ" ಎಂದು ಅಯೋಧ್ಯಾರಾಮನು ಹೇಳಿದ.

ಆಮೇಲೆ ಎದ್ದು ಎದುರು ಗೋಡೆಯ ಬಳಿ ಇದ್ದ ಕಬ್ಬಿಣದ ಕೊಳದಪ್ಪಲೆಯನ್ನು ಪಕ್ಕಕ್ಕೆ ತೆಗೆದಿಟ್ಟ. ಗೋಡೆಯಲ್ಲೊಂದು ಕಬ್ಬಿಣದ ಕೈಹಿಡಿ ಕಾಣಿಸಿತು. ಸೊಂಟಕ್ಕೆ ಕೈಹಾಕಿ,



ಬೀಗದ ಕೈಗೊಂಚಲನ್ನು ತೆಗೆದು, ಗೋಡೆಯಲ್ಲಿದ್ದ ಬಾಗಿಲನ್ನು ತೆಗೆದ. ಅಲ್ಲಿ ಹುದುಗಿದ್ದ ಸಂದೂಕದಲ್ಲಿ ಹುಡುಕಾಡಿದ. ನಂತರ ಬಾಗಿಲು ಮುಚ್ಚಿ, ಬೀಗಹಾಕಿ, ಬೀಗದ ಕೈಗೊಂಚಲನ್ನು ಉಡಿಯಲ್ಲಿ ಸಿಕ್ಕಿಸಿಕೊಂಡು ಫೌಜಿನವನ ಹತ್ತಿರ ಬಂದ. ಚಿಂದಿ ಬಟ್ಟೆಯಲ್ಲಿ ಕಟ್ಟಿದ್ದ ಸಣ್ಣ ಗಂಟೊಂದನ್ನು ಫೌಜಿನವನ ಕೈಲಿರಿಸಿದ.

ಗಂಟನ್ನು ಬಿಚ್ಚಿ ಅದರಲ್ಲಿದ್ದ ಥಳಥಳಿಸುವ ದೊಡ್ಡ ವಜ್ರಗಳ ಓಲೆಯನ್ನು ನೋಡುತ್ತಾ "ಎಲ, ಎಲಾ! ಇದನ್ನು ಬಿಳಿ ಹರಳಿನ ಓಲೆ ಅಂದೆಯಲ್ಲಾ! ವಜ್ರ ಅಂತ ಗೊತ್ತಾಗಲಿಲ್ವೇ?", ಎಂದು ಕೋಪದ ದನಿಯಲ್ಲಿ ಕೇಳಿದ. ಶತಪಥ ನಡೆಯುತ್ತಾ ಎದುರು ಗೋಡೆಯತ್ತ ಹೋದ. ಕಬ್ಬಿಣದ ಕೊಳದಪ್ಪಲೆಯ ಹತ್ತಿರ ನಿಂತುಕೊಂಡ. "ಹೆಂಗೆ ನೀನು ಜೀವನ ಮಾಡ್ತೀಯೋ ಅದು ಕಟ್ಕೊಂಡು ನನಗೇನು? ದಳವಾಯಿಗಳು ನಾಳೆ ಬರ್ತಾರೆ. ಅವರಿಗೆ ವರದಿ ಒಪ್ಪಿಸಿ ಮಾಲು ಹಿಂತಿರುಗಿಸಿದರೆ, ನನ್ಕೆಲ್ಸ ಆಯ್ತು" ಎಂದು ಹೇಳಿದ.

ದಳವಾಯಿಗಳ ಹೆಸರು ಕೇಳಿ ಅಯೋಧ್ಯಾರಾಮನಿಗೆ ಭೌಳಿ ಬಂದಂತಾಯ್ತು. ಎಚ್ಚೆತ್ತುಗೊಂಡು, ಸರಕ್ಕಂತ ಕಿಟಕಿಯ ಕೆಳಗೆ ಹಾಸಿದ್ದ ಸುಪ್ಪತ್ತಿಗೆಯನ್ನು ಸುರುಳಿ ಸುತ್ತಿಟ್ಟ. ನೆಲದಲ್ಲಿದ್ದ ಹಲಗೆಯೊಂದನ್ನು ತೆಗೆದ. ಕೈಹಾಕಿ, ಎರಡು ಥೈಲಿಗಳನ್ನು ತೆಗೆದುಕೊಂಡ.

ಆ ಹೊತ್ತಿಗೆ ಫೌಜಿನವನು, ಬಾಗಿಲ ಬಳಿಗೆ ಬಂದು ನಿಂತಿದ್ದ.

ಎರಡೂ ಥೈಲಿಗಳನ್ನು ಫೌಜಿನವನ ಕೈಲಿರಿಸಿ, "ಅಯ್ಯಾ! ತಪ್ಪು ಕಾಣಿಕೆ ನಿನಗೆ ಒಪ್ಪಿಸ್ತೇನೆ. ಹೇಗಾರ ಮಾಡಿ ನನ್ನ ಪಾರುಮಾಡು, ನೀ ಬಂದ ಕೆಲ್ಸ ಆಯ್ತು. ದಳವಾಯಿಗಳ ತನಕ ಈ ಸುದ್ದಿ ಹೋಗದ ಹಾಗೆ ಮಾಡಪ್ಪ" ಎಂದು ಅಳುಕ್ಕೇ ಶುರುಮಾಡಿದ.

"ನಾಳೆ ಬೆಳಿಗ್ಗೇನೆ ನೀನೆಲ್ಲಾರ ಊರುಬಿಟ್ಟು ಹೋಗಿಬಿಡು. ಒಂದುವಾರ ಹಿಂತಿರುಗಿ ಬರಬೇಡ. ನನ್ನ ಕೈಲಾದ್ದು ಮಾಡ್ತೀನಿ" ಎಂದು ಥೈಲಿಗಳ ಮೇಲೆ ಕೈಯ್ಯಾಡಿಸುತ್ತ ಫೌಜಿನವನು ಹೇಳುತ್ತಾ ಬಾಗಿಲು ತೆಗೆದು ಹೊರಬಿದ್ದ.

ಜಟ್ಟಂತ ಅಯೋಧ್ಯಾರಾಮನು ಬಾಗಿಲು ಜಡಿದು, ಅಗುಳಿ ಹಾಕಿ ಹಣೆಯ ಬೆವರೊರೆಸಿಕೊಂಡ.

ಹೊಂಗೆಯ ಮರದ ಬಳಿ ನಿಂತಿದ್ದ ಕೊತ್ವಾಲರ ಪ್ಯಾದೆಯ ಹತ್ತಿರ ಬಂದು ಫೌಜಿನವನು, "ಬಾರ್ಲಾ ನಮ್ಮ ಕೆಲ್ಸ ಆಯ್ತು" ಎಂದು ಹೇಳಿ ಊರ ಕಡೆಗೆ ಹೊರಟ. ಮುಸಾಫರಖಾನೆಯ ಬಳಿ ಪ್ಯಾದೆಯ ಕೈಲಿ ಏನನ್ನೋ ಇಟ್ಟು, ಮಕ್ಕಳಿಗೆ ಏನಾರ ಸಿಹಿತಿಂಡಿ ತೂಗೊಂಡು ಹೋಗಿ ಕೊಡು ಎಂದು ಹೇಳಿ ಬೀಳ್ಕೊಟ್ಟ.

* * * *

ಮಂಗಳವಾರ-ಕೊಳದ ಬೀದೀಲಿ ಬೆಳಿಗ್ಗೆ ಬುಡುಬುಡಿಕೆಯವನು ಭಿಕ್ಷೆಗಾಗಿ ನಡೆಯುತ್ತಿದ್ದಾನೆ. ಸಗಣಿ ಎತ್ತಿ ಮೊರಕ್ಕೆ ಹಾಕಿಕೊಂಡು ಹೋಗುವ ಎಂಟು, ಹತ್ತು, ವರ್ಷದ ಹುಡುಗಿಯೊಬ್ಬಳು ಬುಡುಬುಡಿಕೆಯು ನುಡಿಯುವುದನ್ನೇ ಎವೆಯಿಕ್ಕದೆ

ನೋಡುತ್ತಿದ್ದಾಳೆ. ಅವಳನ್ನು ನೋಡಿ ಬುಡುಬುಡಿಕೆಯವನಿಗೆ ಎಂಥದ್ದೋ ಆನಂದವಾಯ್ತು. "ಅದ್ಯಾಕೆ ಮಗಾ ಹಂಗೆ ನೋಡ್ತೀ..." ಎಂದ. ಹುಡುಗಿಯು ತಲೆ ತಗ್ಗಿಸಿವಳು. "ಈ ಬುಡುಬುಡಿಕೆ ನಿಂಗೆ ಬೇಕಾ?" ಎಂದು ಕೇಳಿದ. ತಲೆ ಎತ್ತಿದಳು ಹುಡುಗಿ. "ಬುಡುಬುಡುಕೆ ನಂಗ್ಬೇಡಾ, ಅದಕ್ಕೇ ಕುಚ್ಚುಕಟ್ಟಿರೋ ಅಂಗವಸ್ತ್ರ ಕೊಟ್ಟರೆ, ಏನು ಬೇಕಾರ ಮಾಡ್ತೀನಿ" ಎಂದಳು ಹುಡುಗಿ. "ಹಂಗಾನು! ಮಗಳೇ! ಹಂಗಾರ ನನ್ನ ಹಿಂದೆ ಬಾ, ಉಪ್ಪರಿಗೆ ಮನೆ ಐತೆ ನೋಡು, ಅಲ್ಲಿನ ತನಕ ಬಾ. ಮನೆತಾವ ನಾನು ಬೊಗಸೆ ಬೇಡ್ತೀನಿ, ಮನೆ ಮುದುಕಿ ಬಂದು ಅಕ್ಕಿ ಹಾಕ್ತಾಳೆ. ಆಗ ನೀನು ಓಡಿ ಬಂದು, ನಾನು ಈಗ ಕೊಡೋ ತುಳಸೀ ಪೊಟ್ಟಣಾನ ಆಕೆ ಕೈಲಿ ಕೊಡು. ಅಯ್ನೋರು ಕಳಿಸಿಕೊಟ್ರು ಅಂತ ಹೇಳು. ಬುಡುಬುಡುಕೆಯಿಂದ ಈ ವಸ್ತ್ರಾನ ಕಳಚುತ್ತೇನೆ. ಅದು ಬಿದ್ದು ಹೋದಾಗ, ಎತ್ತಿಕೊಂಡು ಓಡಿ ಹೋಗ್ಬಿಡು" ಎಂದು ಬುಡುಬುಡುಕೆಯವನು ಹೇಳಿ ಹುಡಿಗಿಯ ಕೈಲಿ ಒಂದು ಪೊಟ್ಟಣ ಕೊಟ್ಟು, ಕೆನ್ನೆ ಚಿವುಟಿದ.

* * * *

ಉಪ್ಪರಿಗೆ ಮನೆಯ ಮುಂದೆ ಬೀದಿಯಲ್ಲಿ ನಿಂತು,

ಹಾಲಕ್ಕಿ ನುಡಿಯತ್ತೈತಿ-ಮಂಗಳ ವಸ್ತು ಗಟ್ಟಿಯಾಗ್ತೈತಿ
.... ಬುಡು ಬುಡು, ಬುಟ್ಬುಡು, ಬುಟ್ಬೇ ಬುಟ್ಬುಡು....

ಹೂ ತುಳಸಿ ಕೈತೋಟದಲ್ಲಿದ್ದ ಹಿರಿಯ ಮುತ್ತೈದೆಯು ದನಿಬಂದ ಕಡೆಗೆ ಬೊಗಸೆ ಕಣ್ಣು ಹಾಯಿಸಿದಳು. ಬೀದಿಯತ್ತ ಬಂದಳು. ಮೊದಲೇ ಕಂಡಿದ್ದ ಸಲಿಗೆಯಿಂದ, "ನಿನ್ನೆ ಶಕುನ ನುಡಿದು ಹೋದೆಯಪ್ಪಾ! ಅದೆಲ್ಲಾ ಸತ್ಯಾನೇ ಆಯಿತು. ಯಜಮಾನರಿಗೆ ಮೂರು ದಿನದಿಂದ ಕೆಂಡಾಮಂಡಲ ಜ್ವರ ಬಂದಿತ್ತು. ಮನೆ ಸೊಸೇಗಿದ್ದೋ ಮಂಗಳವಸ್ತು ಎಲ್ಲೋ ಕಳುವಾಗಿತ್ತು. ಬಹಳ ಭಯವಾಗಿತ್ತು. ಮಗನಿಗೂ ಏನೋ ಆಗಿ ಹೋಗಿಬಿಡುತ್ತೆ ಅಂತ ಹುಚ್ಚೇ ಹಚ್ಚಿತ್ತು.

ನಿನ್ನೆ ರಾತ್ರಿ ಯಜಮಾನರಿಗೆ ಮೈ ಬೆವರಿ, ಜ್ವರ ಇಳಿದುಹೋಯ್ತು. ನಿನ್ನ ಹಾಲಕ್ಕಿ ಸತ್ಯಾನೇ ನುಡಿಯುತ್ತಪ್ಪಾ" ಎಂದಳು.

ಹುಡುಗಿ ಓಡೋಡಿ ಬಂದಳು. ಮುತ್ತೈದೆಯ ಕೈಯಲ್ಲಿ ಪೊಟ್ಟಣವನ್ನು ಕೊಟ್ಟು ಅಯ್ನೋರು ಕಳಸವ್ರೆ ಎಂದಳು. ಬುಡುಬುಡುಕೆಯಿಂದ ವಸ್ತ್ರವು ಜಾರಿಬಿತ್ತು ಅದನ್ನೆತ್ತಿಕೊಂಡು ಹುಡುಗಿಯು ಓಡೋಡಿ ಹೋದಳು. ಕಾಣುವತನಕ ಅವಳನ್ನೇ ಬುಡುಬುಡುಕೆಯುವನು ನೋಡುತ್ತಿದ್ದ.

"ವಸ್ತ್ರ ತೊಗೊಂಡು ಓಡಿ ಹೋದ್ಳಲ್ಲಪ್ಪಾ!" ಎಂದಳು ಮುತ್ತೈದೆ.

"ಹೋಗಲಿಬಿಡಿ ತಾಯಿ, ಬುಡುಬುಡುಕೇಗೆ ಬಾಲಂಗೋಚಿ ಆಗೋದರ ಬದಲು ಹುಡುಗಿ ತಲೇಗೆ ಕಟ್ಟಿಕೊಂಡರೆ ಪಸಂದಾಗಿರ್ತದೆ. ಹಾಲಕ್ಕಿ ನುಡಿದ್ಹಾಗೆ ಯಜಮಾನ್ರ ಬೇನೆ ಹರಿಯೋ ಹೊತ್ತಿಗೆ,ಗೌರಿ ಪೂಜೇಗೆ ಅಯ್ನೋರು ತುಳಸಿ, ಹೂವು ಕಳಿಸಿದ್ರಲ್ಲಾ" ಎಂದ ಬುಡುಬುಡುಕೆಯವನು.



"ಹೌದಪ್ಪಾ! ಯಾವ ಅಯ್ನೋರೋ ಕಳಿಸಿದ್ದು, ಗಂಗೆಗುಡಿ ಅಯ್ನೋರಿರಬಹುದು" ಎಂದು ಹೇಳುತ್ತಾ ಮುತ್ತೈದೆಯು ಪೊಟ್ಟಣವನ್ನು ಬಿಚ್ಚಿದಳು.

"ಎರಡು ತುಳಸೀ ದಳ, ಎರಡು ಮಲ್ಲಿಗೆ ಹೂವು, ಎರಡು ವಜ್ರದ ಓಲೆಗಳು ಹಳೇಕಾಲದ ಮಾದರಿಯಲ್ಲಿ ಕಟ್ಟಿದ ಓಲೆಗಳು!"

ಹಿರಿಯ ಮುತ್ತೈದೆಯ ಮುಖವೆಲ್ಲಾ ಬೆಳದಿಂಗಳಿಂದ ತುಂಬಿತು. "ಈ ಮಂಗಳವಸ್ತು, ನಮ್ಮ ವಂಶದಲ್ಲಿ ಬಂದಿದ್ದಪ್ಪಾ! ಶುಕ್ರವಾರದ ಪೂಜೆಗೆ ಇದನ್ನೂ ಹಾಕಿಕೊಂಡಿದ್ದೆ. ಆಮೇಲೆ ತೆಗೆದಿರಿಸಿದೆ, ವಯಸ್ಸಾಯ್ತು, ಮರೆತುಹೋಯ್ತು. ಆಮೇಲೆ ಕಾಣೆಯಾಯ್ತು. ಆಗೋ ವಯಸ್ಸಿನಲ್ಲಿ ಮಕ್ಕಳಾಗಿ, ಬರೋ ಕಾಲಕ್ಕೆ ಸರಿಯಾಗಿ ಹಿರಿಯಸೊಸೆ ಬಂದಿದ್ದರೆ, ಮಂಗಳವಸ್ತುವನ್ನು ಮರೆಯುತ್ತಿರಲಿಲ್ಲ. ಮಾಯವಾಗಿದ್ದ ವಸ್ತು ತಿರುಗಿ ಬಂತು. ಹೇಗೆ ಬಂತು ಎಂದು ಕೇಳೋ ಅಷ್ಟು ಅರುಳು ಮರುಳಿಲ್ಲ. ದೇವರೇ ತಂದುಕೊಟ್ಟ ಅಂತ ನನಗೆ ಗೊತ್ತು. ಹೀಗೇನೇ ನಮ್ಮ ವಂಶಕ್ಕೆ ಇದು ಮೊದಲು ಬಂದಿದ್ದು" ಎಂದೆಲ್ಲಾ ಹೇಳಿದಳು.

ಕಣ್ಣು ಕೆರೆತುಂಬಿ ತುಳುಕುತ್ತಿತ್ತು. ಧ್ವನಿಯು ನಡುಗುತ್ತಿತ್ತು.

"ಸ್ವಲ್ಪ ಇರಪ್ಪಾ!" ಎನ್ನುವಂತೆ ಕಣ್ಣು ಕೈ ಸನ್ನೆ ಮಾಡಿ ಆಕೆಯು ಮನೆಯೊಳಕ್ಕೆ ಹೋದಳು. ತುಸು ಹೊತ್ತಿನಲ್ಲೇ, ಮೊರದಿಂದ ಮೊರವೊಂದನ್ನು ಮುಚ್ಚಿಕೊಂಡು, ಗಡಗಡ ನಡೆದು ಬಂದಳು.

"ಇದನ್ನು ತೊಗೋಪ್ಪಾ" ಎನ್ನುತ್ತಾ ಮೇಲು ಮೊರವನ್ನು ಎತ್ತಿ, ಒಂದು ಸೇರು ಅಕ್ಕಿ, ಬೇಳೆ, ಗೋಧಿಯನ್ನೂ ಒಂದು ಪೀತಾಂಬರವನ್ನೂ, ಒಂದು ಬಟ್ಟಲು ಬಾದಾಮಿಯನ್ನೂ ತೆಗೆದು ಬುಡುಬುಡುಕೆಯವನ ತೋಳ್ಚೀಲಕ್ಕೆ ಹಾಕುತ್ತಾ, "ಈ ಪೀತಾಂಬರವನ್ನು ನಿನ್ನ ಹೆಂಡತಿಗೆ ಕೊಡಪ್ಪಾ, ಯಾರೂ ಉಟ್ಟಿದ್ದಲ್ಲ ಮಗನ ಮದುವೇಗೆ ಅಂತ ತಂದ ಜವಳಿಯದು. ಬಾದಾಮಿ ಕಾಳುಗಳನ್ನು ಹಾಲಕ್ಕಿಗೆ ತಿನ್ನಿಸಪ್ಪಾ! ಧಾನ್ಯಗಳೆಲ್ಲ ನಿನ್ನ ಮನೆ ತುಂಬಿರಲಪ್ಪಾ" ಎಂದು ಹರಸಿ ಹೇಳಿದಳು.

"ತಾಯೀ! ನನಗೆ ಮದುವೇನೇ ಆಗಿಲ್ಲವಲ್ಲ" ಎಂದ ಬುಡುಬುಡುಕೆಯವ.

"ಮದುವೆಯಾದಾಗ, ಹೆಂಡತಿ ಮನೆಗ ಬಂದಾಗ, ಆಕೆಗೆ ಉಡಿಸಪ್ಪಾ," ಎಂದಳು.

"ಹೆಂಡತಿ ಸಿಗೋದು ಅಷ್ಟು ಸುಲಭವಲ್ಲಾ ಅಂತ ನಮ್ಮ ಗುಡಿ ಪೂಜಾರಪ್ಪನವರು ಹೇಳ್ತಿದ್ದರು, ತಾಯಿ. ಹೆಣ್ಣುಗಳು ಸುಲಭವಾಗಿ ಸಿಕ್ತವೆ. ಕಷ್ಟದಲ್ಲಿದ್ದಾಗ ಅವಮಾನ ಆದಾಗ ನೆರವಾಗೋ ಹೆಂಡತಿ ಸಿಗೋದು ನೂರು ವರ್ಷಕ್ಕೊಮ್ಮೆ ನೂರು ಸಾವಿರ ಜನರಲ್ಲೊಬ್ಬರಿಗೆ ಎಂದು.

ಆದರೆ ನಮ್ಮ ಅಮ್ಮ ಎಂದೂ ನನ್ನಿಂದ ಏನನ್ನೂ ಕೇಳಲಿಲ್ಲ. ಆಕೆಗೆ ಈ ಪೀತಾಂಬರ ಉಡಿಸ್ತೀನಿ ತಾಯಿ, ನೀವು ಒಪ್ಪಿದರೆ" ಎಂದು ನಗುನಗುತ್ತಾ ಬುಡುಬುಡುಕೆಯವ ಹೇಳಿದ.

"ನಿನಗೆ ಹೇಗೆ ತೋರಿದರೆ ಹಾಗೆ ಮಾಡಪ್ಪಾ! ನಿನಗೆ ಸಂತೋಷವಾದರೆ, ನನಗೂ ಸಂತೋಷ" ಎಂದಳು ಆಕೆ.

ಬುಡುಬುಡುಕೆಯನ್ನು ಬಾರಿಸುತ್ತಾ ಮುಂದೆ ನಡೆದ.

"ನೂರು ಕಾಲ ಬಾಳಪ್ಪ!" ಎಂದು ಅವನ ನೆರಳನ್ನೇ ಹರಸಿದಳು.

* * * *

ಕೊಂಡೆನಕವಲ್ಲಿಯಲ್ಲಿ ಹುಣ್ಣಿಮೆಯ ಪೂಜೆಯನ್ನು ಮುಗಿಸಿ, ಹುಷಾರು ಬಂಡೆಯ ಬಳಿ ಪೂಜಾರಪ್ಪನು ಕುಳಿತಿದ್ದಾನೆ. ಅವನ ವಿವೇಚನೆಗೆ ಸಿಗದಿದ್ದ ಯಾವುದೋ ಒಂದು ದುಗುಡವು ಅವನನ್ನು ಕಾಡಿಸುತ್ತಿದೆ. ಕಾಣಿಸದೆ ಇದ್ದ ಶಿವದಾರವು ಕೂಡ, ಕಂಡ ಹೆಬ್ಬಾವಿಗಿಂತ ಹೆಚ್ಚು ಹೆದರಿಕೆಯನ್ನು ಹುಟ್ಟಿಸುತ್ತೆಂಬುದನ್ನೇ ಅವನು ಎಲ್ಲರಿಗೂ ಹೇಳಿಕೊಡುತ್ತಿದ್ದ. ಶಿವದಾರವೋ ಶವದಾರವೋ ಎರಡೂ ಒಂದೇ ಏನೋ ಎಂದೂ ಅವನಿಗೆ ತಳಮಳವಾಗುತ್ತಿದೆ.

ಬುಡುಬುಡುಕೆಯ ನುಡಿಯು ಹಗೂರಾಗಿ ಕೇಳಿಸಿತು. ಈ ಹೊತ್ತಿನಲ್ಲಿ ಬುಡುಬುಡುಕೆಯವನ್ಯಾಕೆ ಬಂದಾನು ಎನ್ನಿಸಿತು ಅವನಿಗೆ.

ಬುಡುಬುಡುಕೆಯವನೊಬ್ಬ ಶಾಲಿನಲ್ಲಿ ಹೊದಿಸಿಟ್ಟ ಬುಡುಬುಡುಕೆಯನ್ನು ಬಾರಿಸುತ್ತಾ, ಸಣ್ಣ ದನಿಯಲ್ಲಿ ಏನನ್ನೋ ಭಜನೆ ಮಾಡುತ್ತಾ, ಬರುತ್ತಿದ್ದಾನೆ.

ಹುಷಾರು ಬಂಡೆಯ ಬಳಿಗೆ ಬಂದಾಗಲೇ ಬುಡುಬುಡುಕೆಯವನು ಸುತ್ತ ನೋಡಿದ್ದು. ಬಂಡೆಯ ಬಳಿ ಕುಳಿತಿದ್ದ ಪೂಜಾರಪ್ಪನನ್ನು ಕಂಡಾಗ ಓಡೋಡಿ ಬಂದು ಅಡ್ಡಬಿದ್ದು, "ಈ ಹೊತ್ತಿನಲ್ಲಿ ಇಲ್ಲಿ ಯಾಕೆ ಒಂಟಿಯಾಗಿ ಕೂತಿದ್ದೀರಿ?" ಎಂದು ಕಾತರದಿಂದ ಕೇಳಿದ.

"ಯಾಕೋ ಬೇಜಾರಾಯ್ತು, ನಿದ್ದೆ ಬರಲಿಲ್ಲ, ನಿನ್ನ ಯೋಚನೇನೇ ಮೇಲೆ ಮೇಲೆ ಬರಲು ಆರಂಭಿಸಿತು. ಯಾಕೆ ಇನ್ನೂ ಇವನು ಹಿಂತಿರುಗಿ ಬರಲಿಲ್ಲ? ಎಂದು ತಳಮಳಕ್ಕೇ ಶುರುವಾಯ್ತು, ಅದಕ್ಕೇ ಇಲ್ಲಿ ಬಂದು ಕುಳಿತೆ. ಅದು ಹಾಗಿರಲಿ. ನೀನೇನೆಲ್ಲಾ ಮಾಡಿಕೊಂಡು ಬಂದೆ ಜಗ್ಗೋಜಿ?" ಎಂದು ಕೇಳಿದ ಪೂಜಾರಪ್ಪ.

"ಈ ಸಾರಿ ನೀವು ಕೋಲಾರಮ್ಮನ ದರ್ಶನ ಮಾಡಿಕೊಂಡು ಬಾ, ಚೇಳುಗಳನ್ನು ಕಂಡು ಬಾ ಎಂದು ಕಳಿಸಿದಿರಿ. ಅಲ್ಲಿಗೆ ಹೋದೆ, ಕೋಲಾರಮ್ಮನ ಗುಡಿ ಹೊಸಲ ಕೆಳಗೆ 'ಬುಸ್' ಶಬ್ದವಾದಾಗ ಹಾವೇ ಎಂದುಕೊಂಡೆ. ಆಮೇಲೆ ನೋಡಿದರೆ ಭಾರೀ ಚೇಳುಗಳು ರೇಗಿ ಉಸಿರಾಡಿದ ಶಬ್ದ ಎಂದು ತಿಳಿಯಿತು. ಬುಡುಬುಡುಕೆಯವನ ವೇಷ ಹಾಕ್ಕೊಂಡು ಹೊರಟಾಗ ಸಂತಸದ ಕೊರಲಲ್ಲಿ ಹಾಲಕ್ಕಿ ನುಡಿಯಿತು. ಉಪ್ಪರಿಗೆ ಮನೆಯ ಹತ್ತಿರ ಹೋದಾಗ ಹಿರಿಯ ಮುತ್ತೈದೆಯೊಬ್ಬಳು ಹೂವು ತುಳಸಿ ಕೀಳುತ್ತಿದ್ದಳು. ಎಂಥಾ ಮುತ್ತೈದೆತನದ ಕಳೆ ಅಂತೀರಿ ಆಕೆಯ ಮುಖದ ಮೇಲೆ! ಆದರೆ ಕಿವಿಗೆ ಓಲೆ ಇರಲಿಲ್ಲ. ಶ್ರೀಮಂತ ಮನೆತನದ ಆಕೆಯ ಕಿವಿ ಖಾಲಿಯಾಗಿದ್ದು ಸೋಜಿಗವೆನಿಸಿತು. ಆಕೆಯ ಮುಖದಲ್ಲಿ ಚಿಂತೆಯು ಮೂಡಿತ್ತು. ಅದಕ್ಕೆ ಹಾಲಕ್ಕಿ



ನುಡಿಯತ್ತೈತಿ, ಮಂಗಳವಸ್ತು ಸಿಕ್ತೈತಿ ಎಂದು ಭೈರವಿ ನುಡಿಸಿದ್ದನ್ನೆಲ್ಲಾ ಹೇಳಿದೆ. ಜೋಗಸೆ ಭಿಕ್ಷೆ ಹಾಕಿದಳು. ಊರಲ್ಲೆಲ್ಲಾ ಸುತ್ತಾಡಿದಾಗ, ಕಡಲೆಕಾಯಿ ಮಾರೋಳು ಹೇಳಿದ್ದನ್ನು ಕೇಳಿ, ಎದುರಂಗಡಿ ಅಯೋಧ್ಯಾರಾಮನ ಸುದ್ದಿ ತಿಳಿದಾಗ, ರಂಗ ಒಂದು ಮೋಜಿನ ಮೇಲೆ ಪಾವಲಿ ಎಸೆದಾಗ, ಎಲ್ಲಕ್ಕೂ ತಾಳೆ ಹಾಕಿದೆ. ಮಧ್ಯಾಹ್ನವಾದ ಮೇಲೆ ಮುಸಾಫರ ಖಾನೆಯ ಹತ್ತಿರ ಫೌಜುದಾರನನ್ನು ಕಂಡಾಗ, ಆ ಬೆಳಿಗ್ಗೆ ಕೊಳದಲ್ಲಿ ಸ್ನಾನಕ್ಕೆ ಹೋಗಿದ್ದಾಗ ಅವನೇ ಬಂದಿದ್ದುದು ಎಂದು ತಿಳಿಯಿತು. ಅದಕ್ಕೇ ತೊಡೆಯ ಹಿಂದಿನ ಮಚ್ಚೆಯ ಗುರ್ತು ಹೇಳಿದೆ. ಅವ ದಂಗಾಗಿ ಭವಿಷ್ಯ ಕೇಳಿದ. ನಿನ್ನ 'ದಿರಸನ್ನು' ಈ ರಾತ್ರಿ ಎರವಲು ಕೊಡು ಎಂದಾಗ ಅವ ಸಂತೋಷದಿಂದ ಒಪ್ಪಿದ. ದಳವಾಯರ ಫೌಜಿನವರ 'ದಿರಸಿನ' ಜೋರಿನಿಂದ ಕೊತ್ವಾಲರ ಪ್ಯಾದೆಯನ್ನು ಕರೆದುಕೊಂಡು ಹೋದೆ.

ಅಯೋಧ್ಯಾರಾಮನು ಬಾಗಿಲು ತೆಗೆದಾಗ ಕೋಠಡಿಯನ್ನೆಲ್ಲಾ ನೋಡಿದೆ. ಎದುರಿಗೆ ಪಾತ್ರೆಗಳ ರಾಶಿ. ಎಡಕ್ಕೆ ಕಿಟಕಿ, ಅದರಡಿಯಲ್ಲೇ ಅವನ ಸುಪ್ಪತ್ತಿಗೆ, ಬಲಗಡೆಗೆ ಬಾಗಿಲೊಂದಿತ್ತು ಅದನ್ನು ಹಾಕಿ, ಅಗುಳಿ ನೂಕಿತ್ತು. ಇವನೇನೋ ಗುಪ್ತ ವ್ಯವಹಾರದೋನು, ಮನೆಯವರಿಗೂ ತಿಳಿಯದಂತೆ ಕೆಲಸ ಮಾಡುವವನು ಎಂದು ಅರ್ಥವಾಯಿತು. ಹೆದರಿಸಿದೆ. ಕೊರ್ಡಾದ ಮೇಲೆ ಕೈಯ್ಯಾಡಿಸಿದಾಗ, ಅವನು ನಡುಗಿದ್ದನ್ನು ನೀವು ನೋಡಬೇಕಾಗಿತ್ತು ಪೂಜಾರಪ್ಪನೋರೇ!

ಕೊಳದಪ್ಪಲೆ ಸರಿಸಿ ಗೋಡೆಯ ಸಂದೂಕದ ಬಾಗಿಲು ತೆಗೆದಾಗ, ಅವನ ಸೊಂಟದಿಂದ ಪೊಟ್ಟಣ ಒಂದು ಬಿತ್ತು. ಬಾಗಿಲ ಬಳಿ ಇದ್ದ ನನ್ನ ಬಳಿಗೆ ಬಂದು ಓಲೆಯ ಗಂಟನ್ನು ಕೊಟ್ಟಾಗ ಶತಪಥ ನಡೆದು ಹೋಗಿ ಕೆಳಗೆ ಬಿದ್ದಿದ್ದ ಪೊಟ್ಟಣದ ಮೇಲೆ ಕಾಲಿರಿಸಿ ನಿಂತೆ. ದಳವಾಯರು ಬರುತ್ತಾರೆ ಅಂತ ಹೇಳಿದಾಗ ಅವ ಬೆದರಿ ಬಿದ್ದು ಸುಪ್ಪತ್ತಿಗೆ ಎತ್ತಲು ಹೋದಾಗ ಕಾಲ ಕೆಳಗೆ ಇದ್ದ ಪೊಟ್ಟಣವನ್ನು ಜೇಬಿಗೆ ಹಾಕಿಕೊಂಡೆ.

ಅಯೋಧ್ಯಾರಾಮ ಎರಡು ಥೈಲಿಗಳನ್ನು ತಂದುಕೊಟ್ಟ. ದಳವಾಯಿಗಳಿಗೆ ತಿಳಿಸುಲ್ಲ ಅಂತ ಹೇಳಿ ಹೊರಬಿದ್ದೆ. ಮುಸಾಫರಖಾನೆಗೆ ಹೋಗಿ ಫೌಜಿನವನಿಗೆ ದಿರಸನ್ನು ವಾಪತಿ ಮಾಡಿ, ಮಾರೀಗುಡೀಗೆ ಹೋಗಿ, ಸಾಮಾನೆಲ್ಲವನ್ನೂ ಕಟ್ಟಿಕೊಂಡು ಊರ ಕಡೆಗೆ ಹಿಂತಿರುಗಲು ಅಣಿಮಾಡಿಕೊಂಡೆ.

ಮಾರನೆ ಬೆಳಿಗ್ಗೆ ಹಿರಿಯ ಮುತ್ತೈದೆಗೆ ಓಲೆಗಳನ್ನು ಹೇಗೆ ಹಿಂತಿರುಗಿಸುವುದು ಎಂದುಕೊಂಡಾಗ, ಚೆಂದುಳ್ಳಿ ಹುಡುಗಿಯೊಬ್ಬಳು ಸಿಕ್ಕಿದಳು. ಅವಳನ್ನು ನೆರವು ಮಾಡಿಕೊಂಡು ನನ್ನ ಕೆಲ್ಸಾ ಮುಗಿಸಿದೆ. ಮುತ್ತೈದೆಯು ಕೊಟ್ಟ ಪೀತಾಂಬರವಿದು. ಭೈರವೀಗೆ ದುರ್ಗಾಷ್ಟಮಿ ದಿವಸ ಉಡಿಸಿದರೆ ಬಲು ಚೆಂದ ಕಂಡೀತು! ಇವೆರಡೂ ಥೈಲಿಗಳನ್ನು ಅಯೋಧ್ಯಾರಾಮನು ಕಾಣಿಕೆಯಿತ್ತದು," ಎಂದು ಪೀತಾಂಬರವನ್ನೂ, ಥೈಲಿಗಳೆರಡನ್ನೂ ಪೂಜಾರಪ್ಪನ ಕಾಲಬಳಿ ಇಟ್ಟ.

"ಪೊಟ್ಟಣದಲ್ಲೇನಿದೆ?" ಎಂದ ಪೂಜಾರಪ್ಪ.

"ನಾವು ಕಷ್ಟಪಟ್ಟು, ಯೋಜನೆ ಹೂಡಿ, ಸಂಪಾದಿಸದೇ ಇರೋದು, ನಮ್ಮ ಕೈಗೋ, ಕಾಲಿಗೋ ತೊಡಕಿ ಸಿಕ್ಕಿದ್ದನ್ನು, ಕಣ್ಣೆತ್ತಿಕೂಡ ನೋಡಬಾರದು ಅಂತ ನೀವು

ಹೇಳಿರಲಿಲ್ವಾ, ಅದಕ್ಕೇ ಅದನ್ನು ನೋಡಲೂ ಇಲ್ಲ. ನಿಮ್ಮ ಕಾಲ ಬಳಿ ಹಾಕಿದರೆ ಮುಗಿಯಿತು ನನ್ನ ಕೆಲಸ" ಎಂದ ಜಗ್ಗೋಜಿ.

ಪೊಟ್ಟಣ ಬಿಚ್ಚಿ ನೋಡಿದರೆ, ವಜ್ರ ಕೆಂಪಿನ ಹರಳುಗಳೇ ಇದ್ದುವು. ಎರಡೂ ಥೈಲಿಗಳಲ್ಲಿ ಹತ್ತುನೂರು ವರಹಾಗಳಿದ್ದುವು.

"ಹಾಲಕ್ಕಿ ಸತ್ಯಾನೇ ನುಡಿದಿದ್ದು," ಎಂದ ಜಗ್ಗೋಜಿ. ಪೂಜಾರಪ್ಪನು ಹ್ಲೂಗುಟ್ಟಿ ಎದ್ದು ತನ್ನ ಗುಡಿಸಲ ಬಳಿಗೆ ಹೊರಟ. ನೆರಳಿನಂತೆ ಜಗ್ಗೋಜಿಯು ಅವನನ್ನು ಹಿಂಬಾಲಿಸಿದ.

ಗುಡಿಸಿಲೊಳಕ್ಕೆ ಪೂಜಾರಪ್ಪನು ಹೋದ ಮೇಲೆ ಜಗ್ಗೋಜಿಯು ಹಟ್ಟಿಯ ಮನೆಯ ಕಡೆಗೆ ಕಾಲು ಹಾಕಿದ.

# -"ಕೆಂಪೇ ನೂರು ಹಸಿರೇ ಸಾವಿರ"-

ನವರಾತ್ರಿಯಾದ ಮೇಲೆ ಚಾಮುಂಡಿ ಬೆಟ್ಟದಲ್ಲಿ ತೆಪ್ಪೋತ್ಸವವು ನಡೆದಾಗ ಆಳುವ ಮಹಾರಾಜರೂ ಭಾಗವಹಿಸುತ್ತಾರೆ.

"ನಾನು ಹೇಳಿದ್ದೆಲ್ಲಾ ಜ್ಞಾಪಕ ಇದೆ ತಾನೇ?" ಎಂದರು ಜಮೇದಾರ್ರು. ಹತ್ತೂ ಜನ ಪ್ಯಾದೆಗಳೂ 'ಇದೆ ಸಾರ್' ಎಂದು ಹೇಳಿದರು.

"ಗಿರಿಯ ಮತ್ತು ಲಿಂಗ, ನೀವಿಬ್ಬರೂ ಅಪರಾಧಿ ನಿಂತಿರುವ ಕಟಕಟೆಯ ಎರಡೂ ಕಡೆ ಸರ್ಪ ಕಾವಲು ಹಾಕಿ ನಿಂತಿರಬೇಕು, ಏನಾರ ಎಚ್ಚರ ತಪ್ಪಿದರೆ, ಅಪರಾಧಿ ತಪ್ಪಿಸಿಕೊಂಡರೆ, ನಿಮ್ಮ ತಲೆ ಹೋಗುತ್ತೆ, ನೆನಪಿರುತ್ತೆ ತಾನೇ?"

"ರಾಮ, ಸೋಮ, ನೀವಿಬ್ಬರೂ ನ್ಯಾಯಾಸ್ಥಾನದ ಸುತ್ತ ಜನರು ಗಲಾಟೆ ಮಾಡದ ಹಾಗೆ ನೋಡಿಕೋಬೇಕು. ಅಪರಾಧೀನ ನೋಡುಕ್ಕೆ ಪಟ್ಟಣದ ಜನಾ ಎಲ್ಲಾ ಸೇರಿರ್ತಾರೆ, ಬಲು ಹುಷಾರಾಗಿರಬೇಕು. ಕೋವಿ ಮದ್ದು ಎಲ್ಲಾ ಸರಿಯಾಗಿದೆಯೇ ಅಂತ ನೋಡಿಕೊಳ್ಳಿ-ಲಟ್ಠಾದ ಹಿಡಿ ಭದ್ರವಾಗಿದೆಯೇ ಅಂತ ನೋಡಿಕೊಳ್ಳಿ."

"ಭಷೀರ್, ಬಾಬಾ, ನೀವಿಬ್ಬರೂ ಗುಪ್ತವಾಗಿ ಜನರ ಮದ್ಯೆ ಓಡಾಡ್ತಿರಿ ಅನುಮಾನ ಬಂದರೆ ತಕ್ಷಣ ತಿಳಿಸಿ. ದೊಡ್ಡ ಕಚೇರಿಯ ಕೊತ್ವಾಲರ ಸಿಬ್ಬಂದಿ ಕೂಡ ಬರಬಹುದು. ಅವರೆದುರಿಗೆ ಎಲ್ಲಾರ ಅವಮಾನ ಆದೀತು ನಮಗೆ, ಬಲು ಹುಷಾರಾಗಿರಿ."

ವೆಂಕ, ಮುನಿಯ, ನೀವು ದೊಡ್ಡ ಬಾಗಿಲ ತಾವ ಕಾದಿರಿ. ಮಿಕ್ಕೆಲ್ಲಾ ಬಾಗಿಲುಗಳೂ ಬಂದ್ ಆಗಿದೆ ಅಂತ ಭದ್ರ ಮಾಡಿಕೊಳ್ಳಿ. ನಿಮ್ಮ ಗರಡಿ ಸ್ನೇಹಿತರನ್ನ ಕರೆಸಿಕೊಂಡರೂ ಆಯಿತು. ಅಪರಾಧಿ ಬಂದಾಗಿನಿಂದ ಅವನ ಮೇಲೆ ಕಣ್ಣಿರಲಿ" ಎಂದು ಜಮೇದಾರ್ರು ತಿರುಗಿ ಎಚ್ಚರಿಕೆ ಕೊಟ್ಟರು.

"ಈಗಿನ್ನೂ ಎಂಟು ಗಂಟೆ, ಹತ್ತು ಗಂಟೆ ಹೊತ್ತಿಗೆಲ್ಲ ನೀವು ಸಿದ್ಧವಾಗಿರಬೇಕು. ಹನ್ನೊಂದಕ್ಕೆ ವಿಚಾರಣೆ ಶುರುವಾಗುತ್ತೆ. ಆ ವೇಳೆಗೆ ಜನರ ಗುಂಪು ತುಂಬಿರಬಹುದು. ಹುಷಾರಾಗಿರ್ತೀರಲ್ಲ....? ನಾನು ಬಂದೀಖಾನೆಗೆ ಹೋಗಿ ಖುದ್ದಾಗಿ ಅಪರಾಧೀನ ಕರೆದುಕೊಂಡು ಬರ್ತೀನಿ. ಹುಷಾರ್! ಹುಷಾರ್!!!" ಎಂದು ಹೇಳಿ ಜಮೇದಾರ್ರು ಹೊರಟುಹೋದರು.

* * * *

ಎಲೆಯಡಿಕೆ ಜಗಿಯುತ್ತಾ ಕಸೆಅಂಗಿಯ ದಾರಗಳನ್ನು ಕಟ್ಟುತ್ತಾ ಪಿರಿಯಾಪಟ್ಟಣದ ಸಾಹುಕಾರ್ರು "ಮೂಡ್ಲಾ! ಹತ್ತೂವರೆ ಆಗ್ತಾ ಬಂತು, ಸಿದ್ಧವಾಗಿದೀಯಾ? ಬಾ, ನ್ಯಾಯಾಸ್ಥಾನಕ್ಕೆ ಹೋಗೋಣ. ಹೊತ್ತಾದರೆ ಕೂತುಕೊಳ್ಳೋದಕ್ಕೆ ಸ್ಥಳ ಸಿಗದೆ ಇರಬಹುದು" ಎಂದು ಕೂಗಿದರು.

ಕೊಠಡಿಯಿಂದಲೇ "ಟ್ರಂಕಿಗೆ ಸಾಮಾನೆಲ್ಲಾ ತುಂಬುತ್ತಾ ಇದೀನಿ. ಇನ್ನೆರಡು ನಿಮಿಷದಲ್ಲಿ ಬಂದುಬಿಡ್ತೀನಿ. ಇವತ್ತು ಸಂಜೆ ಮುಂದೆ ಗಾಡಿ ಕಟ್ಟಿಸಿಕೊಂಡು ಮೈಸೂರಿಗೆ ಹೋಗಲೇಬೇಕು. ಹೊಳೆನಾಗಪ್ಪನಿಗೆ ಹರಕೆ ಒಪ್ಪಿಸಿ ಮೂರು ದಿನಗಳಾಯ್ತು. ನೀವೇನೋ ಇರು ಅಂದ್ರಲ್ಲಾ ಅಂತ ಉಳಕೊಂಡೆ, ಇವತ್ತಾದರೂ ಹೋಗಲೇಬೇಕು" ಎಂದು ಮೂಡಯ್ಯ ಹೇಳಿದ.

"ನೀ ಇದ್ದದ್ದರಿಂದ ಮನಸ್ಸಿಗೆ ಎಷ್ಟೋ ಧೈರ್ಯ ಇತ್ತಪ್ಪಾ, ನೀ ಕಂಡ ಹಾಗೇ ನೋಡು, ಮನೆ ಮೇಲೆ ಒಂದು ವಾರದಿಂದ ಕಲ್ಲು ಬೀಳ್ತಾ ಇತ್ತು. ಬೆಳಗಿನ ಝಾವದಲ್ಲಿ, ಸಂಜೆ ಮುಂದೆ ಅನುಮಾನವಾಗೋ ಹಾಗೆ ಯಾರ್ಯಾರೋ ಈ ಊರಿಗೆ ಹೊಸಬರು ಓಡಾಡ್ತಾ ಇದ್ದರು. ಮಧ್ಯಾಹ್ನ ಮೂರು ಗಂಟೆ ಹೊತ್ತಿನಲ್ಲಿ ಬುಡುಬುಡಿಕೆಯವನು ಬಂದು ಭಿಕ್ಷೆ ಕೇಳಿದ ಅಂದರೆ ಅನುಮಾನ ಆಗುಲ್ವೇ? ಸಂಜೆ ಮುಂದೆ ಕಲಾಯಿ ಕಲಾಯಿ ಅಂತ ಕೂಗಿಕೊಂಡು ಬಂದರೆ ಹೆದರಿಕೆಯಾಗುಲ್ವೇ? ಎಲ್ಲಕ್ಕಿಂತ ಹೆಚ್ಚಾಗಿ ಆ ಜಗ್ಗೋಜಿ ಊರಿಗೆ ಬಂದಿದಾನೆ ಅಂತ ಸುದ್ದಿ ಹರಡಿದ ಮೇಲೆ ಭಯ ಆಗ್ದೇ ಇರುತ್ಯೇ ಹಣಕಾಸು ಇದ್ದೋರಿಗೆ? ನೀನು ಬಂದಿದ್ದು ದೇವರು ಬಂದಹಾಗೆ ಆಯ್ತು" ಎಂದು ಸಾಹುಕಾರರು ಧನ್ಯವಾದದ ದನಿಯಲ್ಲಿ ಹೇಳಿದರು.

"ಇಷ್ಟು ಯಾಕೆ ನನ್ನ ಹೊಗಳಬೇಕು ಸಾಹುಕಾರ್ರೇ! ಜಗ್ಗೋಜೀನ ಹಿಡಿದರು; ಅವನ ವಿಚಾರಣೆಯಾಗ್ತಾ ಇದೆ. ಬೇಗ ಬೇಗ ಮುಗಿಸದೆ ಇದ್ರೆ, ಇನ್ನೇನಾದರೂ ಮಾಡಿ ತಪ್ಪಿಸ್ಕೋಬಹುದು ಅಂತ ತಳವಾರರೂ ತುರ್ತುಮಾಡ್ತಾ ಇದ್ದರು. ನಾಲ್ಕು ದಿವಸ ವಿಚಾರಣೆ ಆಯ್ತು, ಆದರೆ ಜಗ್ಗೋಜಿ ಒಂದು ಮಾತನಾಡಿಲ್ಲ, ತುಟಿಪಿಟಕ್ಕಂತನಲಿಲ್ಲ, ಅವನ ಕಡೆ ವಾದಿಸುಕ್ಕೆ ಅಂತ ವಕೀಲರನ್ನೂ ನೇಮಿಸಿಕೊಳ್ಳಲಿಲ್ಲ. ಅದಕ್ಕೇ ನನಗೆ ಆಶ್ಚರ್ಯ! ಅಷ್ಟೆಲ್ಲಾ ಜಾಣ, ಚದುರ, ಅಂತ ಅಂತಿದ್ರು. ಇವತ್ತು ತೀರ್ಪು ಕೊಟ್ಟಾಗ ಏನು ಮಾಡ್ತಾನೆ ಅಂತ ನೋಡಬೇಕು ಅಂತ ನಂಗೂ ಚಪಲಾ ಇತ್ತು. ಅಲ್ಲದೆ, ನಮ್ಮಪ್ಪನ ಸ್ನೇಹಿತರು, ನೀವು ಏನು ಹೇಳಿದರೂ ಅದು ನನಗೆ ಹುಕುಂ ಇದ್ದ ಹಾಗೆ" ಎಂದು ಮೂಡ್ಲಯ್ಯ ಕೊಠಡಿಯಿಂದ ಬಂದು, ಹೇಳುತ್ತಾ ಸಾಹುಕಾರರ ಜತೆಗೂಡಿ ನ್ಯಾಯಸ್ಥಾನದ ಕಡೆಗೆ ಹೊರಟನು.

* * * *

"ಹೋಷಿಯಾರ್! ಎಚ್ಚರಿಕೆ! ಖಬರ್‌ದಾರ್!"

ದೊಡ್ಡ ಗಂಟಲಿನ ಕೂಗು ಕೇಳಿಸಿದ ಕೂಡಲೇ, ನ್ಯಾಯಾಸ್ಥಾನದಲ್ಲಿದ್ದವರೆಲ್ಲರೂ ಪಿಸುಪಿಸು ಮಾತುಗಳನ್ನು ನಿಲ್ಲಿಸಿ, ಎದ್ದು ನಿಂತರು.

ನ್ಯಾಯಾಧೀಶರು ತಮ್ಮ ಆಸನವನ್ನು ಅಲಂಕರಿಸಿದರು. ನಂತರ ಪೀಠ ದೊರಕಿದವರೆಲ್ಲಾ ಕುಳಿತುಕೊಂಡರು. ಪಿರಿಯಾಪಟ್ಟಣದ ಸಾಹುಕಾರರಿಗೆ ಕುರ್ಚಿ ದೊರಕಿತ್ತು. ಮೂಡ್ಲಯ್ಯ ಅವರ ಹಿಂದೆಯೇ ನಿಂತಿದ್ದ.

ಕಟಕಟೆಯಲ್ಲಿ ಅಪರಾಧಿಯು ನಿಂತಿದ್ದನು. ಎರಡೂ ಕಡೆಗಳಲ್ಲಿ ಶಸ್ತ್ರ ಸಜ್ಜಿತರಾದ ಗಿರಿಯ, ಲಿಂಗ ಇಬ್ಬರೂ ಕಾವಲು ನಿಂತಿದ್ದರು. ಅಪರಾಧಿಯ ಕೈಗಳಿಗೆ ಹಾಕಿದ್ದ ಸರಪಣಿಯನ್ನು ಇಬ್ಬರೂ ಹಿಡಿದಿದ್ದರು.

ನ್ಯಾಯಾಧೀಶರು ತಮ್ಮೆದುರಿಗೆ ಇದ್ದ ಕಾಗದ ಪತ್ರಗಳ ಕಟ್ಟನ್ನು ನೋಡಿ, ಗುಮಾಸ್ತೆ ಕಡೆಗೆ ನೋಡಿದರು, ಗುಮಾಸ್ತೆ ಜವಾನನ ಕಡೆಗೆ ನೋಡಿ, ತಲೆ ತೂಗಿದ.

"ಜಗ್ಗೋಜಿ", "ಜಗ್ಗೋಜಿ" ಎಂದು ಜವಾನ ಮಾಮೂಲಿನಂತೆ ಕೂಗಿದ.



"ಮಹಾಸ್ವಾಮಿ! ಅಪರಾಧಿ ಜಗ್ಗೋಜಿಯನ್ನು ಕಟಕಟೆಯಲ್ಲಿ ಹಾಜರ್ಪಡಿಸಿದ್ದೇವೆ" ಎಂದು ಜಮೇದಾರ್ರು ಬಿನ್ನಪಿಸಿಕೊಂಡರು.

ಕೈಯಲ್ಲಿದ್ದ ಮರದ ಸುತ್ತಿಗೆಯಿಂದ ಮೇಜನ್ನೊಮ್ಮೆ ಕುಟ್ಟಿ, ಗಂಟಲನ್ನು ಸರಿಪಡಿಸಿಕೊಂಡು, ನ್ಯಾಯಾಧೀಶರು ಹೇಳಲಾರಂಭಿಸಿದರು.

"ಜಗ್ಗೋಜೀ! ಸರಕಾರದವರು ಮಾಡಿರುವ ಆರೋಪಣೆಗಳೆಲ್ಲಾ ನಿನಗೆ ತಿಳಿದೇ ಇರಬೇಕು. ಪಿರಿಯಾಪಟ್ಟಣದ ಸಾಹುಕಾರ್ರ ಮನೆಗೆ ಕನ್ನ ಹಾಕಿ ಕದಿಯುವುದಕ್ಕೋ ಅಥವಾ ದರೋಡೆ ಮಾಡಿ ಲೂಟಿ ಹೊಡೆಯುವುದಕ್ಕೋ ಮಸಲತ್ತನ್ನು ನೀನು ಮಾಡಿದ್ದೆ. ಅದಕ್ಕಾಗಿ ಭಿಕ್ಷಾಟನೆಗೆ ಬಂದ ಬುಡುಬುಡಿಕೆಯವರನ್ನೂ, ಕೂಲಿಗಾಗಿ ಬಂದ ಕಲಾಯಿ ಮಾಡೋರನ್ನೂ ಸಾಹುಕಾರ್ರ ಮನೆಗೆ ಅಲ್ಲಸಲ್ಲದ ವೇಳೆಯಲ್ಲಿ ಕಳುಹಿಸಿಕೊಟ್ಟಿದ್ದೆ ಎನ್ನುವುದಕ್ಕೆ ಅವರಿಬ್ಬರೂ ಸಾಕ್ಷ್ಯ ಕೊಟ್ಟಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ಕೂಲಿಮಠದ ಸಂಗಪ್ಪನ ಜತೆಯಲ್ಲಿ ಸಾಹುಕಾರ್ರ ಮನೆಗೆ ನಿಶಿರಾತ್ರೀಲಿ ಹೋಗಿದ್ದೆಯೆಂದೂ ಸಂಗಪ್ಪ ಸಾಕ್ಷಿ ಹೇಳಿದ್ದಾನೆ. ಬೆಳಗಿನ ಝಾವದಲ್ಲಿ ಮಾರೀಗುಡಿ ಪಡಸಾಲೆಯಿಂದ ನೀನು ಕೆರೆಯ ಕಡೆಗೆ ಹೋಗಿದ್ದಾಗ, ನಿನ್ನ ಬಟ್ಟೆಗಂಟಿನಲ್ಲಿ ಕನ್ನಗತ್ತರಿ ಇದ್ದುದನ್ನೂ, ಭೈರವಿ ಚಾಟಿ ಇದ್ದುದನ್ನೂ ನೋಡಿದ್ದೆ ಎಂದು ಸಂಗಪ್ಪ ಹೇಳಿದ್ದಾನೆ. ಕೂಲಿಮಠ ಇಟ್ಟುಕೊಂಡು ಜೀವನ ನಡೆಸುತ್ತಿರುವ ಸಂಗಪ್ಪ ಈ ಊರಿಗೆಲ್ಲಾ ಪರಿಚಿತನಾದ ಸಭ್ಯ ಗೃಹಸ್ಥ. ಅವನೇ ನಿನ್ನ ಸುಳುವನ್ನು ಕೊಟ್ಟಿದ್ದು. ಸಾಕ್ಷ್ಯ ಕೊಟ್ಟಾಗೆಲ್ಲಾ, ಅವರುಗಳನ್ನು ಪಾಟಿ ಸವಾಲು ಮಾಡಲು ನಿನಗೆ ಅವಕಾಶ ಕೊಟ್ಟಿದ್ದೆ. ವಕೀಲರನ್ನು ಬೇಕಾದರೂ ಇಟ್ಟುಕೋ ಎಂದೂ ಹಲವಾರು ಸಲ ಹೇಳಿದ್ದೆ. ಆದರೂ ಕಳೆದ ನಾಲ್ಕು ದಿನಗಳಿಂದ ಬಾಯಿಬಿಡದೆ ಮೌನದಿಂದಿದ್ದೀ ಅಂದರೆ ಆರೋಪಣೆಗಳನ್ನೆಲ್ಲಾ ಒಪ್ಪಿಕೊಂಡಂತೆಯೇ ಆಯಿತು. ನಿನ್ನ ಪೂರ್ವ ಚರಿತ್ರೆಯನ್ನು ಕೇಳಿದ ಮೇಲೆ ನೀನು ಕಾನೂನು ಕಂಟಕನಾಗಿರುತ್ತಿ ಎಂದು ಹೇಳಲು ಏನೂ ಅನುಮಾನವಿಲ್ಲ.

"ತೀರ್ಪು ಹೇಳುವ ಮೊದಲು, ಮತ್ತೆ ಒಂದು ಬಾರಿ ಅವಕಾಶ ಕೊಡುತ್ತೇನೆ. ಏನಾದರೂ ಹೇಳುವುದಿದ್ದರೆ ಹೇಳು" ಎಂದು ನುಡಿದು ಮೂಗಿನ ಮೇಲಿದ್ದ ಕನ್ನಡಕವನ್ನು ತೆಗೆದು ಮೇಜಿನ ಮೇಲಿಟ್ಟರು.

* * * *

ನ್ಯಾಯಾಸ್ಥಾನದ ಬಾಗಿಲಲ್ಲಿ ಸ್ವಲ್ಪ ಗಲಭೆ ಆದಹಾಗಾಯ್ತು. ನ್ಯಾಯಾಧೀಶರು ಅತ್ತ ದೃಷ್ಟಿ ಹೊರಳಿಸಿದರು. ತಳವಾರರ ಪ್ಯಾದೆಗಳೆಲ್ಲಾ ಹುಷಾರಾದರು. ಅಪರಾಧಿ ಕೈಗಳಿಗೆ ಹಾಕಿದ್ದ ಸರಪಣಿಗಳು ಬಿಗಿಯಾಗಿ ಹಿಡಿಯಲ್ಪಟ್ಟುವು. ಅಪರಾಧಿಯು ಬಾಗಿಲತ್ತ ನೋಡಿದ.

ಬಾಗಿಲಿನಲ್ಲಿ ಅರಮನೆಯ ಊಳಿಗದವರ ದಿರಸನ್ನು ಧರಿಸಿದ್ದ ಏದುಸಿರುತ್ತಿದ್ದ ಎತ್ತರದ ಆಸಾಮಿಯೊಬ್ಬ ಲಕ್ಕೋಟೆಯೊಂದನ್ನು ಹಿಡಿದು ನಿಂತಿದ್ದ. ಬಾಗಿಲಿನಲ್ಲಿ ಕಾವಲಿದ್ದ ತಳವಾರರ ಪ್ಯಾದೆಗಳು ಅವನನ್ನು ತಡೆದಿದ್ದರು. ಆತ ಅಲ್ಲಿಂದಲೇ "ಮಹಾಸ್ವಾಮೀ! ನಿಮಗೆ ಈ ಲಕ್ಕೋಟೆಯನ್ನು ಜಟ್ಟಂತ ಒಪ್ಪಿಸಬೇಕು ಅಂತ ದರ್ಬಾರ್

ಭಕ್ಷಿಯೋರು ಕಟ್ಟಾಜ್ಞೆ ಮಾಡಿದರು. ಕುದುರೇನ ನಾಗಾಲೋಟದಲ್ಲಿ ಓಡಿಸಿಕೊಂಡು ಬಂದೆ. ಒಳಕ್ಕೆ ಬಿಡುಲ್ಲ ಅಂತ ಈ ಪ್ಯಾದೆಗಳು ತಡೀತಾರೆ. ಒಳಕ್ಕೆ ಬರಲು ಅಪ್ಪಣೆಯನ್ನು ದಯಪಾಲಿಸಬೇಕು" ಎಂದು ಕೂಗಿದ.

ದರ್ಬಾರ್ ಭಕ್ಷಿಯವರ ಹೆಸರು ಕೇಳಿದ ನ್ಯಾಯಾಧೀಶರು ಅಪ್ಪಣೆ ಕೊಟ್ಟರು. ಅರಮನೆಯ ಊಳಿಗದವ ತಲೆಬಾಗಿ ನ್ಯಾಯಾಧೀಶರಿಗೆ ಲಕ್ಕೋಟೆಯನ್ನು ಒಪ್ಪಿಸಿದ. ನಂತರ ಅಪರಾಧಿಯತ್ತ ನೋಡುತ್ತ ಹಿಂದೆ ಹಿಂದೆ ಬಂದು, ಸ್ವಲ್ಪ ಜಾಗಮಾಡಿಕೊಂಡು, ನಿಂತುಕೊಂಡ. ಅವನ ಮುಂದೆ ನಿಂತಿದ್ದ ಮೂಡ್ಲಯ್ಯ "ನನ್ನ ಬೆನ್ನಮೇಲೆ ಉಸಿರು ಬಿಡಬೇಡವೋ" ಅಂತ ಹೇಳಿ ಪಕ್ಕಕ್ಕೆ ಸರಿಯಲು ಪ್ರಯತ್ನ ಮಾಡಿದ. ಜನಸಂದಣಿ ಹೆಚ್ಚಾಗಿದ್ದುದರಿಂದ ಸಾಧ್ಯವಾಗಲಿಲ್ಲ.

* * * *

ನ್ಯಾಯಾಧೀಶರು ಮುದ್ರೆ ತುಂಬಿದ್ದ ಲಕ್ಕೋಟೆಯನ್ನು ಒಡೆದು ಓದಿಕೊಂಡಮೇಲೆ, ತಿರುಗಿ ಕನ್ನಡಕವನ್ನು ಮೇಜಿನ ಮೇಲಿಟ್ಟರು.

"ಜಗ್ಗೋಜೀ! ನೀನು ಹೇಳುವುದು ಏನಾದರೂ ಇದೆಯೇ?" ಎಂದು ಮತ್ತೊಮ್ಮೆ ಕೇಳಿದರು.

ಆಗ ಜಗ್ಗೋಜಿಯು ಬಾಯಿಬಿಟ್ಟ.

"ಮಾಸ್ವಾಮೀ! ಈಗ ಹೇಳಿಕೆಯೊಂದನ್ನು ಕೊಡಬಯಸುತ್ತೇನೆ. ಸಾವಧಾನವಾಗಿ ಕೇಳಬೇಕು. ಸತ್ಯವಾಗಿ ಹೇಳ್ತೀನಿ. ನಾನು ಜಗ್ಗೋಜಿ ಅಲ್ಲ. ನಾನೆಂದೂ ಸುಳ್ಳು ಹೇಳಿದ್ದೇ ಇಲ್ಲ. ನನಗೆ ಅಪಸ್ಮಾರ ಬರ್ತಾ ಇತ್ತು-

ತೆಪ್ಪೋತ್ಸವಕ್ಕೆ ಮೂರು ದಿನ ಮುಂಚೆ ಬೆಟ್ಟದ ಮೇಲೆ ಚಾಮುಂಡೀ ದೇವಿಯ ದೇವಸ್ಥಾನದಲ್ಲಿ ಮಚಾಲ್ಚಿ ಹಿಡಿದು ಸೇವೆ ಮಾಡುತ್ತೇನೆ ಎಂದು ಹರಕೆ ಹೊತ್ತೆ, ಒಂದು ವರ್ಷದಿಂದ ಅಪಸ್ಮಾರ ಬರಲಿಲ್ಲ. ಬರೋ ಸೂಚನೇನೂ ಇತ್ತಿಲ್ಲ. ಅದಕ್ಕಾಗಿಯೇ ಮೈಸೂರಿಗೆ ಈ ಸಾರಿ ನವರಾತ್ರಿಗೆ ಹೋಗಿ ಬೆಟ್ಟದ ಮೇಲೆ ಅಮ್ಮನವರ ಗುಡಿ ಪಡಸಾಲೇಲಿ ಬಿದ್ದುಕೊಂಡು, ಉಪವಾಸ ಇದ್ದು ಮಷಾಲ್ಚಿ ಸೇವೆ ಮಾಡಿ, ನಂತರ ಸಿಕ್ಕಿದ ಪ್ರಸಾದ ತಿಂದುಕೊಂಡಿದ್ದೆ.

ತೆಪ್ಪೋತ್ಸವ ಈ ಬಾರಿ ಬಲು ಚಂದವಾಗಾಯ್ತು. ಅರಸರೇ ಖುದ್ದು ಬಂದಿದ್ದರು; ತಮ್ಮ ಪರಿವಾರದ ಸಮೇತ. ಅರಮನೆಯ ಊಳಿಗದವರು ಎಲ್ಲಾ ಏರ್ಪಾಡನ್ನೂ ಮಾಡಿದ್ದರು.

ಪಡಸಾಲೇಲಿ ನಾನು ಬಿದ್ದುಕೊಂಡಾಗ ನಿಶಿರಾತ್ರಿ ಆಗಿತ್ತು. ನಿದ್ದೆ ಹತ್ತಿತ್ತು. ಸ್ವಲ್ಪ ಹೊತ್ತಿನಲ್ಲಿ ಏನೋ ಸಬ್ದ ಆದ ಹಾಗಾಯ್ತು. ಎಚ್ಚೆತ್ತೆ. ನೋಡಿದರೆ ದೊಡ್ಡ ಅರ್ಚಕರೇ ಬಂದಿದ್ದರು. ಮುಖ ಇಳಿದುಹೋಗಿತ್ತು. ಅಡ್ಡಬಿದ್ದು ಕೇಳಿದೆ. 'ಏನಾಯ್ತು ಅರ್ಚಕಪ್ಪನೋರೇ' ಅಂತ. ಆಗ ಅವರಂದರು. 'ನೋಡ್ಲಾ! ಈ ಸಂಜೆ ಉತ್ಸವ ಆಯ್ತಲ್ಲ, ಹಿಂತಿರುಗಿದ ಮೇಲೆ, ಅಮ್ಮನವರ ವಿಗ್ರಹಕ್ಕೆ ಹಾಕಿದ್ದ ಹಸಿರು ಕೆಂಪಿನ



ಉಂಗುರ ಕಳುವಾಗಿದೆ ಅಂತ ಗೊತ್ತಾಯ್ತು. ಪೇಷ್ಕಾರರ ಹತ್ತಿರ ಹೋಗಿ ಹೇಳಿದೆ. 'ಅದು ಹೋದರೆ ನಿನ್ನ ತಲೆ ತೆಗಿಸ್ತಾರೆ ಅರಸರು, ಅವರ ಹಿರಿಯರೇ ಅದನ್ನು ಮಾಡಿಸಿಕೊಟ್ಟಿದ್ದದ್ದು. ಏನಾರ ಮಾಡಿ ಹುಡುಕು-ಅಂತ ಬೈದು ಕಳಿಸಿದರು. ದರ್ಬಾರ್ ಭಕ್ಷಿಯವರಿಗೆ ಅವರೇ ತಿಳಿಸ್ತೇವೆ ಅಂತ ಹೇಳಿದರು. ನಾನೇನ್ಮಾಡಲಿ, ನನಗೆ ತಿಳಿದ ವಿದ್ಯೆ ಒಂದೇ-ಪ್ರಾರ್ಥನೆ!!-ಉಂಗುರ ಸಿಗೋತನಕ ಇಲ್ಲೇ ಉಪವಾಸ ಇದ್ದು ಪ್ರಾರ್ಥನೆ ಮಾಡ್ತೇನೆ, ಎಂದು ಹೇಳಿದರು.

'ನೀವು ಮಾಡೋ ಪ್ರಾರ್ಥನೆ ಮಾಡಿ, ಅರ್ಚಕಪ್ಪನೋರೇ, ನನ್ನನ್ನೂ ಹರಸಿ, ನಾನೂ ತಲಾಷೆ ಮಾಡ್ತೀನಿ ಇನ್ನೊಂದು ತಿಂಗಳಿನಲ್ಲಿ ಕಂಡು ಹಿಡಿಯದೇ ಇದ್ದರೆ, ನನ್ನ ತಲೇನೆ, ಅಮ್ಮನವರಿಗೆ ಒಪ್ಪಿಸ್ತೀನಿ' ಎಂದು ಮಾತುಕೊಟ್ಟೆ.

ಮಾರನೆ ಬೆಳಿಗ್ಗೆ ಅಮ್ಮನೋರಿಗೆ ಅಡ್ಡಬಿದ್ದು ಅರಮನೆ ಕಡೆ ಹೊರಟೆ. ಉತ್ಸವದ ಹೊತ್ತಿನಲ್ಲಿ ದೇವರ ಹತ್ತಿರ ಇದ್ದ ಊಳಿಗದವರು ಯಾರ್ಯಾರು ಎಂದು ಯೋಚಿಸಿದೆ. ಕಡೆಗೆ ತೀರ್ಮಾನಕ್ಕೆ ಬಂದು, ದರ್ಬಾರ್ ಭಕ್ಷಿಯವರ ಮನೆಗೆ ಹೋದೆ. ಅರಮನೆಯಿಂದ ಹಿಂತಿರುಗಿ ಬಂದಾಗ ಅವರಿಗೆ ಅಡ್ಡಬಿದ್ದೆ. ನನ್ನ ಅನುಮಾನ ಹೀಗೆ, ಊಳಿಗದವರನ್ನ ನೋಡಕ್ಕಾಗುತ್ತಾ ಎಂದು ಕೇಳಿದೆ. ಅವರಿಗೇನು ಅನ್ನಿಸ್ತೋ ಏನೋ 'ದೇವರು ಹೇಗೆ ಸಹಾಯಕ್ಕೆ ಬರ್ತಾನೋ ಅವನೇ ಬಲ್ಲ. ನೀನು ಹೇಳಿದ್ದನ್ನು ಮಾಡೋಣ' ಎಂದು ಹೇಳಿ ಅರಮನೆಗೆ ಕರೆದುಕೊಂಡು ಹೋಗಿ, ಅವತ್ತು ಸರದಿ ಮೇಲಿದ್ದ ಊಳಿಗದವರನೆಲ್ಲಾ ಕರೆಸಿದರು. ಒಬ್ಬಾತನ ಹೊರತು ಎಲ್ಲರೂ ಬಂದರು. ಅವ ಆ ಬೆಳಿಗ್ಗೆ ರಜಾ ತೆಗೆದುಕೊಂಡು ಹೋಗಿದ್ದಾನೆ ಅಂತ ತಿಳೀತು. ಅವನ ಮನೆ ವಿಳಾಸ ಕೇಳಿಕೊಂಡು ಅಲ್ಲಿಗೆ ಹೋದರೆ ಅಲ್ಲಿರಲಿಲ್ಲ. ಚಿನ್ನಾಸಾನಿ ಮನೆಗೆ ಹೋಗಿರಬಹುದೆಂದು ನೆರೆಮನೆಯಾಕೆ ಹೇಳಿದಳು. ಸರಿಯಾಗಿ ಸಿಂಗಾರಮಾಡಿಕೊಂಡು ಚಿನ್ನಾಸಾನಿ ಮನೆಗೆ ಹೋಗಿ ಆ ಮಾತು ಈ ಮಾತು ಆಡ್ತಾ, ಶ್ರೀರಂಗಪಟ್ಟಣಕ್ಕೆ, ಹೊಳೆನಾಗರದ ಗುಡಿಗೆ ಅವ ಹೋಗಿದ್ದಾನೆ ಅಂತ ತಿಳಿದುಕೊಂಡೆ. ಇಲ್ಲಿಗೆ ಬಂದೆ. ಆಸಾಮಿ ಸುಳುವು ತಿಳಿಯಿತು. ಹೊಳೆನಾಗರದ ಗುಡಿ ಅಂದರೆ ಹೊಳೆ ಅಂಚಿನಲ್ಲಿರುವ ನಾಗಾಚಾರಿ ಅಂಗಡಿ ಅಂತ ತಿಳೀತು. ಅಲ್ಲಿ ಹೊಂಚುಹಾಕುತ್ತಿದ್ದಾಗ ಆಸಾಮಿ ಬಂದು ನಾಗಾಚಾರೀ ಹತ್ತಿರ ಮಾತಾಡ್ತಿದ್ದಾಗ 'ಕೆಂಪೇ ನೂರು, ಹಸಿರೇ ಸಾವಿರ,' ಎಂಬ ಮಾತು ಮಾತ್ರ ಕೇಳಿಸಿತು. ನನ್ನ ಅನುಮಾನ ಹೆಚ್ಚಾಯ್ತು. ಆಸಾಮೀನ ಹಿಂಬಾಲಿಸಿದೆ. ಅವನಿಳಿದುಕೊಂಡಿದ್ದ ಮನೆಯೋರಿಗೆ ಕಳ್ಳಕಾಕರ ಭಯ ಬರೋ ಹಾಗೆ ಮಾಡಿದೆ. ಸಂಗಯ್ಯ ಸಿಕ್ಕಿದ. ಅವನನ್ನುಪಯೋಗಿಸಿಕೊಂಡು ಜಗ್ಗೋಜಿ ಇಲ್ಲಿಗೆ ಬಂದಿದ್ದಾನೆ ಅಂತ ಸುದ್ದಿ ಹರಡಿಸಿದೆ. ಆ ಕಳ್ಳನ ಹೆಸರಿಗೆ ಹೆದರಿಕೊಂಡು ಇವರು ನಾನು ಊಹಿಸಿದಂತೆ ಮಾಡಬಹುದು ಅಂತ. ಆದರೆ ಸಂಗಯ್ಯ ನನ್ನ ಮೇಲೆ ಯಾಕೆ ಸಾಕ್ಷಿ ಹೇಳಿದ? ಅದೊಂದು ಅರ್ಥವಾಗಲಿಲ್ಲ ನನಗೆ-"

ನ್ಯಾಯಾಧೀಶರಿಗೆ ತಾಳ್ಮೆ ಮೀರಿದಂತೆ ಕಂಡಿತು. ಕನ್ನಡಕವನ್ನು ಮೂಗಿನ ಮೇಲಕ್ಕೆ ಏರಿಸಿಕೊಂಡರು.

"ಅಪರಾಧೀ! ಈ ಕಾಗಕ್ಕ ಗುಬ್ಬಕ್ಕನ ಕತೆಯೆಲ್ಲಾ ಬೇಡ. ಆಸಾಮಿ ಯಾರು ಅಂತ ಹೇಳು. ದರ್ಬಾರ್ ಭಕ್ಷಿಯವರ ಸವಾರಿ ಬರುವ ಹೊತ್ತಾಯಿತು. ಹೀಗೆಲ್ಲಾ ಕಾಲಹರಣ....."

ಅಷ್ಟರಲ್ಲೇ ಭಕ್ಷಿಯವರ ಕಡೆಯವನು ಮುಂದೆ ನಿಂತಿದ್ದ ಮೂಡ್ಲಯ್ಯನ ಎರಡೂ ಕೈಗಳನ್ನು ಹಿಂದಕ್ಕೆಳೆದು ಹಠಾತ್ತಾನೆ ಹಿಡಿದುಕೊಂಡು ಹಿಡಿಮುರಿ ಹಾಕಿದ. ಮೂಡ್ಲಯ್ಯ 'ಅಯ್ಯಯ್ಯೋ!' ಎಂದು ಚೀತ್ಕಾರ ಮಾಡಿದ.

ನ್ಯಾಯಾಧೀಶರಿಗೆ ಕೋಪ ಬಂತು. "ಅವನನ್ನು ಯಾಕೆ ಹಿಡಿದುಕೊಂಡೆ," ಎಂದು ಭಕ್ಷಿಯವರ ಜವಾನನನ್ನು ಗದರಿಸಿದರು.

ಅಪರಾಧಿಯು ಮೂಡ್ಲಯ್ಯನ ಕಡೆ ನೋಡುತ್ತ "ಮಹಾಸ್ವಾಮಿ! ಮೂಡ್ಲಯ್ಯನೇ ಅಮ್ಮನವರ ಉಂಗುರ ಕದ್ದ ಆಸಾಮಿ" ಎಂದು ಹೇಳಿದ.

ಭಕ್ಷಿಯವರ ಜವಾನ ಹೇಳಿದ "ಮಹಾಸ್ವಾಮಿ, ಧಣಿಗಳು ಅಪ್ಪಣೆ ಮಾಡಿದ್ದರು. 'ಲಕ್ಕೋಟೆಯನ್ನು ತಮಗೆ ಒಪ್ಪಿಸಿದ ಮೇಲೆ, ಅರಮನೆಯ ಊಳಿಗದವನೊಬ್ಬ ಆ ನ್ಯಾಯಾಸ್ಥಾನದಲ್ಲಿ ಕಂಡುಬಂದರೆ ಅವನ ಹಿಂದೆ ನಿಂತಿರು. ಅವನೇನಾದರೂ ಓಡಿಹೋಗಲು ಯತ್ನಿಸಿದರೆ ಹಿಡಿದುಕೋ, ಇನ್ನೇನಾರ ಮಾಡಾನು ಹುಷಾರಾಗಿರು' ಅಂತ. ಅಪರಾದಿ ಇವನ ಕಡೆ ನೋಡಿದ ಕೂಡಲೆ, ಮ್ಹಾಸ್ವೋಮಿಯವರು ಧಣಿಗಳು ಬರೋ ಹೊತ್ತಾಯ್ತು ಅಂದ ಕೂಡಲೇ ಇವ ಕಿಸೆಯಿಂದ ಭರಣಿಯೊಂದನ್ನು ತೆಗೆದು ಅದರಲ್ಲಿದ್ದ ಪುಡಿಯನ್ನು ಅಂಗೈಗೆ ಹಾಕಿಕೊಂಡ. ಎಲ್ಲಾರೂ ಅದನ್ನು ಮುಕ್ಕಿಬಿಡ್ತಾನೇನೋ ಅಂತ ತಕ್ಷಣ ಅವನ ಕೈ ಹಿಡಿದು ಹಿಂದಕ್ಕೆಳೆದು ಹಿಡಿಮುರಿ ಹಾಕಿದ್ದೇನೆ" ಎಂದ.

ಜಮೇದಾರನಿಗೆ ಆಜ್ಞೆಯಿತ್ತರು ನ್ಯಾಯಾಧೀಶರು. "ಮೂಡ್ಲಯ್ಯನಿಗೆ ಬೇಡಿ ಹಾಕಿ, ತಲಾಷ್ ಮಾಡು" ಅಂತ. ಪಿರಿಯಾಪಟ್ಟಣದ ಸಾಹುಕಾರರು ಪೆಚ್ಚುಪೆಚ್ಚಾಗಿ ನೋಡುತ್ತ ಇದ್ದರು.

ಜಮೇದಾರರು ಹಾತ್ ಬೇಡಿ ಹಾಕಿ, ಮೂಡ್ಲಯ್ಯನ ಕಿಸೆಯೆಲ್ಲಾ ಹುಡುಕಿದರು. ತಲೆಯ ಪಾಗೆಲ್ಲಾ ತೆಗೆದು ಹುಡುಕಿದರು, ಸೊಂಟದ ಪಟ್ಟಿಯನ್ನೆಲ್ಲಾ ತಲಾಷ್ ಮಾಡಿದರು ಎಲ್ಲೂ ಏನೂ ಸಿಗಲಿಲ್ಲ.

ಮೂಡ್ಲಯ್ಯ ಚಡ್ಡೀಧಾರಿಯಾಗಿ ಮೇಲ್ಬತ್ತಲೆಯಾಗಿ ನಿಂತಿದ್ದ. ಎದೆಯ ಮೇಲೆ ಶಿವದಾರ, ಲಿಂಗದ ಸಂಪುಟ ಮಾತ್ರ ಇತ್ತು. ಅಪರಾಧಿ ಇದನ್ನು ದೃಷ್ಟಿಸಿ ನೋಡಿ,

"ಜಮೇದಾರ್ರೇ! ಶಿವದಾರಕ್ಕೆ ಆರೆಳೆ ಇದೆ. ಮೂಡ್ಲಯ್ಯ ಬಣಜಿಗರ ಕೇರೀಲಿ ಮನೆ ಮಾಡಿಕೊಂಡಿದ್ದಾನೆ. ಲಿಂಗದ ಸಂಪುಟ ತೆಗೆದುನೋಡಿ" ಅಂದ. ಜಮೇದಾರ್ರು ಲಿಂಗದ ಸಂಪುಟವನ್ನು ಬಿಚ್ಚಿದರು ಒಳಗೆ ಲಿಂಗವೇ ಇಲ್ಲ. ಸುತ್ತು ಹತ್ತು ಕೆಂಪು, ಮಧ್ಯೆ ದೊಡ್ಡ ಪಚ್ಚೆ ಮೆಟ್ಟಿದ್ದ ಉಂಗುರವಿತ್ತು.

"ಎಲಾ ಇವನ," ಎಂದು ಒಕ್ಕೊರಲಿನಿಂದ ಸುತ್ತ ನಿಂತಿದ್ದ ಜನರಂದರು.

* * * *



"ಹುಷಿಯಾರ್, ದಾರಿ ಬಿಡಿ, ಭಾಟಾ ಘೋಡೋ" ಎಂಬ ಕೂಗು ನ್ಯಾಯಾಸ್ಥಾನದ ಹೊರಗೆ ಕೇಳಿಸಿತು. ಎರಡುಕುದುರೆ ಗಾಡಿಯಿಂದಿಳಿದವರು ನ್ಯಾಯಾಲಯಕ್ಕೆ ಸರಸರ ಬಂದರು, ಬೆಳ್ಳಿಕಟ್ಟಿಗೆಯವರ ಹಿಂದೇನೇ.

"ಇತ್ತ ಬರಬೇಕು, ಹೀಗೆ ಬರಬೇಕು ದರ್ಬಾರ್ ಭಕ್ಷಿಗಳು", ಅಂತ ನ್ಯಾಯಾಧೀಶರೇ ಸ್ವಾಗತಿಸಿದರು.

ಭಕ್ಷಿಗಳು ಅಪರಾಧಿಯ ಕಟಕಟೆಯಲ್ಲಿ ನಿಂತಿದ್ದವನನ್ನು ನೋಡಿದರು, ಹುಸಿನಗೆ ನಕ್ಕರು.

ಮೂಡ್ಲಯ್ಯನ ಕಡೆ ನೋಡಿದರು. "ಅಂತಹ ದೊಡ್ಡ ಮನುಷ್ಯನ ಹೊಟ್ಟೇಲಿ ಹುಟ್ಟಿ ದೇವರ ಒಡವೆ ಕದಿಯೋ ಹಾಗೆ ಆದೆಯಲ್ಲೋ, ಪಾಪಿ" ಎಂದರು.

ನಂತರ ಪಿರಿಯಾಪಟ್ಟಣದ ಸಾಹುಕಾರರು ಕಣ್ಣಿಗೆ ಬಿದ್ದರು, "ನೀನೂ ಬಂದಿದ್ದೀಯಾ ಸಾಹುಕಾರ, ನಮ್ಮಿಬ್ಬರಿಗೂ ಸ್ನೇಹಿತನಾಗಿದ್ದ ದೊಡ್ಡ ಮೂಡ್ಲಗಿರಿಯನ ಮಗ ಇವ. ಎಲ್ಲಾ ಕಳಕೊಂಡೆ ಕೆಲಸ ಕೊಡಿ ಅಂತ ಬಂದು ಕೇಳಿದ. ಅರಮನೇಲಿ ಸೇರಿಸಿದೆ, ಇವನು ಮಾಡಿದ್ದು ನೋಡಿದೆಯಾ? ಇವರಪ್ಪ ಪುಣ್ಯವಂತ. ಇವ ಹೀಗಾಗೋದನ್ನು ನೋಡುಕ್ಕೆ ಮುಂಚೆಯೇ ಸತ್ತ" ಎಂದು ಹೇಳಿದರು.

"ತಾವು ನಿಂತೇ ಇದ್ದೀರಲ್ಲಾ, ಕೂತುಕೋಬೇಕು" ಎಂದರು ನ್ಯಾಯಾಧೀಶರು.

"ತಾವು ಕೂತುಕೊಳ್ಳಬೇಕು, ತಮ್ಮ ನ್ಯಾಯಾಸ್ಥಾನ ಇದು. ನಾನೊಂದು ಹೇಳಿಕೆ ಕೊಡಬೇಕಾಗಿದೆ. ಸಾಕ್ಷಿ ಹೇಳು ಅಂದರೂ ಹೇಳ್ತೀನಿ. ನನ್ನ ಪತ್ರಕ್ಕೆ ಮನ್ನಣೆ ಕೊಟ್ಟು ನಾನು ಬರುವ ತನಕ ತೀರ್ಪು ಕೊಡದೆ ಇದ್ದುದಕ್ಕೆ ಆಭಾರಿ," ಎಂದರು ದರ್ಬಾರ್ ಭಕ್ಷಿಗಳು.

"ಹೇಳಿಕೆ ಕೊಟ್ಟರೆ ಸಾಕು" ಎಂದರು ನ್ಯಾಯಾಧೀಶರು.

ದರ್ಬಾರ್ ಭಕ್ಷಿಗಳು ಹೇಳಿದರು.

"ನ್ಯಾಯಮೂರ್ತಿಗಳೇ! ಚಾಮುಂಡಾಂಬಿಕೆ ದೇವಸ್ಥಾನದಲ್ಲಿ ತೆಪ್ಪೋತ್ಸವದ ದಿನ ಕಳುವಾದ ಕೆಂಪು ಪಚ್ಚೆ ಉಂಗುರವನ್ನು ಆಳಿದ ಮಹಾಸ್ವಾಮಿಯವರು ಮಾಡಿಸಿದಾಗ ಎರಡನ್ನು ಮಾಡಿಸಿದ್ದರು. ಒಂದನ್ನು ತಾವಿಟ್ಟುಕೊಂಡು, ಇನ್ನೊಂದನ್ನು ಚಾಮುಂಡಾಂಬಿಕೆಗೆ ಅರ್ಪಿಸಿದರು. ಆ ಉಂಗುರವನ್ನು ತೋರಿಸಿದರೆ ಅರಮನೆಯಲ್ಲಿ ಎಲ್ಲಿ ಬೇಕಾದರೂ ಹೋಗಬಹುದು. ಏನನ್ನು ಬೇಕಾದರೂ ತೆಗೆದುಕೊಂಡು ಹೋಗಬಹುದು. ಈ ಉಂಗುರವೇ ಅವರ ಆಜ್ಞೆಯ ಸಂಕೇತ. ಬೆಟ್ಟದ ಮೇಲೆ ಕಳುವಾಯ್ತು ಎಂದಾಗ ನನ್ನ ಎದೆಯು ಝಲ್ಲೆಂದಿತು. ಬೆಟ್ಟದ ಮೇಲೆ ಉಂಗುರವನ್ನು ದೊಡ್ಡ ಅರ್ಚಕರೂ, ಪೇಷ್ಕಾರರೂ ಬಲು ಜಾಗರೂಕತೆಯಿಂದ ರಕ್ಷಿಸುತ್ತಿದ್ದರು. ಆದರೂ ಹೀಗಾದಾಗ ಬಲು ಖಿನ್ನನಾದೆ. ಆಗ ಅಪರಾಧಿ ಕಟ್ಟೆಯಲ್ಲಿರುವವ ಬಂದು ನಾನು ತಲಾಸೆ ಮಾಡ್ತೀನಿ, ಮಷಾಲ್ಚಿ ಸೇವೆ ಮಾಡ್ತಿದ್ದೆ ಎಂದು ಹೇಳಿದಾಗ ದೇವರನ್ನು ನಂಬಿ ಆಗಲಿ ಎಂದೆ. ಏನು ಸಹಾಯ ಬೇಕಾದರೂ ಹೇಳಿ ಕಳಿಸು ದೊರಕಿಸುತ್ತೇನೆ ಎಂದು ಹೇಳಿದೆ. ಈ ಬೆಳಿಗ್ಗೆ ಅವನು ಹೇಳಿ ಕಳಿಸಿದ. ಆಸಾಮಿ ನ್ಯಾಯಾಸ್ಥಾನದಲ್ಲಿರ್ತಾನೆ

ತಾವು ಬರಬೇಕು, ನಾನು ವಿಚಾರಣೆಗೆ ಸಿಕ್ಕಿದ್ದೇನೆ. ತಮ್ಮಿಂದ ಸುದ್ದಿ ಬರುವ ತನಕ ನಾನು ಬಾಯಿ ಬಿಡೋ ಹಾಗಿಲ್ಲ. ಬಾಯಿಬಿಟ್ಟರೆ ಆಸಾಮಿ ಪರಾರಿಯಾಗ್ತಾನೆ ಅಂತ. ಅದಕ್ಕೇ ತುರ್ತಾಗಿ ನನ್ನ ಅಂಗರಕ್ಷಕ ಸವಾರನನ್ನು ಧೌಡು ಓಡಿಸಿಕೊಂಡು ಹೋಗಿ ಈ ಲಕ್ಕೋಟೆಯನ್ನು ನ್ಯಾಯಾಧೀಶರಿಗೆ ತಲುಪಿಸು, ಅರಮನೆಯ ಊಳಿಗದವರು ಎಂದು ಯಾರಾದರೂ ಕಂಡುಬಂದರೆ ಅವರ ಹಿಂದೆ ಕಾವಲಿರು, ಎಂದು ಹೇಳಿ ಕಳಿಸಿದೆ. ನಾನೂ ಗಾಡಿ ಕಟ್ಟಿಸಿಕೊಂಡು ಬೇಗಬೇಗ ಬಂದೆ" ಎಂದು ಹೇಳಿಕೆಯಿತ್ತರು.

ಅಪರಾಧಿಯನ್ನು ಖುಲಾಸೆ ಮಾಡಿ ಮೂಡ್ಲಯ್ಯನನ್ನು ಕಟಕಟೆಯಲ್ಲಿ ನಿಲ್ಲಿಸಿ ನ್ಯಾಯಮೂರ್ತಿಗಳು ಹತ್ತು ವರುಷ ಕಠಿಣ ಸಜಾ ವಿಧಿಸಿದರು.

* * * *

ಪಿರಿಯಾಪಟ್ಟಣದ ಸಾಹುಕಾರ್ರು ಭಕ್ಷಿಗಳನ್ನು ಬೀಳ್ಕೊಟ್ಟು ಮನೆಗೆ ಬಂದಾಗ ಸಂಜೆಯಾಗಿತ್ತು. ಆ ವೇಳೆಗೆ ಊರಲ್ಲೆಲ್ಲಾ ಸುದ್ದಿ ಹರಡಿ ಅವರ ಮನೆಗೂ ಬಣ್ಣಬಣ್ಣವಾಗಿ ಸೇರಿತ್ತು.

"ಸದ್ಯ! ಬದುಕಿ ಬಂದ್ರಲ್ಲಾ ಅಂದ್ರೆ. ಆ ಪಾಪಿ, ಆ ಮೂಡ್ಲ ನಿಮಗೆ ವಿಷ ಕೊಡುಕ್ಕೆ ಪ್ರಯತ್ನ ಮಾಡಿದನಂತಲ್ಲಾ! ಸ್ನೇಹಿತರ ಮಗ ಅಂತ ಆದರ ಮಾಡಿದ್ದಕ್ಕೆ ಉಪಕಾರ ಮಾಡುತ್ತಿದ್ದನಲ್ಲಾ" ಎಂದಳು ಸಾಹುಕಾರಿಣಿ.

ಎಲ್ಲವನ್ನೂ ವಿವರಿಸಿದ ಮೇಲೆ ಸಾಹುಕಾರರು ಅಂದರು, "ಆ ಪಾಪಿಯ ಪೆಟ್ಟಿಗೆ ಸಾಮಾನು ಎಲ್ಲವನ್ನೂ ತಳವಾರರ ಠಾಣೆಗೆ ಕಳಿಸಿಬಿಡೋಣ. ಏನೇನು ವಿಷ ಇಟ್ಟಿರ್ತಾನೋ, ಹಾವೂ ಚೇಳ್ನೇ ಕೂಡಿಟ್ಟಿರ್ತಾನೋ ದೇವರೇ ಬಲ್ಲ" ಎಂದು.

"ಮಧ್ಯಾಹ್ನವೇ ತಳವಾರರ ಠಾಣೆಯಿಂದ ಬಂದಿದ್ದ ಒಬ್ಬ ಮೂಡ್ಲಯ್ಯನ ಸಾಮಾನು ಪೆಟ್ಟಿಗೆ ಎಲ್ಲಾ ತೊಗೊಂಡು ಬಾ ಅಂತ ನನ್ನ ಕಳಿಸಿದಾರೆ ಅಂದ. ಅವನ ಕೈಲಿ ಕೊಟ್ಟು ಕಳಿಸಿಬಿಟ್ಟೆ ಅಂದ್ರೆ" ಎಂದಳು.

"ಪೀಡೆ ಕಳೀತು ಬಿಡು, ಇವನಿಂದ ಜಗ್ಗೋಜಿ ಭಯ ಹುಟ್ಟಿತ್ತು ನನಗೆ. ಅವ ಜಗ್ಗೋಜಿಯೇ ಅಲ್ಲವಂತೆ. ದೇವಸ್ಥಾನದಲ್ಲಿ ಮಷಾಲ್ಚಿ ಸೇವೇಯೋನಂತೆ. ಅಲ್ಲಾ! ಕೂಲಿ ಮಠದ ಸಂಗಯ್ಯ ಶಹಣೆ ಅಂತಿದ್ದೆ. ಅವನ್ಯಾಕೆ ಬಲೆಗೆ ಬಿದ್ದ. ಬಿದ್ದಮೇಲೆ, ಸಂಗಾತಿ ಮೇಲೆ ಸಾಕ್ಷಿ ಹೇಳಿ ಸಿಕ್ಕಿ ಹಾಕಿಸೋದು ಅಂದರೆ ನಂಬುಕ್ಕಾಗುಲ್ಲ. ಬದುಕಿದಷ್ಟು ದಿನವೂ ಹೊಸದು ಹೊಸದನ್ನು ಕಲಿತುಕೊಳ್ಳಲೇಬೇಕು" ಎಂದರು ಸಾಹುಕಾರ್ರು.

"ಏಳಿ ಅಂದ್ರೆ, ಸುಸ್ತಾಗಿದ್ದೀರಿ, ಎಡೆ ಹಾಕ್ತೀನಿ, ಕಾಲು ತೊಳ್ಕೊಳ್ಳಿ" ಎಂದಳು ಸಾಹುಕಾರಿಣಿ.

* * * *

ಶ್ರೀರಂಗಪಟ್ಟಣದ ಕೋಟೆ ಬಾಗಿಲಲ್ಲಿ ತಳವಾರರ ಛಾವಡಿ ಇದೆಯಲ್ಲಾ! ಆ ಠಾಣೆಯಲ್ಲಿ ಖೈದಿಗಳನ್ನು ಕೂಡಿಡುವ ಕೊಠಡಿಯು ಕೋಟೆಯ ಗೋಡೆ ಒಳಗೇ ಇದೆ.



ಮೇಲಿನ ಗವಾಕ್ಷಿಯಿಂದ ಮಾತ್ರ ಬೆಳಕು ಬೀಳುವುದು. ಸುಲ್ತಾನನ ಕಾಲದಲ್ಲಿ ಖೈದಿಗಳಿಗೆ ಕೊಡುವ ಶಿಕ್ಷೆಯನ್ನೆಲ್ಲಾ ಈ ಕೊಠಡಿಯಲ್ಲೇ ಏರ್ಪಡಿಸುತ್ತಿದ್ದರು.

ದರ್ಬಾರ್ ಭಕ್ಷಿಯವರು ಕೊಟ್ಟ ಸೂಚನೆ ಮೇರೆಗೆ ಮೂಡ್ಲಯ್ಯನನ್ನು ಈ ಕೊಠಡಿಗೆ ಹಾಕಿದರು. "ಎರಡು ಸರ್ತಿ ಹೆದರಿಸಿ, ಎರಡು ಶಿಕ್ಷೆ ಕೊಡಿ, ಬಾಯಿಬಿಡ್ತಾನೆ, ದೇವಸ್ಥಾನದಲ್ಲೇ ಕದ್ದೋನು ಅರಮನೇಲಿ ಏನೇನು ಕದ್ದಿರ್ತಾನೋ, ಅರಮನೇಲಿ ಕಳುವಾದರೆ, ತಿಂಗಳಾನುಗಟ್ಟಲೆ ಗೊತ್ತೇ ಆಗುಲ್ಲ. ಏನಾರೂ ತಪ್ಪೊಪ್ಕೋತಾನೇನೋ" ಎಂದು ಹೇಳಿದ್ದರು.

ಕುದುರೆ ಶಿಕ್ಷೆ ಕೊಟ್ಟರು. ಮರದ ಕುದುರೆ ಮೇಲೆ ಕೂರಿಸಿ, ಅದನ್ನು ಹಿಂದಕ್ಕೆ ಮುಂದಕ್ಕೆ ಮೇಲಕ್ಕೆ ಆಡಿಸೋ ಅಂತಹ ಶಿಕ್ಷೆ. ಹತ್ತು ನಿಮಿಷ ಇದನ್ನನುಭವಿಸಿದರೆ, ಬೆನ್ನು ಮೂಳೆಯೆಲ್ಲಾ ಸಡಿಲವಾಗಿ, ಇನ್ನೊಂದು ತಿಂಗಳು ಕೂತುಕೊಳ್ಳಲು ಸಾಧ್ಯವಾಗದಂತೆ ಆಗುತ್ತಿತ್ತು.

ಮೂಡ್ಲಯ್ಯನನ್ನು ಕುದುರೆಯಿಂದ ಇಳಿಸಿದಾಗ "ಇದನ್ನು ತಪ್ಪಿಸಿಕೊಳ್ಳೋಕೇ ಅಲ್ವಾ ನೀನು ವಿಷ ತೊಗೊಳ್ಳುಕ್ಕೆ ಹೋಗಿದ್ದು" ಎಂದು ಪ್ಯಾದೆ ಮೂದಲಿಸಿ "ಈಗಲಾದರೂ ದಿಟ ಹೇಳು. ಅರಮನೇಲಿ ಕದ್ದ ವಸ್ತುಗಳೆಲ್ಲಿ? ಇಲ್ಲದೆ ಇದ್ದರೆ ಕರಡಿ ಶಿಕ್ಷೆ ಕೊಡ್ತೀನಿ" ಎಂದ.

"ಬಿಡಪ್ಪಾ, ಹೇಳ್ಬಿಡ್ತೀನಿ. ಸಾಹುಕಾರ್ರ ಮನೇಲಿ ಪೆಟ್ಟಿಗೆಯೊಂದಿದೆ. ಅದರಲ್ಲಿ ಅರಮನೇಲಿ ಕದ್ದ ಒಡವೆಗಳೆಲ್ಲಾ ಇವೆ. ಸದ್ಯಕ್ಕೆ ಬಿಟ್ಟುಬಿಡಪ್ಪಾ," ಎಂದು ಮೂಡ್ಲಯ್ಯ ಗೋಗರೆದ.

ತಳವಾರರೂ, ಪ್ಯಾದೆಗಳೂ ಸಾಹುಕಾರರ ಮನೆಗೆ ಹೋಗಿ ವಿಚಾರಿಸಿದಾಗ ಪ್ಯಾದೆಯೊಬ್ಬ ಅವತ್ತೇ ಆ ಪೆಟ್ಟಿಗೆಯನ್ನು ತೆಗೆದುಕೊಂಡು ಹೋದ ಅಂತ ತಿಳಿಯಿತು. ಸಾಹುಕಾರರನ್ನು ನಂಬದೆ ತಳವಾರರೇ ಮನೆಯನ್ನೆಲ್ಲಾ ಜಪ್ತಿ ಮಾಡಿದರು. ಏನೊಂದೂ ಸಿಗಲಿಲ್ಲ.

ಹಿಂತಿರುಗಿ ಹೋಗಿ ಮೂಡ್ಲಯ್ಯನನ್ನು ಗದರಿಸಿದರು. "ಸುಳ್ಳು ಹೇಳ್ತೀಯಾ! ನಿನ್ನ ಕಡೆಯೋರಿಗೆ ಸುಳುವು ಕೊಟ್ಟು ಸಾಗಿಸಿಬಿಟ್ಟಿದ್ದೀ, ನಿನ್ನ ದೋಸ್ತು ಈ ಊರಲ್ಲಿ ಯಾರಿದ್ದಾರೆ ಹೇಳು. ಇಲ್ಲದೆ ಇದ್ದರೆ ಕರಡಿ ಶಿಕ್ಷೆ" ಎಂದರು ತಳವಾರರು.

"ನಾಗಾಚಾರಿ ಒಬ್ಬನೇ ನನ್ನ ಸ್ನೇಹಿತ. ಹೊಳೆನಾಗರ ಗುಡೀಲಿ ಇದಾನೆ" ಎಂದ ಮೂಡ್ಲಯ್ಯ,

ನಾಗಾಚಾರೀನ ಹಿಡಿದು ಅವನ ಮನೆ ಜಪ್ತಿ ಮಾಡಿದಾಗ ಸುಮಾರು ಒಡವೆಗಳು ಸಿಕ್ಕಿದುವು. ಕೆಲವು ಅರ್ಧಂಬರ್ಧ ಕರಗಿದ್ದುದು, ಆದರೂ ಅರಮನೆಯದ್ದು ಅಂತ ಸುಲಭವಾಗಿ ತಿಳಿಯುತ್ತಿತ್ತು.

ಭಕ್ಷಿಯೋರು ಶಾಭಾಷ್ ಕೊಡ್ತಾರೆ ಅಂತ ಹಿಗ್ಗುತ್ತಾ ತಳವಾರರು ಆ ಒಡವೆಗಳನ್ನೆಲ್ಲಾ ಠಾಣೆಗೆ ತಂದು ಪಟ್ಟಿ ಬರೆದು ಮೊಹರು ಮಾಡಿಸಿದರು.

* * * *

ಕೊಂಡೆನಕಪಲ್ಲಿಯ ಆಲದ ತೋಪಿನ ಬಳಿ ಇದ್ದ ಕೊಳದ ಕಟ್ಟೆ ಮೇಲೆ ಬರಬರಿ ವಿಭೂತಿ ಪಟ್ಟಿ ಧರಿಸಿ, ಅರ್ಧ ಚಂದ್ರನಂತಿರುವ ಕುಂಕುಮವನ್ನು ಹಚ್ಚಿಕೊಂಡಿದ್ದ ಮುದುಕನೊಬ್ಬನು ಕುಳಿತುಕೊಂಡು, ಕೊಳದ ನೀರಿಗೆ, ಸಣ್ಣ ಸಣ್ಣ ಕಲ್ಲುಗಳನ್ನಾರಿಸಿಕೊಂಡು, ಒಂದು, ಎರಡು, ಮೂರು ಎಂದು ಎಸೆಯುತ್ತ ಲೆಕ್ಕ ಹಾಕುತ್ತಿದ್ದ. "ಯಾಕೆ ಹೀಗಾಯ್ತು? ಅಮ್ಮನಿಗೆ ಏನಾದರೂ ಅಪಚಾರವಾಯ್ತೇ! ಜಗ್ಗೋಜಿಯು ಪಟ್ಟಣದಲ್ಲಿ ಸೆರೆ ಸಿಕ್ಕಿದಾನೆ ಅಂತ ಸುದ್ದಿಬಂದಿತಲ್ಲಾ. ಜಾಣ ಹುಡುಗ, ಕಟ್ಟಳೆ ನಿಯಮಗಳನ್ನು ಎಂದೂ ತಪ್ಪಿ ನಡೆದವನಲ್ಲಾ. ಹೀಗೇಕೆ ಆಗಬೇಕು? ಕನ್ನುವಿನ ಸುಳಿವೂ ಇಲ್ಲ. ನಾನು ಮಾಡಿದ ಪಾಪವೇನಾದರೂ, ಶಿಷ್ಯರು ಅಂತ ಭಕ್ತಿ, ವಿಶ್ವಾಸದಿಂದ ಬಂದವರಿಗೆ, ತಾಕಿರಬಹುದೇ? ಇನ್ನು ಮೂರು ದಿನಗಳಲ್ಲಿ ಅವರ್ಯಾರೂ ಬರದೇ ಇದ್ದರೆ, ಮಂಡಲ ಉಪವಾಸ ವ್ರತ ಹಾಕಿ ಭೈರವಿಯನ್ನು ಪೂಜಿಸಿ, ಅವರನ್ನು ಬಿಡಿಸಿಕೊಂಡು ಬರಲು ಹೋಗಲೇಬೇಕು" ಎಂದು ನಿರ್ಜನವಾದ ಆ ಪ್ರದೇಶದಲ್ಲಿ ಕೊಳದಲ್ಲಿ ಕಂಡು ಬಂದ ಕಪ್ಪೆಯೊಂದಕ್ಕೆ ಹೇಳುತ್ತಿದ್ದ.

"ಒಪ್ಪಿಸ್ಕೋಬೇಕು! ಮಹಾಸ್ವಾಮಿಯವರು ಒಪ್ಪಿಸ್ಕೋಬೇಕು" ಎಂದು ಹೇಳುತ್ತಾ ಯುವಕನೊಬ್ಬ ಓಡೋಡಿ ಬಂದು ಮುದುಕನಿಗೆ ಅಡ್ಡಬಿದ್ದು ಹಳದಿಬಟ್ಟೆಯ ಗಂಟೊಂದನ್ನು ಅವನ ಕಾಲುಬಳಿ ಇರಿಸಿದ.

"ಇದೇನ್ನಂತೋ ಕನ್ನೂ! ಈ ಉಪಚಾರದ ಮಾತು!" ಎಂದ ಮುದುಕ.

"ಪೂಜಾರಪ್ಪನೋರೇ! ಇದನ್ನೆಲ್ಲಾ ಅರಮನೇಲಿ ಕಲಿತುಕೊಂಡು ಬಂದೆ. ಬೆಟ್ಟದ ಅಮ್ಮನ ತೆಪ್ಪೋತ್ಸವಕ್ಕೆ ಮಷಾಲ್ಜಿ ಸೇವೆಮಾಡು ಅಂತ ನನಗೆ ಬೇನೆ ಬಂದಿದ್ದಾಗ ನೀವು ಹರಕೆ ಹೊತ್ತಿದ್ದನ್ನು ಜ್ಞಾಪಿಸಿಕೊಂಡು ಈ ಬಾರಿ ಕಳಿಸಲಿಲ್ವಾ! ಅಲ್ಲಿಗೆ ಹೋದಾಗ ಹೀಗೆಲ್ಲಾ ಆಯಿತು" ಅಂತ ನಡೆದುದನ್ನೆಲ್ಲಾ ಹೇಳಿದ. "ಆದರೆ ಪೂಜಾರಪ್ಪನೋರೇ! ಸಂಗಯ್ಯ ಬಲು ಒಳ್ಳೆ ಮನುಷ್ಯ ಅಂತಿದ್ದೆ. ಆದರೆ ತಳವಾರರಿಗೆ ಯಾಕೆ ಚಾಡಿ ಸುದ್ದಿ ಹೇಳಿದ? ಅರ್ಥವಾಗುಲ್ಲ ನೋಡಿ!" ಎಂದ ಕನ್ನೋಜಿ.

"ಇದೇನು ಹಳದಿ ಗಂಟು?" ಎಂದ ಪೂಜಾರಪ್ಪ. "ಜಗ್ಗೋಜಿ ಬರುವುದಕ್ಕೆ ಮುಂಚೆ ಇದನ್ನು ಬಿಚ್ಚಬಾರದು ಅದಕ್ಕೇ ನೀನು ಹೇಳು," ಅಂದ ಪೂಜಾರಪ್ಪ.

"ದರ್ಬಾರ್ ಭಕ್ಷಿಯೋರು ಕೊಟ್ಟ ಬಹುಮಾನ ಅದು. ಮನುಷ್ಯರು ಕೊಟ್ಟ ಬಹುಮಾನ ನನಗೆ ಇದೊಂದೇ ನೋಡಿ ಪೂಜಾರಪ್ಪನೋರಾ! ಇಲ್ಲಿನ ತನಕ ನಾನು ದುಡೀತಿದ್ದೆ. ದೇವರು ವರ ಕೊಡ್ತಾ ಇದ್ದ. ಈ ಸಾರಿ ಬಹುಮಾನ ಬಂತು, ಗಂಟಿನಲ್ಲಿ ಒಂದು ನಾಗಮುರಿಗೆ ಇದೆ, ನನ್ನ ಹೆಂಡತೀಗೆ ಹಾಕಬೇಕಂತೆ-ಒಂದು ಪೀತಾಂಬರ ಇದೆ. ಅದನ್ನು ನಮ್ಮ ಅಮ್ಮನಿಗೆ ಕೊಡಬೇಕಂತೆ" ಎಂದ ಕನ್ನೋಜಿ.

"ಖಬರ್‌ದಾರ್, ಹುಷಿಯಾರ್, ಎಚ್ಚರಿಕೆ."

ಕೂಗು ಕರ್ಕಶವಾಗಿ ಕೇಳಿಬಂತು. ಕನ್ನೋಜಿಯೂ, ಪೂಜಾರಪ್ಪನೂ ಧ್ವನಿ ಬಂದ ದಿಕ್ಕಿಗೆ ಗೋಣು ತಿರುಗಿಸಿದರು. ಇಲ್ಲಿಗೆ ಬರೋ ಧೈರ್ಯ ಯಾವ ತಳವಾರ ಪ್ಯಾದೆಗೆ ಬಂತು ಎಂಬ ಶಂಕೆ ಅವರಿಗೆ.



ಪ್ಯಾದೆಯೊಬ್ಬ ಪೆಟ್ಟಿಗೆಯೊಂದನ್ನು ತಲೆಯ ಮೇಲೆ ಹೊತ್ತುಕೊಂಡು ಬಂದು ನಿಂತ. ಪೆಟ್ಟಿಗೆಯನ್ನು ಕೆಳಗಿಳಿಸಿ, ಹಣೆ ಒರಸಿಕೊಂಡು,

"ತಾತಯ್ಯ! ಜಗ್ಗೋಜಿ ಮನೆ ಎಲ್ಲಿದೆ ತಿಳಿಸ್ತೀರಾ, ಅಲ್ಲಿಗೆ ಈ ಪೆಟ್ಟಿಗೆಯನ್ನು ತಲುಪಿಸಬೇಕು" ಎಂದು ಕರ್ಕಶ ದನಿಯಲ್ಲಿ ಹೇಳಿದ.

"ಮೀನಿಗೆ ಈಜು ಕಲಿಸ್ತೀಯಾ ಜಗ್ಗೋಜಿ?" ಎಂದ ಪೂಜಾರಪ್ಪ ನಗುತ್ತಾ. ಪ್ಯಾದೆ ಪೂಜಾರಪ್ಪನಿಗೆ ಅಡ್ಡಬಿದ್ದ.

"ಅಣ್ಣಾ! ಎಲ್ಲಿ ಹೋಗಿದ್ದೆ" ಎಂದ ಅಚ್ಚರಿಯಿಂದ ಕನ್ನೋಜ.

"ಬಾಳೆತೋಟದ ಮಂಟಪದಲ್ಲಿ ಇಳಿದುಕೊಂಡು ಪಿರಿಯಾಪಟ್ಟಣದ ಸಾಹುಕಾರ್ರ ಮನೇಲಿ ಏನಾರ ಈ ವರ್ಷ ಗಿಟ್ಟಬಹುದು ಅಂತ ಸನ್ನಾಹ ಹೂಡ್ತಿದ್ದೆ. ನೀನು ಬಂದು ಮಾರಿಗುಡಿ ಪಡಸಾಲೇಲಿ ಇಳಕೊಂಡು, ಸಿಕ್ಕಿದಾಗ ನನಗೆ ಎಲ್ಲಾ ಹೇಳಿದಾಗ, ತಲೆಮರೆಸಿಕೊಂಡು ನಿನ್ನ ಸಹಾಯಕ್ಕೆ ಕಾದಿರೋಣ ಎಂದು ಸುಮ್ಮನಾದೆ. ಹೊಳೆನಾಗರ ಗುಡಿಗೆ ಮೂಡ್ಲಯ್ಯ ಹೋದ ಅಂತ ಗೊತ್ತಾದ ಮೇಲೆ, ನಾಗಾಚಾರೀ ವಿಚಾರ ತಿಳಿದುಕೊಂಡೆ ಅರಮನೆಯಿಂದ ಛಪಾಯಿಸಿದ ಒಡವೆಗಳನ್ನು ತಂದು, ಬೇರೆ ಕಟ್ಟಡ ಕಟ್ಟಿಸಿ ಹೊಸ ಒಡವೆ ಅಂತ ಅರಮನೆಗೆ ತಿರುಗಿ ಮಾರ್ತಾರೆ ಅಂತ ತಿಳೀತು. ಅಂದ ಮೇಲೆ ಕೆಂಪು ಪಚ್ಚೆ ಉಂಗುರ, ಮಹಾರಾಜರ ಸಂಕೇತದ ಉಂಗುರ ಅಲ್ಲದೆ ಬೇರೆ ಒಡವೆಗಳಿರಬೇಕು ಮೂಡ್ಲಯ್ಯನ ಹತ್ತಿರ ಅಂತ ಅರ್ಥವಾಯಿತು.

ನ್ಯಾಯಾಸ್ಥಾನದಲ್ಲಿ ನಿನ್ನ ಮೇಲೆ ತೀರ್ಪು ಕೊಡೋ ದಿವಸ, ಸಾಹುಕಾರರ ಮನೆಗೆ ಹೋಗಿ ಇದನ್ನು ಲಪಟಾಯಿಸಿಕೊಂಡು ಬಂದೆ. ಮಾರೀಗುಡಿ ಪಕ್ಕದಲ್ಲಿ ಬಾಳೆತೋಪಿತ್ತು ನೋಡು, ಅದರ ನೆಲಭಾವಿ ಹತ್ತಿರ ಇದ್ದ ಮಂಟಪದಲ್ಲಿ ಇರಿಸಿದೆ. ನಿನಗೆ ಖುಲಾಸೆ ಆಯಿತು. ಭಕ್ಷಿಯೋರು ಮೈಸೂರಿಗೆ ಕರೆದುಕೊಂಡು ಹೋದರು ಅಂದಾಗ, ನಾನಿತ್ತ ಹೊರಟು ಬಂದೆ.

ಬರುವಾಗ ಕೂಲಿಮಠದ ಮುಂದೇನೇ ನಡೆಯಬೇಕಾಗಿತ್ತು. ಸಂಗಯ್ಯ ಅಲ್ಲೇ ಕೂತಿದ್ದ. ಒಂದು ಒದೆತಕೊಟ್ಟು ಮುಂದಕ್ಕೆ ಹೋಗೋಣ ಎಂದುಕೊಂಡೆ. ಮುಂದಕ್ಕೆ ಹೋದೆ. ಅವನ ಮುಖ ನೋಡಿದೆ. ಹೆಣದ ಮುಖದ ಮೇಲೆ ಎಷ್ಟು ಕಳೆಯಿರುತ್ತೆ ನೋಡು ಅದಕ್ಕೂ ಕೇಡಾಗಿತ್ತು ಅವನ ಮುಖ. ಏನು ಗೋಳೋ ಇವನದು, ಯಾತಕ್ಕೆ ಹೀಗೆ ಮಾಡಿದನೋ ಎನ್ನಿಸಿತು. ದುಃಖವೇ ಆಯಿತು. ಪೆಟ್ಟಿಗೆ ತಲೆಯ ಮೇಲಿತ್ತು. ಇದನ್ನು ಪೂಜಾರಪ್ಪನಿಗೆ ತಲುಪಿಸಿ, ನಂತರ ಮುಂದಿನ ತಿಂಗಳಲ್ಲಿ ಶ್ರೀರಂಗಪಟ್ಟಣಕ್ಕೆ ಹೋಗೋದು. ಶ್ರೀರಂಗನಾಥನ ಕೊಟ್ವಾರೋತ್ಸವ ನಡೆಯುತ್ತೆ. ಕೈತುಂಬಾ ಪುಳಿಯೋಗರೆ ಕೊಡ್ತಾರೆ. ಆಗ ಸಂಗಯ್ಯನ ವಿಚಾರವನ್ನೂ ತಿಳಿದುಕೊಂಡರಾಯಿತು. ಅವನ ನೆರವಿಗೆ ಬೇಕಾದರೂ ನಿಲ್ಲೋಣ ಎಂದುಕೊಂಡೆ" ಎಂದು ಜಗ್ಗೋಜಿ ಹೇಳಿದ.

"ಈ ಬುದ್ಧಿ ಯಾವಾಗಲೂ ನಿಮಗಿರಲಿ, ದೇವರು ಆಯಸ್ಸು ಆರೋಗ್ಯ, ಅನುಕಂಪ, ಮೂರನ್ನೂ ನಿಮಗೆ ಶಾಶ್ವತವಾಗಿ ಕೊಡಲಿ. ಇನ್ನೊಬ್ಬರು ಮಾಡಬಾರದ್ದನ್ನು ಮಾಡಿದರೆ, ಅದಕ್ಕೇನೋ ದೊಡ್ಡ ಕಾರಣ ಇರಬೇಕು ಎಂದು ಅಂದುಕೊಂಡು. ಆ

ಕಾರಣ ತಿಳಿಯಲು ಯತ್ನಿಸಬೇಕು. ಅದರ ಬದಲು ಮಾಡಬಾರದ್ದನ್ನು ಮಾಡಿದರು ಅಂತ ಅವರಿಗೆ ಶಿಕ್ಷೆ ವಿಧಿಸಲು ನಾವು ಹೋಗಬಾರದು. ಮಿಕ್ಕವರು ಯಾರಾದರೂ ಶಿಕ್ಷೆ ವಿಧಿಸಲಿ, ನಮಗೆ ಆ ಜವಾಬ್ದಾರಿ ಕೂಡದು. ಹುಟ್ಟಿದ ಮನೆಯಂತೆ, ಹುಟ್ಟುಜಾತಕದಂತೆ ಅವರವರು ನಡೆದುಕೊಳ್ಳುತ್ತಾರೆ. ಅದಕ್ಕೆ ಅವರ ಮೇಲೆ ಅಪರಾಧ, ಶಿಕ್ಷೆಗಳನ್ನು ನಾವು ಹೊರಿಸಬಾರದು" ಎಂದು ಪೂಜಾರಪ್ಪನವರು ಹೇಳಿದರು.

ಮೂವರೂ ಎದ್ದು ಹಟ್ಟಿಯ ಕಡೆಗೆ ಹೊರಟರು.

# -ಕಾಲುದಾರಿಯ ಬಳಿಯಲ್ಲಿ-

ಶ್ರೀರಂಗನಾಥ ದೇವಾಲಯದಲ್ಲಿ ಕೊಟ್ಟಾರೋತ್ಸವವು ಬಲು ವಿಜೃಂಭಣೆಯಿಂದ ನಡೆಯುತ್ತದೆ-

ಸುಲ್ತಾನರ ಜನಾನಾದವರು ಪ್ರಸಾದವನ್ನು ತರಿಸಿಕೊಂಡು ತಿನ್ನುತ್ತಿದ್ದರೆಂದು ವದಂತಿಯೂ ಇತ್ತು.

ಅಂಕಾಲಮ್ಮನ ಗುಡಿ ಪಡಸಾಲೇಲಿ ಮಲಗಿದ್ದ ಒಕ್ಕಲು ಮಗನನ್ನು ನೂಕಿ, "ಕೋಳಿ ಕೂಗಿ ಎಷ್ಟೋ ವೇಳೆ ಆಯ್ತು. ಮೂಡಲಲ್ಲಿ ಸೂರ್ಯ ಕಾಣಿಸೋ ಹೊತ್ತಾತು. ಇನ್ನೂ ಬಿದ್ದುಗೊಂಡಿದ್ದೀಯಾ? ಏಳೋ, ಏಳು! ಗುಡಿಸ್ಬೇಕು. ಪೂಜಾರ್ರು ಬರೋ ಹೊತ್ತಾಯ್ತು" ಅಂತ ಹೇಳುತ್ತಾ ಗುಡಿ ಗುಡಿಸುವವ ಎಬ್ಬಿಸಿದ. ಒಕ್ಕಲುಮಗ ಎದ್ದು ಕಣ್ಣುಜ್ಜಿಕೊಂಡು ಕುಳಿತ.

"ನಿನ್ನೆ ರಾತ್ರಿ ಹೆಬ್ಬಾರರ ದೇವಸ್ಥಾನದಲ್ಲಿ ಪ್ರಸಾದ ಕೊಡೋ ಹೊತ್ತಿಗೆ, ಠಾಣೇಲಿ ಒಂದು ಬಡೀತಿತ್ತು. ಆವ್ಯಾಗೇ ಬಂದು ಬಿದ್ದುಕೊಂಡೆ. ಅದಕ್ಕೇ ನಿದ್ರೇ ಕಣ್ಲಾ ಇನ್ನೂನು. ನೀನು ಹ್ಯಾಗ್ಲಾ ಅಷ್ಟು ಬೇಗ ಎದ್ದು ಚಂದಾಗೇ ಕಾಣಿಸ್ತೀಯಲ್ಲ!" ಎಂದ ಒಕ್ಕಲುಮಗ.

"ಬೇಗ ಬಿದ್ದುಕೊಂಡರೆ ಬೇಗ ಏಳ್ಬೋದು. ಒಡಲ್ಗೂ ಸೈ" ಎಂದ ಗುಡಿ ಗುಡಿಸುವವ.

"ಹಂಗಾರ ಹಾರುವರ ಗುಡೀಗೆ ನೀ ರಾತ್ರಿ ಬರ್ನಿಲ್ವಾ, ನಿಂಗೆ ಪುಳಿಯೋಗ್ರೆ ಆಶೆ ಇಲ್ವಾ?" ಎಂದು ಕೇಳಿದ ಒಕ್ಕಲುಮಗ.

"ಪುಳಿಯೋಗರೆ ಮಜಾ ಇಲ್ದೇ ಇರ್ತದಾ! ಆದರೆ ರಾತ್ರಿ ಹೊತ್ತು ಹಾರವರ ಕೈಲಿ ಬೈಸಿಕೊಂಡು, ದೂರ ನಿಂತು ಅಷ್ಟೋ ಇಷ್ಟೋ ಪ್ರಸಾದ ಈಸ್ಕೊಳ್ಳೋ ಬದಲು, ನನ್ನಂಗೆ ತಂಗಳು ಪುಳಿಯೋಗರೆ ಗಿಟ್ಟಿಸೋದೇ ಚೆಂದ. ಹಂಗೂ ಹಸಿ ನೀರುಳ್ಳಿ, ಬೆಳ್ಳುಳ್ಳಿ ಚೂರು ಚೂರು ಜತೆಗೆ ತಂಗಳು ಪುಳ್ಯೋಗರೆ ತಿಂದರೆ ಬಲು ಮಜಾ ಕಣ್ಲಾ!" ಎಂದ ಗುಡಿ ಗುಡಿಸುವವ.

"ತಂಗಳು ಪುಳಿಯೋಗ್ರೆ? ಅದ್ನೆಲ್ಲಿ ಗಿಟ್ಟಿಸ್ತೀ?" ಎಂದ ಒಕ್ಕಲುಮಗ.

"ನಿಂಗೊತ್ತೇ ಇಲ್ವಾ? ಹಂಗಾರ ನನ್ನ ಜತೆ ಬಾ ಈ ಬೈಸಾರೆ. ನಾನು ಹೇಳಿದ ಕೆಲ್ಸ ಮಾಡು, ಅದರ ಮಜಾನೇ ಬೇರೆ" ಎಂದ ಗುಡಿ ಗುಡಿಸುವ ಆಳು.

ಒಕ್ಕಲುಮಗ ಎದ್ದು ಕೂತ. ರೈತ ಪಡಸಾಲೇನ, ಗುಡಿ ಅಂಗಳಾನ ಗುಡಿಸಿ, ಬಾಗಿಲಾಚೆ ಸಾರಿಸಿದ.

ಅಂಕಾಲಮ್ಮನ ಪೂಜಾರಿಯು ಮುಡಿಯುಟ್ಟು ಗೀರು ಗೀರು ಗಂಧದ ಗೆರೇನ ಹಣೇಲಿ ಮೆರೆಸುತ್ತಾ, ಪೂಜಾ ಪಾತ್ರೆಗಳನ್ನು ಹಿಡಿದುಕೊಂಡು ಆ ವೇಳೆಗೆ ಬಂದನು.

ಒಳಗುಡಿಯ ಬಾಗಿಲ ಬೀಗ ತೆಗೆಯುತ್ತಾ ಮಸಕು ಬೆಳಕಿನಲ್ಲೇ ಅಂಗಳವೆಲ್ಲಾ ಗುಡಿಸಲ್ಪಟ್ಟಿದ್ದುದನ್ನು ಕಂಡು, "ಚೆನ್ನಾಗಿ ಗುಡಿಸಿದೀ, ನಾ ಬರೋಕ್ಕೆ ಮುಂಚೇನೇ ಗುಡಿಸಿದ್ದೀರಿ. ಅಂಕಾಲಮ್ಮ ನಿಮ್ಮನ್ನ ಕಾಪಾಡ್ತಾಳೆ" ಎಂದು ಹೇಳಿ ಗುಡಿಯೊಳಕ್ಕೆ ಪೂಜೆಗೆ ಹೋದ.

ಇಬ್ಬರೂ ಕಾವೇರಿ ದಡಕ್ಕೆ ಹೋದರು. ತಮ್ಮೆಲ್ಲಾ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು, ಒಗೆದ ಅರಿವೆಗಳನ್ನು ಆರಿಸಿಕೊಂಡು ಹೊರಡೋ ವೇಳೆಗೆ ಸುಮಾರು ಒಂಭತ್ತು, ಒಂಭತ್ತೂವರೆ ಗಂಟೆ ಬೆಳಗಾಗಿದ್ದಿರಬಹುದು. ಇಬ್ಬರೂ ಶ್ರೀರಂಗನಾಥನ ದೇವಾಲಯದ ಅಡುಗೆ ಶಾಲೆಯ ಅತ್ತಕಡೆ ಬಾಗಿಲ ಬಳಿ ಬಂದರು. ಹೆಬ್ಬಾರ

ಪರಿಚಾರಕರೊಬ್ಬರು ಇವರು ಬಂದುದನ್ನು ಕಂಡು ಕರೆದು "ಆ ಪಾತ್ರೆಗಳನ್ನೆಲ್ಲಾ ಚೆನ್ನಾಗಿ ಹುಣಸೆಹಣ್ಣು ಹಾಕಿ ತೊಳೆಯಿರಿ. ಮರಳು ಮಾತ್ರ ಉಪಯೋಗಿಸಬೇಡಿ. ಪಾತ್ರೆ ಬಾಳಿಕೆ ಬರುಲ್ಲ" ಎಂದು ಹೇಳಿ ಸಾಲಾಗಿ ಮೂಲೆಯಲ್ಲಿದ್ದ ಮುಸರೆ ಪಾತ್ರೆಗಳನ್ನು ತೋರಿಸಿ ಹೊರಟುಹೋದನು. ದೊಡ್ಡ ದೊಡ್ಡ ಗಂಗಾಳಗಳು, ಆನೆ ಕೊಳದಪ್ಪಲೆಗಳು. ಎರಡು ಹಿಡಿಸೌಟುಗಳು, ಸಂತರ್ಪಣೆ ತಟ್ಟೆಗಳು ಎಲ್ಲಾ ಅಲ್ಲಿದ್ದುವು.

"ತೊಗೊಳ್ಳಾ ಈ ಗಂಗಾಳಾನ, ಆ ತಾವಕ್ಕೆ ಹೊತ್ತುಕೊಂಡು ಹೋಗಿ ಇಡು. ನಾನೂ ಇನ್ನೆರಡು ಪಾತ್ರೆ ತರ್ತೀನಿ, ಅಲ್ಲಿ ನೀರ್ರೈತೆ, ಹುಣಸೆ ಚರಟಾನೂ ಮಡಿಗಿರ್ತಾರೆ" ಎಂದು ಹೇಳಿ ಕಾರ್ಯಕ್ರಮವನ್ನು ಶುರುಮಾಡಿದ, ಗುಡಿ ಗುಡಿಸುವವ.

ಪಾತ್ರೆಗಳನ್ನೆಲ್ಲಾ ತೊಳೆದು ಬೆಳಗಿಸಿ ತಿರುಗಿ ತಂದಿಡುವ ಹೊತ್ತಿಗೆ ಹನ್ನೊಂದು ಬಾರಿಸುತ್ತಾ ಇತ್ತು. ಹಾರವ ಪರಿಚಾರಕರು ಬಂದು, ಪಾತ್ರೆಯ ಎಣಿಕೆ ಹಾಕಿ, ಎರಡೆರಡು ದೊಡ್ಡ ದೊನ್ನೆ ಪುಳಿಯೋಗರೆ ತಂದು, ಇವರುಗಳ ಕೈಲಿದ್ದ ವಸ್ತ್ರದ ಮಡಿಲಿಗೆ ಹಾಕಿದರು. "ಚೆನ್ನಾಗಿ ಕೆಲ್ಸ ಮಾಡಿದ್ದೀರಿ, ಸ್ವಲ್ಪ ಇರಿ. ಇವತ್ತಿನ ಬೆಳಿಗ್ಗೆ ಧನುರ್ಮಾಸದ ಪೊಂಗಲನ್ನೂ ಸ್ವಲ್ಪ ಕೊಡ್ತೀನಿ" ಎಂದು ಹೇಳಿ ಒಳಕ್ಕೆ ಹೋಗಿ, ಒಂದೊಂದು ಸಣ್ಣ ದೊನ್ನೆ ಪೊಂಗಲನ್ನೂ ತಂದುಕೊಟ್ಟರು.

ಇಬ್ಬರೂ ದೇವಸ್ಥಾನದ ಪ್ರಾಕಾರವನ್ನು ಬಿಟ್ಟುಹೊರಟರು. "ಇದು ಹೆಂಗಿದೆ ನೋಡ್ದಾ! ಸ್ವಲ್ಪ ಕೆಲ್ಸ ಮಾಡಿದರೆ, ತಂಗಳು ಪುಳಿಯೋಗ್ರೆ ಸಿಕ್ತದೆ. ಇದು ತಿಂದ್ರೆ ನಾಳೆಗಂಟಾ ಬುತ್ತಿ ಆಶೇನೇ ಬೇಡ! ಇದು ಬಿಟ್ಟು ರಾತ್ರಿಯೆಲ್ಲಾ ಜಾಗರ್ಣೆ ಮಾಡಿ ಅವರಿವರ ಕೈಲೆಲ್ಲಾ ನೂಕಿಸ್ಕೊಂಡು, ಬೈಯಿಸ್ಕೊಂಡು, ಪುಳಿಯೋಗ್ರೆ ಗಿಟ್ಟಿಸೋದು ಏನು ಚಂದಾ" ಎಂದು ರೈತ ಮಗ ಹೇಳಿದ. "ಹೊಳೆತಾವಕ್ಕೆ ಹೋಗಿ ಹೊಂಗೆ ನೆಳ್ಳಲ್ಲಿ ಕುಂತು ತಿಂದರೆ ಏನು ಮಜಾ ಅಂತೀ! ತೊಗೋ ಒಂದು ಬೆಳ್ಳುಳ್ಳಿ, ಎರಡ್ನೀರುಳ್ಳಿ ನಿಂಗೆ ಅಂತ ಬೇರೆ ತಂದಿವ್ನಿ" ಎಂದು ಅವನ್ನು ಒಕ್ಕಲು ಮಗನಿಗೆ ಕೊಟ್ಟು ಮುಂದೆ ನಡೆದ. ಅವನ ಹಿಂದೆಯೇ ಒಕ್ಕಲು ಮಗನೂ ಹೆಜ್ಜೆ ಹಾಕುತ್ತಿದ್ದ.

* * * *

ಸುಲ್ತಾನರ ಭತೇರಿ ಹತ್ತಿರ ಹೋಗುತ್ತಿದ್ದಾಗ ರಸ್ತೆ ಅಡ್ಡ ತಿರುಗುವ ಕಡೆ ಒಕ್ಕಲು ಮಗನ ಬೆನ್ನನ್ನು ಯಾರೋ ತಟ್ಟಿದರು. "ಏನ್ಲಾ, ಯಾವಾಗ ಬಂದಿ? ನಂಗ್ಹೇಳ್ಲೇ ಇಲ್ವಲ್ಲಾ?" ಎಂದು ಅಂದರು. ಒಕ್ಕಲುಮಗ ತಿರುಗಿ ನೋಡಿದ. ಹಿಂದೆ ಬೆನ್ನು ತಟ್ಟಿ ನಿಂತಿದ್ದವ-ತಳವಾರರ ಪ್ಯಾದೆ! - "ಎಲಾ! ನನ್ನ ಗುರ್ತು ಇವನಿಗೆಲ್ಲಿ ಸಿಕ್ಕಿತು. ಹೆಂಗಾರೂ ಕಂಡುಹಿಡಿದ" ಎನ್ನುವ ಅಚ್ಚರಿಯ ನೋಟ ಒಂದು ಛಣ ಒಕ್ಕಲುಮಗನ ಮುಖದ ಮೇಲೆ ಹಾದು ಹೋಯ್ತು. ಆದರೆ ಮರುಕ್ಷಣದಲ್ಲೇ "ನೀನು ಕಳ್ಳಂಬಳದ ಮಾಲಿಂಗಿ ಅಲ್ವಾ!" ಎಂದು ಪ್ಯಾದೇನ ಕೇಳಿದ.

"ಅಲ್ಲ, ಅಲ್ಲ-ನೀನು ಮೇಲುಕೋಟೆ ಮಾರಣ್ಣ ಅಂತಿದ್ದೆ. ಹಂಗೇ ಇದ್ದೀ-ಹಂಗೇ ನಡೀತೀ ಎಲ್ಲೊ ಕಂಡ್ಹಂಗಿದೆ ನಿನ್ನ ಮುಖ. ನೆಪ್ಪಿ ಬರ್ನಿಲ್ಲ. ಹೋಗು ಹೋಗು" ಎಂದು ಪ್ಯಾದೆ ಹೇಳಿ ಬತೇರಿ ಕಡೆಗೆ ಹೊರಟುಹೋದ.



ಒಕ್ಕಲು ಮಗನಿಗೆ ಏನೋ ಸಂಶಯ ಬಂತು. ಹೊಳೆತಾವಕ್ಕೆ ಬೇಗ ಹೋಗಿ, ತಂದಿದ್ದ ಪ್ರಸಾದಾನ ತಿಂದ. ಗಿಡಗಳ ಮರೆಯಲ್ಲಿ ಸ್ವಲ್ಪ ಹೊತ್ತು ಮಲಗಿದ್ದ. ಎದ್ದು ಹೊರಟಾಗ ಸಂಜೆ ಬಿದ್ದಿತ್ತು. ಕೋಟೆ ಹೊರಗೆ ಷಹರು ಗಂಜಾಂ ಕಡೆ ಹೊರಟ.

ಷಹರು ಗಂಜಾಂ ಪೇಟೇನ ಕತ್ತಲಲ್ಲಿ ಸೇರೋದು, ಅಲ್ಲೆಲ್ಲಾರ ರಾತ್ರಿ ಕಳೆದು ಮೈಸೂರು ಕಡೆ ಬೆಳಗಿನ ಝಾವದ ಗಾಡಿಗಳು ಹೊರಡೋವಾಗ, ಅವುಗಳ ಜತೆ ಮೈಸೂರು ಸೇರಿಕೊಳ್ಳೋದು ಒಳ್ಳೆಯದು. ಇಲ್ಲಿ ಇನ್ನಿದ್ದರೆ ಯಾರಿಗಾರೂ ಗುರ್ತು ಸಿಕ್ಕರೆ ಕಷ್ಟ ಬಂದೀತು. ಬಂದ ಕೆಲಸ ಆಗದೇ ಇದ್ದರೆ ಪರವಾಗಿಲ್ಲ ಎಂದು ಗಂಜಾಂ ರಸ್ತೆಯಂಚಿನಲ್ಲಿ ನಡೆಯುತ್ತಾ ಹೊರಟ.

* * * *

ಒಂದು ಕೂಗು ದೂರ ನಡೆದಿರಬಹುದು. ಗಂಜಾಂ ರಸ್ತೆಯ ಅಡ್ಡಲಾಗಿ ಒಂದು ಕಾಲುದಾರಿ ಕಾಣಿಸಿತು. ಆ ದಾರಿಯಲ್ಲಿ ಮುದುಕಿಯೊಬ್ಬಳು ಒಣಗಿದ ಕಡ್ಡಿಗಳ ಕಟ್ಟೊಂದನ್ನು ಹೊರಲಾರದೆ ಹೊತ್ತುಕೊಂಡು ಮೆಲ್ಲಮೆಲ್ಲನೆ ನಡೆದು ಹೋಗುತ್ತಿದ್ದಳು. ಅವಳ ನಡಿಗೆಯನ್ನು ಕಂಡ ಒಕ್ಕಲ ಮಗನಿಗೆ ಏನೇನೋ ಅಸ್ಪಷ್ಟ ನೆನಪಾಯಿತು. ಮನಸ್ಸು ಕಲಕಿದಂತಾಯಿತು. ಈಕೆ ಯಾರು ಅನ್ನೋದನ್ನ ನೋಡೇಬಿಡೋಣ ಅಂತ ತಾನೂ ಕಾಲುದಾರಿಗೆ ತಿರುಗಿ ಆಕೆಯನ್ನು ಹಿಂಬಾಲಿಸಿದ. ನಡೆದುಹೋಗುತ್ತಿದ್ದ ಮುದುಕಿಗೆ ಯಾರೋ ಹಿಂದೆ ನಡೆದುಬರುತ್ತಿದ್ದಾರೆಂಬ ಅನುಮಾನ ಬಂದಿತು. ಆದರೂ ಆಕೆ ನಿಲ್ಲಲಿಲ್ಲ. ಹಿಂತಿರುಗಿ ನೋಡಲೂ ಇಲ್ಲ. "ಯಾರಾದರೇನು? ಬಂದವರು ನನ್ನ ಮುಖ ನೋಡಿದರೆ ನನ್ನನ್ನೆಂದೂ ಮಾತನಾಡಿಸುವುದಿಲ್ಲ. ಕದಿಯುವುದಕ್ಕೆ ಅಂತ ಕೂಡ ನನ್ನ ಗುಡಿಸಲ ಬಳಿ ಯಾರೂ ಬರುವುದಿಲ್ಲ" ಎಂದುಕೊಂಡೇ ಮೆಲ್ಲಮೆಲ್ಲನೆ ಮುಂದಕ್ಕೆ ಹೋಗುತ್ತಿದ್ದಳು. ಆದರೆ ಹಿಂಬಾಲಿಸುತ್ತಿದ್ದ ಒಕ್ಕಲಮಗ ಹತ್ತಿರಕ್ಕೆ ನಡೆದು ಬಂದಾಗ ಮುದುಕಿಯನ್ನು ನೋಡಿಯೇ ನೋಡಿದನು. ಮಾತನಾಡಿಸಿಯೇ ಮಾತನಾಡಿಸಿದನು.

"ಅವ್ವಾ! ಇಷ್ಟು ಹೊರೆ ಭಾರಾನ ಹೊರ್ತಿದ್ದೀರಿ, ಸುಸ್ತಾಗಿದ್ದೀರಿ, ಬೇಕಾರ ನಾನು ಹೊತ್ತು ನಿಮ್ಮ ಹಟ್ಟೀಗೆ ತಲಪಿಸ್ತೀನಿ" ಎಂದ ಒಕ್ಕಲು ಮಗ.

"ನೀನು ಯಾರು ಹೈದಾ! ಈ ದಾರೀಲಿ ಯಾಕೆ ಬಂದೆ? ಈ ಕಾಲುದಾರಿ ನನ್ನ ಗುಡಿಸಲಿಗೆ ಮಾತ್ರ ಹೋಗುತ್ತೆ. ದಾರಿ ಗೀರಿ ತಪ್ಪಿ ಇತ್ತ ಬಂದೆಯಾ?" ಎಂದು ಆಕೆ ಕೇಳಿದಳು.

ಸುತ್ತಮುತ್ತ ಕೇರಿಯವರಾರೂ ಆಕೆಯ ಹತ್ತಿರ ಮಾತನಾಡುತ್ತಿರಲಿಲ್ಲ. ಆದುದರಿಂದ ಬಂದವನು ಬೇರೆ ಕೇರಿಯವನು ಎಂದು ಆಕೆಗೂ ತಿಳಿದಿತ್ತು.

"ಗಂಜಾಂಪೇಟೆ ಕಡೆ ಹೋಗ್ತಿದ್ದೆ ಅವ್ವಾ! ಕಾಲು ದಾರೀಲಿ ನಿಮ್ಮನ್ನ ನೋಡಿದೆ. ಏನೋ ನೆನಪು ಬಂತು, ಇತ್ತ ಬಂದೆ. ಹೊರೆ ಹೊತ್ತು ನಿಮ್ಮ ಹಟ್ಟಿಗೆ ಮುಟ್ಟಿಸಿ ಆಮ್ಯಾಗ ಗಂಜಾಂಪೇಟೆಗೆ ಹೋಗ್ತೀನಿ. ನಾಳೆ ಬೈಸಾರೆ ಮೈಸೂರಿಗೆ ಹೋಗೋವ್ನಿದ್ದೀನಿ. ರಾತ್ರಿ ಅಲ್ಲಿ ತಂಗಿದ್ದು ಹೊಂಟ್ಹೋಗೋನು ನಾನು" ಎಂದ ಒಕ್ಕಲು ಮಗ.

ಮುದುಕಿಯ ಧ್ವನಿಯನ್ನು ಕೇಳಿದಾಗ ತಿರುಗಿ ಏನೋ ನೆನಪು ಅವನನ್ನು ಕಾಡಿಸತೊಡಗಿತು. ನೆನಪು ಗುರಿ ಮುಟ್ಟದು, ಮರೆಯಲೂಬಿಡದು.

"ಹಂಗಾದರೆ ನನ್ನ ಗುಡಿಸಿಲ್ನಾಗೆ ಈ ರಾತ್ರಿ ಇದ್ದು ಹೋಗು ಮಗಾ ನಾನೊಬ್ಬಳೇ ಇರೋದು" ಎಂದಳು ಮುದುಕಿ.

"ಆಗಲವ್ವಾ" ಎಂದು ಒಕ್ಕಲಮಗ ಹೊರೆಯನ್ನು ಹೊತ್ತುಕೊಂಡ.

"ಇಷ್ಟು ಭಾರಾನ ಹೇಗಾರೂ ಹೊತ್ತಿದ್ರವ್ವಾ" ಎಂದ ಒಕ್ಕಲು ಮಗ.

"ಒಡಲಿಗೆ ಭಾರವಾದರೆ, ಮನಸ್ಸಿನ ಭಾರ ಕಡಿಮೆ ಆಗ್ತದೇನೋ ಅಂತ ಆಸೇಪ್ಪಾ" ಎಂದು ಮುದುಕಿ ನಡೆಯುತ್ತ ಮುಂದೆ ಹೊರಟಳು.

ಗುಡಿಸಲನ್ನು ಸೇರಿದಾಗ ಕತ್ತಲು ಕವಿದಿತ್ತು. ಬಾಗಿಲು ಸರಿಸಿ ಮುದುಕಿಯು ಹಣತೆಯೊಂದನ್ನು ಹಚ್ಚಿದಳು. "ಕೂತುಕೋ ಬಾ ಹೈದಾ, ಏನಾರ ತಿನ್ನುಕ್ಕೆ ಇದೆಯಾ ನೋಡ್ತೀನಿ" ಅಂತ ಸೂರಿಗೆ ನೇತು ಹಾಕಿದ್ದ ನೆಲುವಿನಲ್ಲಿದ್ದ ಮಡಕೆಯನ್ನು ತೆಗೆದಳು. ಅದರಲ್ಲಿದ್ದ ಎರಡು ಬಾಳೆಹಣ್ಣು, ಚೂರು ಕೊಬ್ಬರಿ, ಬೆಲ್ಲ ತೆಗೆದು, ಒಕ್ಕಲ ಮಗನ ಎದುರಿಗಿಟ್ಟಳು. ಒಂದು ಕುಡಿಕೆ ನೀರು ತಂದಿಟ್ಟಳು. ಅದನ್ನು ತಿನ್ನಲಾರಂಭಿಸಿ, "ಅವ್ವಾ! ಊರಿಂದ ಇಷ್ಟು ದೂರ ಒಬ್ಬರೇ ಇದೀರಿ. ಮಕ್ಕಳು ಮರಿ ಯಾರೂ ಇಲ್ವಾ?" ಎಂದು ಕೇಳಿದ.

ಅವನು ಕೇಳಿದ ದನಿಯಲ್ಲಿ ಅನುಕಂಪ ತುಂಬಿತ್ತು. ಮುಖ ಅಯ್ಯೋ ಎನ್ನುವಂತಿತ್ತು.

"ನನಗೂ ಒಬ್ಬ ಮಗ ಇದ್ದ ಹೈದಾ! ಈಗ ಬದುಕಿದ್ದಿದ್ದರೆ ನಿನ್ನ ಪ್ರಾಯದೋನೇ ಆಗಿರೋನು" ಎಂದು ಕೊರಗು ದನಿಯಲ್ಲಿ ಮುದುಕಿ ಹೇಳಿದಳು, ಅವನ ಮುಖ ನೋಡಿ.

ಒಕ್ಕಲ ಮಗ ಅವಳನ್ನೇ ನೋಡುತ್ತಿದ್ದ. ಆಕೆ ಮುಂದುವರೆಯುತ್ತಾ, "ಅವನಿದ್ದಾಗ ನಾನೂ ಚೆಂದಾಗೇ ಇದ್ದೆ. ಈಗಿನ ಹಾಗೆ ಆಗಿರ್ಲಿಲ್ಲ" ಎಂದಳು.

"ಏನಾಯ್ತವ್ವಾ ಅವನಿಗೆ. ಎಲ್ಲಿಗೆ ಹೊಂಟ್ಹೋದ" ಎಂದ ಒಕ್ಕಲು ಮಗ.

"ಎರಡೂ ಅಮಾವಾಸ್ಯೆಗೆ ಹಿಂದೆ ಅವ ಹೊಳೆಯಲ್ಲಿ ಮುಳುಗಿ ತೀರಿಕೊಂಡ. ಅವನ ಬಟ್ಟೆಬರೆಗಳು ಹೊಳೆ ದಡದಲ್ಲಿ ಸಿಕ್ಕವು. ಆದರೆ ಅವನ ಹೆಣ ಸಿಗಲೇ ಇಲ್ಲ. ಮೂರು ದಿನಗಳು ಮೈಯೆಲ್ಲಾ ಬೆಂಕೀಲಿ ಸುಟ್ಟು ಹಾಗೆ ಉರೀತಿತ್ತು. ಏನೋ ಸಂಕಟ ಆಗ್ತಿತ್ತು. ಪಟ್ಟಣದಲ್ಲಿದ್ದ ಮನೇಲಿ ಇರೋಕ್ಕೆ ಆಗ್ಲಿಲ್ಲ. ಗೌಡರ ಸಿದ್ದವ್ವ ನನ್ನ ತಾವೇ ಇದ್ದಳು. ಮೂರನೇ ದಿನ ಅವಳು ನೋಡಿದಳು. 'ಹಿಂಗ್ಯಾಕಾತು?' ಎಂದು ಬೆದರಿ ಕೇಳಿದಳು. ಆಗ ನಾನೂ ಒಡಲ ನೋಡಿಕೊಂಡೆ. ಅಲ್ಲಲ್ಲಲ್ಲೇ ಬಿಳಿ ಮಚ್ಚೆ ಬಿದ್ದಿತ್ತು. ಮುಖದಲ್ಲೂ ಕಾಣಿಸಿಕೊಂಡಿತ್ತು. 'ಸಿಂಗ್ಯಾಕಾರಾ ಬಂತು ಈ ರೋಗ,' ಎಂದು ಸಿದ್ದವ್ವ ದೂರ ಸರಿದು ಕೇಳಿದಳು. ಮನೀಗೆ ಹೋಗಿ ಬರ್ತೀನಿ ಅಂತ ಹೋದಳು. ಆಗ ನನಗೆ ಅನ್ನಿಸ್ತು, ಈ ರೋಗ ಬಂದ ಮ್ಯಾಗೆ ಯಾರೂ ಇತ್ತ ಬರುಲ್ಲ ಅಂತ. ಅದಕ್ಕೇ ಊರಾಚೆ



ಇದ್ದ ಈ ಗುಡಿಸಲಿಗೆ ಬಂದು ಸೇರಿಕೊಂಡೆ" ಅವಳ ಗಂಟಲನ್ನು ಏನೋ ಒತ್ತುತ್ತಿದ್ದಿರಬೇಕು. ಅದಕ್ಕೇ ಏನೋ ಮುದುಕಿ ಮಾತು ನಿಲ್ಲಿಸಿದಳು.

"ಹೊಳೇಲಿ ಮೀಯಕ್ಕೆ ಹೋಗಿ ಕಾಲ್ಜಾರಿ ಮುಳುಗಿದನಾ ಅಥವಾ ಸುಳೀಗೆ ಸಿಕ್ಕಿ ತೀರಿಕೊಂಡನಾ? ಏನು ಮಾಡಿಕೊಂಡಿದ್ದ ಅವ, ಯಾಕಾರೂ ಹಂಗೆ ಮಾಡಿದ?" ಎಂದ ಒಕ್ಕಲು ಮಗ ಕಿರುದನಿಯಲ್ಲಿ.

"ಕೂಲಿಮಠ ನಡೆಸ್ಕೊಂಡಿದ್ದ, ಊರಿನವರ ಕೈಲಿ ಭೇಷ್ ಅನ್ನಿಸ್ಕೊಂಡಿದ್ದ. ಆದರೆ ಕೆಟ್ಟಕಾಲ ಬಂತು ನಮಗೆ. ಕಳೆದ ನವರಾತ್ರಿಗೆ ಮುಂಚೆ ಒಂದು ಬೆಳಿಗ್ಗೆ ಹೊಳೆ ಕಡೆ ಹೋಗಿದ್ದಾಗ, ದೇವಸ್ಥಾನದ ಆನೇನೂ ಬಂದಿತ್ತಂತೆ. ಅದಕ್ಕೇನೋ ಮಸ್ತು ರೇಗಿ ಇವನನ್ನು ಅಟ್ಟಿಸಿಕೊಂಡು ಬಂತಂತೆ. ಮಾವಟಿಗ ಏನೂ ಮಾಡಲಾಗಲಿಲ್ಲವಂತೆ. ಆಗ ಬಾಳೆತೋಟದ ಕಡೆಯಿಂದ ಬಂದವನೊಬ್ಬ, ಆನೆ ಕೂಗಿದ ಹಾಗೆ ಕೂಗ್ತಾ ಹೊಳೆ ಕಡೆ ಓಡಿ ಈಜಲಾರಂಭಿಸಿದನಂತೆ. ಅರಚುತ್ತಾ ಆನೆ ಅವನನ್ನು ಹಿಂಬಾಲಿಸಿ ಹೊಳೆಗೆ ಬಿದ್ದಿತಂತೆ-ಅಲ್ಲೇ ಸ್ವಲ್ಪ ಹೊತ್ತು ಈಜಾಡಿದ ಮೇಲೆ ಆನೆ ಮೊದಲಿನಂತೆ ಸಾಧುವಾಗಿ ದಡಕ್ಕೆ ಬಂದು ಮಾವಟಿಗ ಹೇಳಿದ ಹಾಗೆ ಕೇಳಿಕೊಂಡು ಮಠಕ್ಕೆ ಹೋಯ್ತಂತೆ. ಬಾಳೇತೋಟದ ಕಡೆಯಿಂದ ಬಂದಿದ್ದವ ಸ್ವಲ್ಪ ದೂರದಲ್ಲಿ ಹೊಳೆ ದಡ ಸೇರಿ, ಓಡಿಯೋಡಿ ಮಗನ ಹತ್ತಿರ ಬಂದು, 'ಏನಾರಾ ಗಾಯವಾಯ್ತೇನ್ಲಾ-ಆನೆಗೆ ಮಸ್ತು ಬಂದಾಗ ಕೂಗ್ತದಲ್ಲ! ಆ ಕೂಗು ಕೇಳಿ ನಾನು ಓಡಿಬಂದೆ. ಯಾರ್ಗಾರೂ ಏನಾರ ತೊಂದರೆ ಆದೀತಲ್ಲಾ ಅಂತ. ಹೆಣ್ಣಾನೆ ಕೂಗಿದ ಹಾಗೆ ಕೂಗಿದರೆ ಅದು ಆ ಕೂಗಿನ ಹಿಂದೇನೇ ಬರ್ತದೆ ಅಂತ ಗೊತ್ತಿತ್ತು. ಅದಕ್ಕೇ ಹಂಗೆ ಕೂಗ್ತಾ ಹೊಳೆಗ ಬಿದ್ದು ಈಜಿದೆ. ಅಂಕಾಲಮ್ಮನ ಭಂಡಾರ ನಿನ್ನ ಕಾಪಾಡ್ತು" ಅಂತ ಹೇಳಿದನಂತೆ. ಅವತ್ತಿನಿಂದ ಅವನ ಮಾತೇ ಮಗನದು ಮನೇಲಿ. ಬೈಸಾರೆ ಸಂಜೆ ಅವನ ಜತೇಲಿ ಇರ್ತಿದ್ದ. ಮನೆಗೆ ಬಂದರೆ ಅವನು ಹೇಳಿದ್ದನೆಲ್ಲಾ ಹೇಳ್ತಿದ್ದ. ಇವನು ಹೇಳಿದ್ದೆಲ್ಲಾ ದಿಟವಾಗಿದ್ದಿದ್ರೆ ಅವ ದೇವರಿಗಿಂತ ದೊಡ್ಡವನಾಗಿರಬೇಕು ಅನ್ನಿಸ್ತು. ಇನ್ನೂ ಎಳೆಪ್ರಾಯ! ಪ್ರಾಣ ಉಳಿಸಿದೋರು ಅಂದರೆ ಹಾಗೇನೇ ಆ ವಯಸ್ಸಿನಲ್ಲಿ, ತುಂಬಾ ಹೊಗಳೋ ಹಾಗಾಗುತ್ತೆ. ಈಗ ನನ್ನ ಪ್ರಾಣಾನ ಯಾರಾರೂ ಉಳಿಸಿದ್ರೆ ಅವರನ್ನು ಬಯ್ಯೋ ಹಾಗಾಗುತ್ತೆ. ಏನೋ ಹೇಳುಕ್ಕೆ ಹೋಗಿ ಏನೇನೋ ಅಂತಾ ಇದೀನಿ, ಅರಳುಮರುಳು-ಏನಂತಿದ್ದೆ-ಅವನ ಜತೇಲೇ ಇರ್ತಿದ್ದ ಅಂತ ಅಲ್ಲವಾ.

ನವರಾತ್ರಿ ಮುಗಿದ ಮೇಲೆ ಎರಡು ಮೂರು ವಾರ ಆಗಿರಬಹುದು. ಆಗ ಒಂದು ಸಲ ಮನೆಗೆ ಬಂದಾಗ ಹೇಗೋ ಇದ್ದ. ಅವತ್ತು ರಾತ್ರಿ, ನನ್ನ ಗೆಳೆಯನ ಜತೆ ಹೋಗಿ ಬರ್ತೀನಿ ಅಂತ ಹೋದೋನು ಹೊತ್ತು ಹುಟ್ಟಿದ ಮೇಲೆ ಮನೆಗೆ ಬಂದ. ಹೇಗ್ಹೇಗೋ ಚಡಪಡಿಸ್ತಾ ಇದ್ದ.

ಒಂದು ದಿವಸ ಎಡೆ ಇಟ್ಟಾಗ ಹೇಳಿದ. 'ನೋಡವ್ವಾ! ಪಿರಿಯಾಪಟ್ಟಣದ ಸಾಹುಕಾರರ ಮನೆಗೆ ಕನ್ನ ಹಾಕುವ ಪ್ರಯತ್ನಮಾಡ್ತಾ ಇದಾರೆ ಅಂತ ಗುಮಾನಿ ಬಂದಿದೆ. ತಳವಾರರ ಹತ್ತಿರ ಸುದ್ದಿ ತಿಳಿಸಿದೀನಿ' ಎಂದು ಹೇಳಿದ. ನಾಲ್ಕು ದಿವಸ ಆದ ಮೇಲೆ

ಹೇಳಿದ 'ಅವ್ವಾ ಜಗ್ಗೋಜೀನೇ ಕಳ್ಳ. ತಳವಾರರು ದಸ್ತಗಿರಿ ಮಾಡಿದಾರೆ, ನಾಳೆ ವಿಚಾರಣೆ, ನನ್ನ ಸಾಕ್ಷ್ಯಾನೇ ಮುಖ್ಯ' ಅಂತ.

ವಿಚಾರಣೆ ಆದ ಸಂಜೆ ಬಂದು 'ಅವ್ವಾ! ನಾನು ಸಾಕ್ಷ್ಯ ಕೊಟ್ಟು ಹಿಡಿಸಿದೆನಲ್ಲ, ಅವನು ಜಗ್ಗೋಜಿ ಅಲ್ಲ. ಅರಮನೇಲಿ ಕಳುವು ಮಾಡಿದೋನ್ನ ಹಿಡಿಯುಕ್ಕೆ ಬಂದವನು ಅಂತ ಗೊತ್ತಾಯಿತು. ಆದರೆ ನೋಡವ್ವ, ಒಂದು ಅನ್ಯಾಯ ಆಗಿಹೋಗಿದೆ. ಆನೆ ನನ್ನ ತುಳಿದುಹಾಕ್ಬಿಡ್ತಿತ್ತಲ್ಲಾ ಆಗ ಬಂದು ಕಾಪಾಡಿದನಲ್ಲ ಬಾಳೆತೋಟದ ಮಂಟಪದವಲ್ಲಿದ್ದೋನು, ಅವನೇ ಜಗ್ಗೋಜಿ; ಅವನೇ ಮಾರಿಗುಡಿ ಪಡಸಾಲೇಲಿ ಇದ್ದವನ ಗುರುತು ಮಾಡಿಸಿದ್ದು. ಗುಡಿ ಪಡಸಾಲೇಲಿ ಇದ್ದ ಕನ್ನಗತ್ರಿ, ಭೈರವಿ ತಾಯಿತ್ತಿ, ಗಂಟನ್ನು ಕಂಡೇ ನನಗೆ ಅನುಮಾನ ಬಂದಿದ್ದು. ಇದನ್ನೆಲ್ಲಾ ತಳವಾರರಿಗೆ ಹೇಳಿದ್ದೆ-ಈಗ ತಳವಾರರ ಪ್ಯಾದೆಗಳು ಬಾಳೆತೋಟದ ಮಂಟಪದಲ್ಲಿರೋನ್ನ ಹಿಡಿಯುಕ್ಕೆ ಹೋಗ್ತಾರೆ ಅಂತ ಅನ್ನಿಸುತ್ತೆ. ಅಲ್ಲಿಗೆ ಹೋದೆ, ಹೇಳೋಣ ಅಂತ, ಅವ ಸಿಗಲಿಲ್ಲ-ಈಗೇನು ಮಾಡ್ಲವ್ವಾ?' ಎಂದ.

'ನೀನ್ಯಾಕೆ ಕೊರಗ್ತೀ ಮಗಾ! ಅಷ್ಟು ಜಾಣ ಅವ ಅಂತೀ, ಅವನಿಗೆ ಏತರ ಭಯ! ಏನಾರ ಕಷ್ಟ ಬಂದರೆ ತಪ್ಪಿಸಿಕೊಳ್ಳೋಕೇ ಬರುಲ್ವಾ ಅವನಿಗೆ?' ಎಂದು ಧೈರ್ಯ ಹೇಳಿದೆ.

ಒಂದುವಾರ ಆಗಿರಬಹುದು. ಒಂದು ರಾತ್ರಿ ಬಂದಾಗ ತುಂಬಾ ಬೇಜಾರು ಬಂದೋನ ಹಾಗಿದ್ದ. 'ಯಾಕ್ಲಾ ಮಗ? ಹಿಂಗಿದಿ' ಎಂದೆ 'ಅವ್ವಾ, ಕೇರೀಲೆಲ್ಲಾ ಆಡಿಕೋತಾ ಇದಾರೆ. ಪ್ರಾಣ ಉಳಿಸಿದೋನ್ನ ನಾನು ಹಿಡಿದುಕೊಟ್ಟೆ ಅಂತ. ಬೇಜಾರಮ್ಮಾ ಆ ಮಾತು ಕೇಳಿ,' ಅಂದ.

'ಜಗ್ಗೋಜೀನ ಬಾಳೆತೋಟದ ಮಂಟಪದಲ್ಲಿ ಹಿಡಿದರಾ?' ಎಂದು ಕೇಳಿದೆ.

'ಇಲ್ಲಮ್ಮಾ! ಆದರೂ ನಾನು ಮಾಡಿದ್ದು ತಪ್ಪಲ್ವಾ?' ಎಂದ. ಊಟ ಆದ್ಮೇಲೆ ರಾತ್ರಿಯೆಲ್ಲ ಒಂದು ಕಾಗದ ಬರೆದಿಟ್ಟ. ಬೆಳಿಗ್ಗೆ ಎದ್ದಾಗ ನನ್ನ ಕೈಲಿ ಕೊಟ್ಟು 'ಅವ್ವಾ! ಜಗ್ಗೋಜಿ ಯಾವಾಗಾದರೂ ಈ ಕಡೆ ಬಂದರೆ ಈ ಕಾಗದ ತಲಪಿಸಿಬಿಡಮ್ಮಾ. ಅವನನ್ನ ಹುಡುಕಿ, ನಾನು ಮಾಡಿದ್ದು ತಪ್ಪು ಅಂತ ಹೇಳಿ 'ಬಿಡ್ತು-ಅಂತ ಅವನ ಕೈಲಿ ಅನ್ನಿಸ್ಕೊಂಡು ಬರ್ತೀನಿ'-ಎಂದು ಹೇಳಿ ಹೊರಟುಹೋದ.

ಆಮೇಲೆ ಹೊಳೆ ದಡದಲ್ಲಿ ಅವನ ಬಟ್ಟೆ ಬರೆ ಸಿಕ್ಕಿತು", ಎಂದು ಮುದುಕಿ ಹೇಳಿದಳು. ಒಕ್ಕಲು ಮಗನನ್ನೇ ನೋಡುತ್ತಿದ್ದಳು. ತೊನ್ನು ಬಡಿದ ಮೇಲೆ ಅವಳ ಹತ್ತಿರ ಇಷ್ಟು ಹೊತ್ತು ಮಾತಿಗೆ ಕೂತಿದ್ದವನು ಇವನೊಬ್ಬನೇ!

"ಆ ಕಾಗದ ನನಗೆ ಕೊಡೀ ಅವ್ವಾ" ಎಂದ ಒಕ್ಕಲುಮಗ.

"ನೀನಾ ಜಗ್ಗೋಜಿ?" ಎಂದಳು ಮುದುಕಿ.

"ಹೌದು ತಾಯಿ. ಸಂಗಯ್ಯ ಹಾಗೆ ಸಾಕ್ಷಿ ಹೇಳುಕ್ಕೆ ಏನೋ ಕಾರಣ ಇರಬೇಕು ಅಂತ ಇದ್ದೆ. ನನ್ನ ತಮ್ಮ ಕನ್ನೋಜಿಯನ್ನೇ ಜಗ್ಗೋಜಿ ಅಂತ ತಿಳಿದುಕೊಂಡು ಅವನ



ಮೇಲೆ ಸಾಕ್ಷಿ ಹೇಳಿದ. ನನ್ನ ತಮ್ಮ ಇವನಿಗೆ ಏನೂ ಅಪಚಾರ ಮಾಡಿತ್ತಿಲ್ಲ. ಮೂಡ್ಲಯ್ಯನನ್ನು ಭದ್ರಮಾಡಲು ಹಾಗೆ ನಟಿಸಬೇಕಾಯ್ತು" ಎಂದ ಜಗ್ಗೋಜಿ.

ಮುದುಕಿ ಹಾಸಿಗೆ ದಿಂಬಿನ ಕೆಳಗಿಂದ ಕಾಗದವೊಂದನ್ನು ತೆಗೆದು ಜಗ್ಗೋಜಿಗೆ ಕೊಟ್ಟಳು.

* * * *

ಹಣತೆಯನ್ನು ಡಬ್ಬದ ಮೇಲೆ ಹತ್ತಿರ ಇರಿಸಿಕೊಂಡು, ಜಗ್ಗೋಜಿಯು ಕಾಗದವನ್ನು ಓದಲಾರಂಭಿಸಿದ.

"ಅಣ್ಣ ಜಗ್ಗೋಜಿ! ಸಾಷ್ಟಾಂಗ-

ನಿನಗೆ ಎಂದಾದರೂ ಈ ಕಾಗದ ಸೇರಬಹುದೆಂಬ ಆಶೆಯಿಂದ ಬರೆಯುತ್ತಿದ್ದೇನೆ. ಸಾಯುವ ಮುನ್ನ ದೇವರಲ್ಲಿ ಇದೊಂದೇ ನನ್ನ ಪ್ರಾರ್ಥನೆ. ನವರಾತ್ರಿಗೆ ಮುಂಚೆ ನನ್ನ ಪ್ರಾಣಕ್ಕೆ ಸಂಚು ಒದಗಿದ್ದಾಗ ನೀನು ದೇವರ ಹಾಗೆ ಬಂದು ನನ್ನನುಳಿಸಿದಿ. ನೀನು ಹೊಳೆಗೆ ಬಿದ್ದ ಜಾಗದಲ್ಲಿ ಸ್ವಲ್ಪ ಕೆಳಗೆ ಒಂದು ಭಯಂಕರ ಸುಳಿ ಇದೆ. ನೀನೇನಾದರೂ ಅದರಲ್ಲಿ ಸಿಕ್ಕಿಬಿಟ್ಟಿಯೇನೋ ಎಂದು ನಡುಗುತ್ತಿದ್ದೆ. ದೈವವಶಾತ್ ನೀನು ಇತ್ತ ಈಜಿಕೊಂಡು ಬಂದಿ. ನಿನ್ನನ್ನು ಅಟ್ಟಿಸಿಕೊಂಡು ಬಂದ ಆನೆಯು ಆ ಸುಳಿಯಲ್ಲಿ ಸಿಕ್ಕಿಕೊಂಡಿತು. ಆನೆಯಾಗಿದ್ದರಿಂದ ಬದುಕಿ ಬಂದಿತು. ಆದರೆ ಮಸ್ತೆಲ್ಲಾ ಇಳಿದುಹೋಗಿತ್ತು. ಅನಂತರ ನೀನು ಬಂದು ನನ್ನ ಯೋಗಕ್ಷೇಮ ವಿಚಾರಿಸಿದಾಗ ನನ್ನ ಮನಸ್ಸು ತುಂಬಾ ಮೆದುವಾಯ್ತು. ನಿನ್ನ ಕ್ಷೇಮ ನಾನು ವಿಚಾರಿಸಬೇಕು ಎಂದಿದ್ದೆ. ಆದರೆ ಅಂದು ಮಂಕನಾಗಿ ಇದ್ದೆ. ನಿನ್ನ ಪರಿಚಯವಾದ ಮೇಲೆ ಸುಮಾರು ದಿನ ನಿನ್ನ ಜತೆಯಲ್ಲೇ ಕಾಲ ಕಳೆದೆ. ನವರಾತ್ರಿ ಹಬ್ಬದ ಸಲುವಾಗಿ ಕೂಲಿಮಠಕ್ಕೆ ರಜಾ ಇದ್ದುದರಿಂದ ಬಲು ಅನುಕೂಲವಾಯ್ತು. ಆ ಮಾತು ಈ ಮಾತು ಆಡ್ತಾ ನೀ ಹೇಳಿದ ಸಂಗತಿಗಳು ನನ್ನ ಮನಸ್ಸಿನ ಮೇಲೆ ಬಹಳ ಪರಿಣಾಮ ಮಾಡಿತು. ಮನುಷ್ಯ ಏನೇನೇ ಯೋಚನೆ ಮಾಡಲಿ, ಎಂತೆಂತಾ ಯೋಚನೇನೇ ಹೂಡಲಿ, ಕಡೆಗೆ ದೇವರು ನಡೆಸಿದಂತೇ ಆಗುತ್ತದೆ. ನಾಳೆ, ಮುಂದೆ, ಅಂತೆಲ್ಲಾ ಸಂದೇಹಪಡಬಾರದು. ನಮ್ಮ ಕೆಲಸ ಅದೇನೇ ಆಗಿರಲಿ ಅದನ್ನು ಮನಸಾ ಮಾಡಬೇಕು ಅಂತೆಲ್ಲಾ ತಿಳಿದುಕೊಂಡೆ. ನೀ ಹೇಳಿದ ಪಾಠ, ಕೊಟ್ಟ ಅನುಭವದ ನಿದರ್ಶನಗಳು, ಪೂಜಾರಪ್ಪನವರ ಜೀವನ ಚರಿತ್ರೆ ಇವೆಲ್ಲಾ ನನಗೆ ತುಂಬಾ ಅರಿವು ತುಂಬಿದುವು.

ಆದರೆ ಒಂದು ಸಂಜೆ ಕಾಳಮ್ಮನ ಗುಡಿಯ ಹತ್ತಿರ ಒಬ್ಬ ಯುವಕನ ಪರಿಚಯ ಮಾಡಿಸಿದಿ. ಅಂದಿನಿಂದ ನೀನು ನನಗೆ ಸಿಗಲಿಲ್ಲ. ಆ ಯುವಕನ ಜತೆ ಅಡ್ಡಾಡುತ್ತಾ ಇದ್ದೆ. ಅವನಿಲ್ಲದಿದ್ದಾಗ ಅವನ ಗಂಟನ್ನು ಮಾರೀಗುಡಿ ಪಡಸಾಲೇಲಿ ಅವ ಇಳಿದುಕೊಂಡಿದ್ದ. ಊರಿನ ಸುದ್ದಿಯನ್ನೂ ನೋಡಿದಾಗ, ಕನ್ನಗತ್ರಿ, ಭೈರವಿ ಚಾಟಿ ಇವೆಲ್ಲವನ್ನೂ ನೋಡಿದೆ. ಏನೋ ಕೆಟ್ಟಕಾಲ, ಕೇಳಿದ್ದೆ. ಜಗ್ಗೋಜಿಯು ಬಂದಿರಬಹುದು ಎಂದೂ ತಿಳಿದಿತ್ತು. ಪಿರಿಯಾಪಟ್ಟಣದ ಸಾಹುಕಾರರು ತುಂಬಾ ಜಗ್ಗೋಜಿ ಇವನೇ ಎನ್ನಿಸಿತು. ಶ್ರೀಮಂತರು. ಆದರೂ ಬಹಳ ಒಳ್ಳೆಯವರು. ಸಂಸಾರದಲ್ಲಿ ನೊಂದಿದ್ದವರು. ನನ್ನ

ಕೂಲಿಮಠಕ್ಕೆ ತುಂಬಾ ಸಹಾಯ ಮಾಡಿ, ಆಗಾಗ್ಗೆ ಬಂದು ಮಕ್ಕಳಿಗೆಲ್ಲಾ ತಿಂಡಿ ತಿನಿಸು ಹಂಚುತ್ತಿದ್ದರು. ಅವರ ಮನೇಗೆ ಕನ್ನ ಹಾಕ್ತಾನೆ ಜಗ್ಗೋಜಿ ಅಂತ ನನಗೆ ತಿಳಿದಾಗ ನಾನು ಮಮ್ಮಲ ಮರುಗಿದೆ. ಸಾಹುಕಾರರಿಗೆ ಬಂದಿರೋ ಕಷ್ಟಗಳ ಜತೆಗೆ ಇವ ಬೇರೆ ಸೇರಿಸ್ತಾನಲ್ಲ ಅಂತ ಕುಪಿತಗೊಂಡೆ. ಅದಕ್ಕೇ ತಳವಾರರಿಗೆ ಸುಳು ಕೊಟ್ಟು, ಸಾಕ್ಷ್ಯ ಹೇಳಿ ಅವನನ್ನು ಸೆರೆ ಹಿಡಿಸಿದೆ.

ನ್ಯಾಯಾಸ್ಥಾನದಲ್ಲಿ ವಿಚಾರಣೆಯಾದ ಮೇಲೆ, ದರ್ಬಾರ್ ಭಕ್ಷಿಗಳು ಮೈಸೂರಿಂದ ಬಂದು ವಿವರಣೆ ಕೊಟ್ಟಾಗ ನನ್ನ ತಪ್ಪು ಮಂದಟ್ಟಾಯಿತು. ಖಲಾಸೆಯಾದ ಕೂಡಲೇ ಅವನ ಬಳಿ ಹೋಗಿ ತಪ್ಪೊಪ್ಪಿಕೊಂಡೆ. ಇನ್ನೊಬ್ಬರ ವಿಚಾರದಲ್ಲಿ ಮನುಷ್ಯನಾದ ನಾನು ತೀರ್ಪುಕೊಡೋದು ನನ್ನ ಕೆಲಸವಲ್ಲ ಅನ್ನೋದನ್ನ ಮರೆತಿದ್ದೆ. ಅವನೂ ಉದಾರಿ. "ನನಗೇನೂ ನಿನ್ನ ಮೇಲೆ ದ್ವೇಷವಿಲ್ಲ. ಅಣ್ಣ ಹೇಳಿದಂತೆ ನನ್ನ ಮೇಲೆ ನಿನಗೆ ಅನುಮಾನ ಬರುವಂತೆ ನಾನೇ ಮಾಡಿದೆ. ಇಲ್ಲದೇ ಇದ್ದಿದ್ದರೆ ಮೂಡ್ಲಯ್ಯ ತಪ್ಪಿಸಿಕೊಂಡು ಬಿಡ್ತಿದ್ದ. ನಿನ್ನನ್ನು ಪರಿಚಯ ಮಾಡಿಸಿಕೊಟ್ಟವನೇ ಅಣ್ಣ-ಅವನೇ ಜಗ್ಗೋಜಿ" ಎಂದು ಹೇಳಿದ. ಅದಾದ ಸ್ವಲ್ಪ ಹೊತ್ತಿನಲ್ಲೇ ದರ್ಬಾರ್ ಭಕ್ಷಿಯವರು ಅವನನ್ನು ಕರೆದರು. ಜತೆಯಲ್ಲೇ ಮೈಸೂರಿಗೆ ಕೊಂಡೊಯ್ದರು.

ನೀನೇ ಜಗ್ಗೋಜಿ ಎಂದು ನನಗೆ ತಿಳಿದಾಗ ನನ್ನ ಟೊಂಕವೇ ಮುರಿದು ಬಿದ್ದಂತಾಯ್ತು. ತಳವಾರರಿಗೆ ನಿನ್ನ ಸುಳುವನ್ನೂ ಕೊಟ್ಟಿದ್ದೆ. ಬಾಳೆತೋಟದ ಮಂಟಪದಲ್ಲಿದ್ದ ನೀನೇ ನನ್ನ ಪ್ರಾಣ ಉಳಿಸಿದೆಯೆಂದೂ ನೀನೇ ಜಗ್ಗೋಜಿಯ ಪರಿಚಯ ಮಾಡಿಸಿಕೊಟ್ಟೆಯೆಂದೂ ಹೇಳಿದ್ದೆ. ತೀರ್ಪಾದ ಮೇಲೆ, ಜಗ್ಗೋಜಿ ಅವನಲ್ಲ ಎಂದು ತಿಳಿದಾಗ, ಅವರ ಮಂದಬುದ್ಧಿಗೂ ನಿನ್ನ ಮೇಲೆ ಅನುಮಾನ ಬರೋದು ಸಹಜ! ನಾನೆಣಿಸಿದಂತೆಯೇ ತಳವಾರರ ಪಡೆಯೊಂದು ಬಾಳೆತೋಟದ ಮಂಟಪವನ್ನು ಕಾಯಿತ್ತು. ಹಗಲೂ ರಾತ್ರಿ ನಿನ್ನನ್ನು ಹುಡುಕಿದೆ. ನಾವು ಜತೆಯಲ್ಲಿ ಎಲ್ಲೆಲ್ಲಾ ಹೋಗ್ತಿದ್ದೆವು ಅಲ್ಲೆಲ್ಲಾ ಅಲೆದೆ. ನಿನ್ನ ಸುಳಿವೇ ಸಿಗಲಿಲ್ಲ. ನನ್ನ ಬಾಳಿಗೆ ಬೆಳಕು ಹಿಡಿದವನನ್ನು ನಾನೇ ಸೆರೆ ಹಿಡಿಸಿದೆನಲ್ಲಾ ಎಂಬ ಪಶ್ಚಾತ್ತಾಪ ಉಂಟಾಯಿತು. ಅದು ದಿನೇ ದಿನೇ ಬೆಳೆಯುತ್ತ ಬಂತು.

ನನ್ನಂತಹ ಪಾಪಿ ಇರಬಾರದು ಎನ್ನಿಸಿತು. ನನಗೆ ಇರೋಳೊಬ್ಬಳು ತಾಯಿ. ಅವಳನ್ನು ಗೌಡರೂ ಸಿದ್ದವ್ವನೂ ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಾರೆ. ನಾನಿಲ್ಲದಿದ್ದರೂ ಅವಳ ಪೋಷಣೆಯನ್ನು ನನಗಿಂತ ಚೆನ್ನಾಗಿಯೇ ಮಾಡುತ್ತಾರೆ ಎಂದೂ ಅನ್ನಿಸಿತು. ಈ ವಿಚಾರ ಯೋಚನೆ ಮಾಡಬಾರದು. ತೋಚಿದ್ದನ್ನು ಮಾಡಿ ಬಿಡೋದು ಎಂದುಕೊಂಡೆ. ಈ ಕಾಗದ ನಿನಗೆ ಸಿಗಲಿ. ಆಗ ನನ್ನ ತಪ್ಪನ್ನು ನೀನು ಖಂಡಿತ ಮನ್ನಿಸುತ್ತಿ ಎಂದು ಧೈರ್ಯ ತಂದುಕೊಂಡೆ. ದೇವರಿಗೆ ಅಡ್ಡಬಿದ್ದು ಈ ಪ್ರಾರ್ಥನೆ ಮಾಡಿ ಹೊಳೆ ಸುಳಿಯಿರುವ ಕಡೆ ಬೀಳುವ ನಿರ್ಧಾರ ಮಾಡಿದೆ. ಈ ಕಾಗದವನ್ನು ಬರೆದಿಟ್ಟೆ. ಅಲ್ಲಲ್ಲೇ ಮಸಿ ಕಲೆಯಾಗಿದೆ. ಕಣ್ಣೀರು ತೊಟ್ಟಿಕ್ಕಿದುದರಿಂದ. ನಿನ್ನ ಕೈಗೆ ಕಾಗದ ಸಿಕ್ಕರೆ, ಸಿಕ್ಕಾಗ,



'ಇವನೆಂಥಾ ಗಂಡಸು' ಅಂದುಕೋ ಬೇಡ. ಅಪ್ಪನ ಕೈಲಿ ಕೊಟ್ಟು ಯಾರು ನನ್ನ ಕೈಲಿ ಈ ಹೀನ ಕೆಲಸ ಮಾಡಿಸಿದನೋ ಅವನನ್ನು ಕಾಣಲು ಹೊರಟೆ.

ಮುಂದೆ ಯಾವುದಾದರೂ ಜನ್ಮದಲ್ಲಿ, ನಾಯಿಯಾಗಿಯಾದರೂ ಹುಟ್ಟಿ ನಿನ್ನ ಕಾಲಬಳಿ ಬಾಳುತ್ತಾ, ನಿನ್ನ ಋಣವನ್ನು ಹೆಚ್ಚಿಸಿಕೊಳ್ಳುವೆ.

ಇತಿ ಕ್ಷಮೆ ಬೇಡುವ
ಸಂಗಯ್ಯ.'

* * * *

ಜಗ್ಗೋಜಿ ಕಾಗದವನ್ನು ಓದುತ್ತಿದ್ದಾಗ ಅವನ ಕಣ್ಣು ಕೆರೆ ತುಂಬಿ ಬಂದಿತ್ತು. ಹಣತೆ ಬೆಳಕಿನಲ್ಲಿ ಅವನ ಮುಖದ ಮೇಲಿನ ಭಾವಗಳನ್ನೆಲ್ಲಾ ಮುದುಕಿಯು ದೃಷ್ಟಿಸಿ ನೋಡುತ್ತಿದ್ದಳು.

"ಏನು ಬರೆದಿದ್ದಾನೆ ಮಗಾ ?" ಎಂದಳು.

"ನನ್ನ ಹುಡುಕಿಕೊಂಡು ಹೋಗಿದ್ದಾನಂತೆ. ಎಂದಾದರೂ ಹಿಂತಿರುಗಿ ಬರ್ತಾನೆ ಅವ" ಎಂದು ಜಗ್ಗೋಜಿ ಸುಲಭವಾಗಿ ಸುಳ್ಳು ಹೇಳಿದ.

ಗೌಡರು ಸಿದ್ದವ್ವನೂ ಈಕೆಯ ಪೋಷಣೆಯನ್ನು ಹೇಗೆ ಮಾಡಿದರು ಎಂಬುದನ್ನು ತಾನೇ ಕಂಡಿದ್ದ-ಅದೇ ಅವನ ಕರುಳು ಕುಯ್ದಿತ್ತು. ಸ್ವಲ್ಪ ಆಸೆ ಹುತ್ತಿಸಿದರೆ, ಇದ್ದುದರಲ್ಲಿ, ಇರುವ ತನಕ ಬಾಳು ನಡೆಸಾಳೇನೋ ಎಂಬ ಆಸೆ ಇವನಿಗೆ, ಅದಕ್ಕೇ ಸುಳ್ಳು ಹೇಳಿದ.

"ಹೌದಾ ಮಗಾ? ಅಂದರೆ ಎಂದಾದರೂ ಬರ್ತಾನೆ ಅಂತಿಯಾ? ಹಾಗಾದರೆ ಅವನನ್ನು ನೀನೂ ಹುಡುಕಬಾರದಾ, ಹುಡುಕಿ ಕರಕೊಂಡು ಬರಬಾರ್ದಾ?" ಎಂದಳು ಮುದುಕಿ. ಅವಳ ಮುಖದ ಮೇಲೆ ಹಿರಿಯಾಸೆಯ ಗೆರೆಗಳು ಕರುಳಿನಿಂದ ಹರಿದು ಬಂದಿದ್ದುವು ಅದನ್ನು ನೋಡಿದ ಜಗ್ಗೋಜಿ.

"ಅವ್ವಾ, ನಿಮಗೆ ಮಾತು ಕೊಡ್ತೀನಿ. ಅವನನ್ನು ಇವತ್ತಿನಿಂದಲೇ ಹುಡುಕ್ತೀನಿ. ಆದಷ್ಟು ಬೇಗ, ದೇವರು ಸಹಾಯ ಮಾಡಿದ ಕೂಡಲೇ ಕರಕೊಂಡು ಬರ್ತೀನಿ. ಬರೋತನಕ ನೀವು ಬದುಕಿರಬೇಕು" ಎಂದ ಜಗ್ಗೋಜಿ.

"ಖಂಡಿತ ಇರ್ತೀನಪ್ಪಾ! ಅವನನ್ನ ಕಂಡೇ ಕಣ್ಣು ಮುಚ್ತೇನಿ" ಎಂದಳು ಮುದುಕಿ.

* * * *

ನಿಶಿ ರಾತ್ರಿಯಾಗಿತ್ತು. ಹತ್ತಿರದ ಹುಣಸೇಮರದ ಮೇಲಿದ್ದ ಗೂಬೆಯೊಂದು ಗುಗ್ಗೂ ಕೂಗಿತು. ಹಳ್ಳಿಯ ಮುದುಕಿ ಕಿವಿಗೊಟ್ಟು ಕೇಳಿದಳು. ಮುಖದ ಮೇಲೆಲ್ಲಾ ಗೆರೆಗಳು ಹೆಚ್ಚಾದುವು. ನಿಟ್ಟುಸಿರುಬಿಟ್ಟಳು.

"ಜಗ್ಗೋಜಿ, ಸಂಗ ನಿನ್ನ ವಿಷಯ ಹೇಳಿದ್ದೆಲ್ಲಾ ದಿಟ. ನನಗೆ ಹಿತವಾಗಲಿ ಅಂತ ಇಷ್ಟೆಲ್ಲಾ ಸುಳ್ಳು ಹೇಳಿದೆ. ಸಂಗ ತೀರಿಕೊಂಡ ಅಂತ ನನ್ನ ಎದೆ ಹೇಳ್ತಿದೆ. ಆದರೂ ನೀನು ಹೇಳಿದಾಗ ಆಸೆ ಪಟ್ಟೆ.

ಆದರೆ ಗೂಬೆ ಸತ್ಯ ನುಡೀತಿದೆ ನೋಡು, ಸತ್ತವರ ಸುದ್ದಿ ಹೇಳ್ತಿದೆ ಗುಗ್ಗೂ-ಗೂಗ್ಗು ಅಂತ" ಎಂದು ಹೇಳಿದಳು.

"ಏನೋ ಒಳ್ಳೆ ಕೆಲಸ ಮಾಡಿದೆ, ಇದ್ದೋಳಾದರೂ ಸ್ವಲ್ಪ ಸುಖವಾಗಿರಲಿ ಅಂದರೆ ಈ ಗೂಬೆ ಬಂತಲ್ಲಾ ಮಧ್ಯೆ" ಎಂದು ಜಗ್ಗೋಜಿಯು ಗೂಬೆಯನ್ನು ಮನಸ್ಸಿನಲ್ಲೇ ಶಪಿಸಿದ.

# "ಗೋವಿಂದಾ-ಗೋವಿಂದ!!"

ವಿದುರನು ನೆಟ್ಟ ಸಸಿಯಾದುದರಿಂದ ಅಶ್ವತ್ಥದ ಮರಕ್ಕೆ ಆತನ ಹೆಸರೇ ಈ ತನಕ ಆಚಂದ್ರಾರ್ಕವಾಗಿ ಉಳಿದಿದೆ.

ಸುತ್ತಲೂ ಆ ಹೆಸರಿನ ಹಳ್ಳಿಯು ಬೆಳೆದು ಬಂದಿದೆ.

"ಎಲ್ಲವೂ ಹಾಳಾಗುವ ಸ್ಥಿತಿ ಬಂದೊದಗಿದೆ ಜೋಯಿಸರೇ! ಮಾನ, ಪ್ರಾಣ, ಸಕಲವೂ ಸರ್ವನಾಶವಾಗುವ ಸ್ಥಿತಿ ಬಂದಿದೆ" ಎಂದು ಏಕಾಂತದಲ್ಲಿ ಭೇಣಿ ಥಾವಡಿಯ ಭಕ್ಷಿಗಳು, ದುಃಖದ ದನಿಯಲ್ಲಿ ಹೇಳಿದರು.

"ಅಂಥದ್ದೇನಾಗಿದೆ? ವಿವರ ಹೇಳಬಹುದಲ್ಲ! ಇಲ್ಲದ ಸಲ್ಲದ ಸುದ್ದಿಗೆ ಕಿವಿಗೊಟ್ಟು ಹೀಗೆ ಸಂಕಟ ಪಡ್ತೀರೇನೋ ಎಂದು ನನಗೆ ಅನುಮಾನ" ಎಂದರು ಜೋಯಿಸರು.

ಭಕ್ಷಿಗಳ ತಂದೆಯವರ ಕಾಲದಿಂದ, ಜೋಯಿಸರು ಮನೆಯ ಹಿರಿಯರಂತೆಯೇ ಕಾಣಲ್ಪಡುತ್ತಿದ್ದರು. ವಯಸ್ಸಿನ ಹಿರಿಯತನದಿಂದಲೂ ಕೂಡ ಭಕ್ಷಿಯವರನ್ನು ಸಲಿಗೆಯಿಂದ ಮಾತನಾಡಿಸುವ ಅವಕಾಶವು ಜೋಯಿಸರಿಗಿತ್ತು.

"ಯಾರೋ ನಮಗಾಗದವರು ಮಹಾಸ್ವಾಮಿಯವರ ಕಿವಿ ಕಚ್ಚಿದ್ದಾರೆ. ಮೊನ್ನೆಯ ದಿನ ಬೆಳಿಗ್ಗೆ ತಿಂಗಳ ವರದಿ ಒಪ್ಪಿಸಲು ಹೋಗಿದ್ದಾಗ, 'ಭೇಣಿ ಥಾವಡಿಯ ಕೆಲಸವೇನೂ ಅಷ್ಟು ಸಮರ್ಪಕವಾಗಿಲ್ಲವಂತೆ. ರಾಜ್ಯದಿಂದ ಜವಾಹಿರಿಗಳೆಲ್ಲವೂ ಕಳುವಾಗಿ ಹೊರದೇಶಗಳಲ್ಲಿ ಮಾರಾಟವಾಗುತ್ತಿದೆಯಂತೆ. ರಾಜಯೋಗ್ಯವಾದ ಜವಾಹಿರಿಗಳು ಅರಮನೆಯಿಂದಲೇ ಕಳುವಾಗಿರಬೇಕು ಎಂದು ಎಲ್ಲರೂ ಸಂಶಯ ಪಡುತ್ತಿದ್ದಾರೆ. ಗೂಢಚಾರರ ಉಸ್ತುವಾರಿಯೂ ಭೇಣಿ ಥಾವಡಿಯವರದ್ದಲ್ಲವೇ? ಇಂತಹ ಸುದ್ದಿ ನಿಮ್ಮತನಕ ಬಂದಿಲ್ಲವೇ? ಎಂದು ಮಹಾಸ್ವಾಮಿಗಳೇ ಮೂದಲಿಸುತ್ತಾ ಮಾತನಾಡಿದರು."

"ಅರಮನೆಯ ಬೊಕ್ಕಸಕ್ಕೆ, ನಗನಾಣ್ಯದ ಖಜಾನೆಗೆ ಸರ್ಪಗಾವಲು ಹಾಕಿದ್ದೇನೆ. ಈ ತನಕ ಅರಮನೆಯಲ್ಲಿ ಕಳ್ಳತನವಾದ ವಿಷಯ ನನಗಾವುದೂ ತಿಳಿದಿಲ್ಲ ಮಹಾಸ್ವಾಮೀ! ಬೊಕ್ಕಸವನ್ನು ತನಿಖೆ ಮಾಡಿ ಎರಡು ದಿನಗಳಲ್ಲಿ ತಿರುಗಿ ಬಂದು ಕಾಣುತ್ತೇನೆ' ಎಂದು ಭಿನ್ನವಿಸಿಕೊಂಡು ಹಿಂತಿರುಗಿದೆ. ನಿನ್ನೆಯೆಲ್ಲಾ ದಫ್ತರಗಳನ್ನು ತರಿಸಿಕೊಂಡು, ಮೊಃಖ್ತಾ ನಾನೇ ತನಿಖೆ ಮಾಡಿದೆ. ಒಂದು ಚಿಕ್ಕ ದುಗ್ಗಾಣಿಯೂ ಕಳುವಾಗಿಲ್ಲ!

ಗೂಢಚಾರರನ್ನು ಕರೆಸಿ ಕೇಳಿದೆ. 'ರಾಜ್ಯದಲ್ಲಿ ಅಲ್ಲಲ್ಲೇ ಕಳ್ಳತನಗಳಾಗುತ್ತಿವೆ. ಕದ್ದ ಮಾಲುಗಳನ್ನು ಕೆಲವರು ಗೋವಾಕ್ಕೆ ತೆಗೆದುಕೊಂಡು ಹೋಗಿ ಮಾರುತ್ತಿದ್ದಾರೆಂಬ ಸುದ್ದಿಯು ಹರಡಿದೆ. ಆದರೆ ಕಳೆದುಕೊಂಡವರಾರೂ ಯಾವ ಕೊತ್ವಾಲರ ಥಾವಡಿಯಲ್ಲೂ ಫಿರ್ಯಾದು ಮುಟ್ಟಿಸಿಲ್ಲ. ಆಜ್ಞೆಯಾದರೆ ತಪಶೀಲುಗಳನ್ನು ಸಂಗ್ರಹಿಸಿ ಅರಿಕೆ ಮಾಡುತ್ತೇವೆ', ಎಂದು ಹೇಳಿದರು.

ನಾಳೆ ಮಹಾಸ್ವಾಮಿಯವರಲ್ಲಿ ಬಿನ್ನವಿಸಿಕೊಳ್ಳಬೇಕು. ನಗರದ ಫೌಜುದಾರರು ಮಹಾಸ್ವಾಮಿಯವರ ಬಳಿಗೆ ಒಂದು ವಾರದಿಂದ ಬಂದು ಹೋಗಿ ಬಹಳ ಕಾಲವನ್ನು ಸನ್ನಿಧಿಯಲ್ಲೇ ಕಳೆಯುತ್ತಿದ್ದಾರೆಂದೂ ತಿಳಿಯಿತು. ಅವರೇ ಏನಾದರೂ ಚಾಡಿ ಹೇಳಿರಬಹುದು ಅನ್ನಿಸುತ್ತೆ. ಸಾಕಷ್ಟು ರುಜುವಾತಿಲ್ಲದೆ ನಗರದ ಫೌಜುದಾರರು ಬಾಯಿಬಿಡುವ ಆಸಾಮಿಯಲ್ಲ. ಅದಕ್ಕೇ ನನಗೆ ದಿಕ್ಕೇ ತೋಚದಂತಾಗಿದೆ" ಎಂದರು ಭೇಣಿ ಥಾವಡಿ ಭಕ್ಷಿಗಳು.

"ಅರಮನೆಯ ಬೊಕ್ಕಸ, ನಗನಾಣ್ಯದ ಖಾನೆಗಳು ಬಂದೋಬಸ್ತು ಆಗಿರುವಾಗ ನಿಮಗ್ಯಾತರ ಯೋಚನೆ ಭಕ್ಷಿಗಳೇ? ಆದರೂ ಸಂಜೆ ಪೂಜೆಯಾದ ಮೇಲೆ ಕವಡೆ ಹಾಕಿನೋಡ್ತೀನಿ. ನಾಳೆ ಬೆಳಿಗ್ಗೆ ಬಂದು ಕಾಣ್ತೀನಿ. ಆಮೇಲೆ ಮಹಾಸ್ವಾಮಿಗಳ ಭೇಟಿಗೆ ಹೋಗುವಿರಂತೆ" ಎಂದರು ಜೋಯಿಸರು.

ವೀಳ್ಯವನ್ನು ತೆಗೆದುಕೊಂಡು ಜೋಯಿಸರು ಹೊರಟುಹೋದರು.

ಭಕ್ಷಿಗಳ ಮನಸ್ಸು ಎಷ್ಟೋ ಹಗುರವಾಯ್ತು. ಉಚ್ಛಿಷ್ಠ ಗಣಪತಿಯ ಉಪಾಸಕರು ಜೋಯಿಸರು. ದೈವಬಲವಿದ್ದವರು ಬೆಂಬಲವಾದರೆ, ಭಕ್ಷಿಗಳಿಗೆ, ಅದರಲ್ಲೂ ತಪ್ಪು ಮಾಡದೇ ಇದ್ದ ಭಕ್ಷಿಗಳಿಗೆ, ಅನಂತರ ಯಾತರ ಭಯ?

ಮಾರನೆ ಬೆಳಿಗ್ಗೆ ಜೋಯಿಸರು ಬೇಗನೆ ಬಂದರು. ಭಕ್ಷಿಯವರೊಡನೆ ಏಕಾಂತದ ಕೊಠಡಿಗೆ ಹೋಗಿ ಬಾಗಿಲು ಹಾಕಿದ ಮೇಲೆ, "ಕವಡೆ ಹಾಕಿ ನೋಡಿದೆ. ನಿಮಗೆ ಯಾವ ಹಾನಿಯೂ ಬರುವಂತಿಲ್ಲ. ಆದರೆ ರಾಜ್ಯದಲ್ಲಿ ಯಾವುದೋ ಒಂದು ದೈವೀ ಶಕ್ತಿಯನ್ನು ಪಡೆದಿರುವವರು ಎಲೆ ಎತ್ತುತ್ತಿದ್ದಾರೆ. ಅವರಿಗೆ ಕೈ ತುಂಬಾ ಹಣವೂ ದೊರೆಯುತ್ತಿದೆ. ಹೀಗೇ ಬಿಟ್ಟರೆ, ಅವರಿಂದ ರಾಜಾಸ್ಥಾನಕ್ಕೆ ಅಪಾಯ ಉಂಟಾಗಬಹುದು. ರಾಜತ್ವಕ್ಕೇ ಕೊಡಲೀ ಪೆಟ್ಟು ಬೀಳಬಹುದು. ಅದಕ್ಕೋಸ್ಕರ ಅವರ ಪತ್ತೆ ಹಚ್ಚಬೇಕು. ಅದಕ್ಕೆ ಸರಿಯಾದ ಶಾಸ್ತಿ ಮಾಡಬೇಕು.

ದೈವೀಶಕ್ತಿ ಅವರಿಗೆ ದೊರಕಿದೆ ಎಂದೆನಲ್ಲವೇ? ಅಂತಹವರನ್ನು ನಿಮ್ಮ ಕೊತ್ವಾಲರು, ತಳವಾರರು, ಭೇಣಿ ಗುಪ್ತಚಾರಿಗಳೂ ಕಂಡುಹಿಡಿಯುತ್ತಾರೆಂಬ ನಂಬಿಕೆ ನನಗೇನೋ ಇಲ್ಲ. ಅದಕ್ಕೇ ನನಗನ್ನಿಸುತ್ತೆ, ನಾವೂ ಪೂಜೆ ಪುನಸ್ಕಾರ ಹಾಕಿಸಿ, ಮಾಟ, ಮಂತ್ರ ಮಾಡಿಸಬೇಕು ಅಂತ. ಬೆಟ್ಟದ ಕಿಬ್ಬಿಯಲ್ಲಿ ಕೃಷ್ಣ ಕಾಳಿಯ ಉಪಾಸಕನೊಬ್ಬನಿದ್ದಾನೆ. ಆತ ಏನು ಮಾಡ್ತಾನೆ ಅಂತ ಕೇಳೋದು ಬೇಡ. ಆತನ ಕೈಲಿ ಶೂನ್ಯ ಮಾಡಿಸೋಣ. ನಿಮಗೆ ಒಪ್ಪಿಗೆಯಾದರೆ, ಮಿಕ್ಕೆಲ್ಲ ಏರ್ಪಾಡನ್ನೂ ನಾನು ಮಾಡುತ್ತೇನೆ" ಎಂದರು ಜೋಯಿಸರು.

"ನೀವು ಹೇಳಿದ್ದಕ್ಕೆ ನನ್ನ ಎದುರು ಮಾತುಂಟೇ?" ಎಂದರು ಭಕ್ಷಿಗಳು.

* * * *

ಅರಮನೆಯ ಬೊಕ್ಕಸ, ನಗನಾಣ್ಯದ ಖಾನೆ, ಎಲ್ಲವೂ ಸರಿಯಾಗಿದೆಯೆಂದು ತಿಳಿದಾಗ ಮಹಾಸ್ವಾಮಿಗಳು ಕಿಂಚಿತ್ ಪ್ರಸನ್ನರಾದರು. ಮಿಕ್ಕ ಸುದ್ದಿಯನ್ನು ಭಕ್ಷಿಗಳು ಅರಿಕೆ ಮಾಡುವ ಗೋಜಿಗೆ ಹೋಗಲೇ ಇಲ್ಲ.

"ನಗರದ ಹತ್ತಿರ ರಾಜ ಯೋಗ್ಯವಾದ ವಜ್ರದ ಅಡ್ಡಿಕೆಯು ವ್ಯಾಪಾರಕ್ಕೆ ಬಂದಿತ್ತೆಂದೂ, ಗೋವಾದ ವ್ಯಾಪಾರಿಯು ಕೊಂಡು ಸಾಗರ ಸೊರಬದ ಮಾರ್ಗವಾಗಿ ಹೋದನೆಂದೂ ನಗರದ ಫೌಜುದಾರರು ವರದಿ ಇತ್ತರು. ಅದಕ್ಕೇ ಅನುಮಾನ ಬಂದು ನಿಮ್ಮನ್ನು ಕೇಳಿದೆ," ಎಂದರು ಮಹಾಸ್ವಾಮಿಗಳು.

"ರಾಜ್ಯದ ಆರು ಫೌಜುದಾರರಿಗೂ, ಅದರಲ್ಲೂ ಮುಖ್ಯವಾಗಿ ಅಪ್ಪಗ್ರಾಮ,



ಮಂಜರಾಬಾದ್ ಮತ್ತು ನಗರ ಫೌಜುದಾರರಿಗೆ ಈ ವಿಷಯದಲ್ಲಿ ನಿಗಾ ಇಟ್ಟಿರಬೇಕೆಂದು ನಿರೂಪವನ್ನು ಕಳಿಸುತ್ತೇನೆ. ನಮ್ಮ ಛಾವಡಿಯವರೂ ಕಣ್ಣಿಟ್ಟುಕೊಂಡಿರಬೇಕೆಂದು ಕಟ್ಟಾಜ್ಞೆ ಹೊರಡಿಸುತ್ತೇನೆ" ಎಂದು ಭೇಣಿ ಛಾವಡಿ ಭಕ್ಷಿಗಳು ವಿಜ್ಞಾಪಿಸಿಕೊಂಡು, ಹಿಂತಿರುಗಿದರು.

* * * *

ನಿರೂಪದ ಛಾವಡಿಗೆ ಹೋಗಿ, ದರೋಗರಿಗೆ ಎಲ್ಲ ವಿಷಯಗಳನ್ನೂ ತಿಳಿಸಿ, ಆಳುವ ಮಹಾಸ್ವಾಮಿಯವರ ನಿರೂಪವನ್ನು ಮೂರೂ ದಫ್ತರಗಳ ಬಳಿ ಬರೆಸಿ, ರಾಜ್ಯದ ಆರೂ ಫೌಜುದಾರ್ರುಗಳಿಗೆ ಆ ದಿನವೇ ಕಳಿಸುವಂತೆ, ಎಲ್ಲ ಏರ್ಪಾಡುಗಳನ್ನೂ ಭೇಣಿ ಛಾವಡಿ ಭಕ್ಷಿಗಳು ತುರ್ತಾಗಿ ಮಾಡಿದರು.

'ರಾಜ್ಯದ ಪ್ರಜೆಗಳಲ್ಲಿ ಯಾರಿಗಾದರೂ ಗೋಪ್ಯವಾಗಿಟ್ಟಿದ್ದ ನಿಧಿ, ನಗನಾಣ್ಯ ಮುಂತಾದುವುಗಳು ಕಳುವಾಗಿದ್ದ ಸುದ್ದಿ ತಿಳಿದರೆ ಅಂತಹ ಸುದ್ದಿಗಳನ್ನು ಫೌಜುದಾರರಿಗೆ ತಿಳಿಸಬೇಕು. ಗೋಪ್ಯವಾಗಿ, ತಮ್ಮ ಪರಿಚಯವನ್ನು ಬಹಿರಂಗಪಡಿಸದೇ ಸತ್ಯಾಂಶವನ್ನು ಬರೆದು ತಿಳಿಸಿದರೂ ಆಯಿತು. ಈ ರೀತಿ ಕಳ್ಳತನ ಮಾಡುವವರ ಬಲವಾದ ಗುಂಪೇ ಒಂದು ಇದೆಯೆಂದೂ, ಕಾಲಕ್ರಮೇಣ ಅವರುಗಳು ರಾಜ್ಯಕ್ಕೆ ಹಾನಿ ತರಬಹುದೆಂದೂ ಆಳರಸರಿಗೆ ಮನವರಿಕೆಯಾಗಿದೆ.

ರಾಜ ದ್ರೋಹಿಗಳಾಗಬಹುದಾದ ಇವರನ್ನು ತೀವ್ರ ರೀತಿಯಲ್ಲಿ ಸದೆಬಡೆಯಬೇಕಾದ್ದರಿಂದ ಎಲ್ಲಾ ಪ್ರಜೆಗಳು ಸಹಕರಿಸಬೇಕು, ಎಂದು ನಿರೂಪದಲ್ಲಿ ತಿಳಿಸಲಾಗಿತ್ತು.

ರಾಜ್ಯದ ಆರೂ ಫೌಜುದಾರರು ತಮ್ಮ ಸುಪರ್ದಿನಲ್ಲಿದ್ದ ಕೊತ್ವಾಲ, ತಳವಾರರಿಂದ ಮೊದಲುಗೊಂಡು, ತೋಟಿ ಕುಳವಾಡಿಗಳ ತನಕ, ಎಲ್ಲ ಸಿಬ್ಬಂದಿ ವರ್ಗದವರಿಗೂ ನಿರೂಪದ ವಿಷಯವನ್ನು ತಿಳಿಸಿದರು.

* * * *

ಸುತ್ತಮುತ್ತಲಿನ ಹಳ್ಳಿಗಳಿಂದ ಹೆಣ್ಣುಮಕ್ಕಳೆಲ್ಲರೂ, ಹಚ್ಚಿದ ಹಣತೆಗಳನ್ನು ಬಿದಿರಿನ ಸೀಳುಪಟ್ಟೆಗಳ ಮೇಲಿರಿಸಿಕೊಂಡು, ಚೈತ್ರಾ ಪೌರ್ಣಮಿಯ ದಿನ, ವಿದುರಾಶ್ವತ್ಥಕ್ಕೆ ಬಂದು, ಅಶ್ವತ್ಥ ಪ್ರದಕ್ಷಿಣೆಯನ್ನು ಹಾಕುವುದುಂಟು. ಹುದುಗಿದ ತಾಯ್ತನದ ಹಂಬಲವು ಈಡೇರುವುದಕ್ಕೂ, ಮನೆಯ ಮಕ್ಕಳು ಅಶ್ವತ್ಥದ ಹಾಗೆ ಚಿರಂಜೀವಿಗಳಾಗುವುದಕ್ಕೂ ಈ ಪೂಜೆಯು ಸಹಾಯಕವಾಗುತ್ತೆಂದೇ ಅಲ್ಲಿರುವವರ ನಂಬಿಕೆ. ಆ ಕಾಲಕ್ಕೆ ಸರಿಯಾಗಿ ಏಳು ದಿನದ ಜಾತ್ರೆಯೂ ನಡೆಯುತ್ತದೆ. ಸುಮಾರು 5-6 ಸಾವಿರ ಜನರು ಸೇರುತ್ತಾರೆ. ಎರಡು ಮೂರು ಸಾವಿರ ದನಗಳ ಮಾರಾಟವಾಗುತ್ತದೆ. ನೂರು ಇನ್ನೂರು ಕುದುರೆಗಳ ವ್ಯಾಪಾರವೂ ಆಗುತ್ತದೆ.

ಅಶ್ವತ್ಥಮರದ ಕಟ್ಟೆಯ ಮೇಲೆ ಅಸಂಖ್ಯಾತ ನಾಗರ ಪ್ರತಿಮೆಗಳು

ಪ್ರತಿಷ್ಠಿತವಾಗಿವೆ. ಅವುಗಳ ಸುತ್ತಲೂ ಪ್ರದಕ್ಷಿಣೆ ಹಾಕಲು ಹತ್ತು ಜನರು ಸಾಲು ನಿಂತು ನಡೆಯುವಷ್ಟು ಕಟ್ಟೆಯ ಅಗಲವಿದೆ.

ಅಶ್ವತ್ಥಕಟ್ಟೆಯ ಉತ್ತರದಲ್ಲಿ ಕೆಂಪು ಬಣ್ಣದ ಗೋಡೆಯ ಹಳೆಯಕಾಲದ ಛತ್ರವೊಂದಿದೆ. ಛತ್ರದ ಕೈಸಾಲೆಯ ಬಲಗಡೆ ಮೂಲೆಯಲ್ಲಿ ಒಬ್ಬ ಮುದುಕ ಕುಳಿತಿದ್ದಾನೆ. ಬಟ್ಟ ತಲೆ. ಹಣೆಗೆಲ್ಲಾ ನಾಮ. ನೆರಿಗಟ್ಟಿದ ಮುಖ. ಸುಕ್ಕುಬಿದ್ದ ತೆಳುವಾದ ಮೈ. ಹಾಗಿದ್ದರೂ ಒಮ್ಮೆ ನೋಡಿದರೆ, ತಿರುಗಿ ನೋಡೋಣ ಎಂದು, ಅವನ ಕಣ್ಣ ಹೊಳಪಿನಿಂದಲೋ ಏನೋ, ಅನ್ನಿಸುತ್ತದೆ. ಹತ್ತು ಘಳಿಗೆಗಳಿಗೊಮ್ಮೆ ಬೊಚ್ಚಬಾಯಿ ತೆರೆಯುತ್ತಾನೆ. ಗೋವಿಂದ, ಗೋವಿಂದ, ಗೋವಿಂದ ಎಂದು ನೂರೆಂಟು ಬಾರಿ ಅನ್ನುತ್ತಾನೆ. ತಿರುಗಿ ಹತ್ತು ಘಳಿಗೆ ಮೌನವಾಗಿರುತ್ತಾನೆ. ಯಾವಾಗ, ಯಾವ ಹೊತ್ತಿನಲ್ಲಿ ನೋಡಿದರೂ ಇದೇ ಅವನ ನಿತ್ಯಚರಿ. ಇನ್ನೊಂದು ಮಾತನಾಡಲೊಲ್ಲ. ಕಣ್ಣುಬಿಟ್ಟು ಕೊಂಡೇ ಕೂತಿರುತ್ತಾನೆ. ಎತ್ತಲಿಂದ ನಿಂತು ನೋಡಿದರೂ ನಮ್ಮ ಕಡೆಗೇ ಅವನ ದೃಷ್ಟಿ ಬಿದ್ದಂತೆ ಕಾಣುತ್ತದೆ. ಆದರೆ ನಮ್ಮ ಕಡೆಗೇ ನೋಡುತ್ತಿದ್ದರೂನೂ, ನಮ್ಮ ಬೆನ್ನ ಹಿಂದೆ, ಆಚೆಯಿರುವ ಯಾವುದನ್ನೋ ತೀಕ್ಷ್ಣವಾಗಿ ನೋಡುತ್ತಿದ್ದಾನೆ ಎಂದು ಭಾಸವಾಗುತ್ತದೆ. ಆಗ ನಮ್ಮ ಮೈ ಝುಂ ಎನ್ನುತ್ತದೆ.

ಆಗಿಂದಾಗ್ಗೆ ಯುವಕರಾರಾದರೂ ಬಂದು, 'ಗೋವಿಂದ ಭಕ್ತನ' ಕಾಲು ತೊಳೆದು, ಒರೆಸಿ, ಕಣ್ಣಿಗೆ ಒತ್ತಿಕೊಂಡು ಹೋಗುತ್ತಾರೆ. ಹೀಗೆ ಮಾಡಿದ ಯುವಕರ ಕೈಕಾಲು ಯಾವ ಅಪಘಾತದಲ್ಲೂ ಮುರಿಯುವುದಿಲ್ಲವೆಂಬ ಪ್ರತೀತಿ ಆ ಪ್ರಾಂತ್ಯದಲ್ಲೆಲ್ಲಾ ಸುಮಾರು ಕಾಲದಿಂದ ಹರಡಿದೆ.

ಛತ್ರದಲ್ಲಿ ಹತ್ತು ಹನ್ನೆರಡು ಕೊಠಡಿಗಳಿವೆ, ಬಾವಿಯಿದೆ, ದೊಡ್ಡ ಅಂಗಳವಿದೆ. ಬಂದ ಯಾತ್ರಾರ್ಥಿಗಳು ಅಂಗಳದಲ್ಲೇ ಉಳಿದುಕೊಳ್ಳುವ ವಾಡಿಕೆ. ಬಾಡಿಗೆ ತೆತ್ತು ಕೊಠಡಿಯನ್ನು ಯಾರೂ ಸಾಮಾನ್ಯವಾಗಿ ತೆಗೆದುಕೊಳ್ಳುವುದಿಲ್ಲ.

ಅಶ್ವತ್ಥಕಟ್ಟೆಯ ಪಶ್ಚಿಮದಲ್ಲೇ ತೋಪಿರುವುದು. ಅಲ್ಲೇ ಜಾತ್ರೆಗೆಂದು ಬಂದವರು ಅಂಗಡಿ ಮುಂಗಟ್ಟುಗಳನ್ನಿಟ್ಟುಕೊಳ್ಳುವುದು. ದನಗಳನ್ನು ಮಾರಾಟ ಮಾಡುವುದೂ ಅಲ್ಲಿಯೇ. ಕುದುರೆಗಳ ಮಾರಾಟವಾಗುವುದೂ ಅದೇ ತೋಪಿನಂಚಿನಲ್ಲಿ. ತೋಪಿನಂಚಿನಲ್ಲಿರುವ ಏತದ ಬಾವಿಯ ನೀರು ಪವಿತ್ರವಾದುದೆಂದೂ, ಜನ, ಜಾನುವಾರುಗಳ ಆರೋಗ್ಯಕ್ಕೆ ಸಹಾಯಮಾಡುತ್ತೆಂದೂ ಪ್ರತೀತಿ.

ಪೂರ್ವದಲ್ಲಿ ಬಯಲು. ಅಲ್ಲೊಂದು ಇಲ್ಲೊಂದು ಈಚಲಮರ ಒಂಟೊಂಟಿಯಾಗಿ ಬೆಳೆದುಕೊಂಡಿದೆ.

ಫೌಜಿನವರು ಈ ಬಯಲಿನಲ್ಲಿ ಹತ್ತಿಪ್ಪತ್ತು ಗುಡಾರಗಳನ್ನು ಹಾಕುತ್ತಿದ್ದಾರೆ. ಫೌಜುದಾರರು ಸಿಬ್ಬಂದಿಯೊಡನೆ ಮೊಕ್ಕಾಂ ಮಾಡುವಾಗ ಈ ರೀತಿ ಗುಡಾರಗಳನ್ನು ಹಾಕುವ ವಾಡಿಕೆ.

* * * *



ಪೌರ್ಣಮಿಯ ದಿನ ತಿಳಿ ಅರಿಸಿನ ಹಚ್ಚಿದ ಬೆಳದಿಂಗಳು ಕೊಂಡೆನಕಪಲ್ಲಿಯ ಬಂಡೆಗಳ ಮೇಲೆಲ್ಲಾ ಹರಡಿದೆ. ತಂಪಾದ ಆ ತಿಂಗಳ ಬೆಳಕಿನಲ್ಲಿ, ಈಶಾನ್ಯದಿಂದ ಪ್ರಾಯದ ಸೊಬಗಿರುವ ಮುದುಕನೊಬ್ಬನು ಕಾಲುದಾರಿಯಲ್ಲಿ ನಡೆದುಬರುತ್ತಿದ್ದಾನೆ. ಆಲದ ತೋಪಿನ ಬಳಿಗೆ ಬಂದಾಗ, ಅಂಚಿನಲ್ಲಿದ್ದ ಸಣ್ಣ ಬಂಡೆಯೊಂದರ ಮೇಲೆ ಕುಳಿತಿದ್ದಾನೆ. ಏನನ್ನೋ ಯೋಚಿಸುತ್ತಿದ್ದಾನೆ.

ವಾಯುವ್ಯದ ಕಡೆಯಿಂದ ಯುವಕನೊಬ್ಬನು ಧಾಡೋಡಿ ಬಂದ. ಮುದುಕನಿಗೆ ಅಡ್ಡಬಿದ್ದು, "ಎಲ್ಲಿಗೆ ಹೋಗಿದ್ರೀ ಪೂಜಾರಪ್ಪನೋರೇ! ಗುಡಿಸಲಿನಲ್ಲಿ ಕಾಣಲಿಲ್ಲ. ಭೈರವಿ ಗುಡಿಯ ಹತ್ತಿರ ಹೋದೆ, ಅಲ್ಲೂ ಇರಲಿಲ್ಲ. ಹುಷಾರು ಬಂಡೆಯ ಬಳಿ ಹುಡುಕಿದೆ, ಪಾಪಾಸುಕಳ್ಳಿ ಕೊಳದ ಹತ್ತಿರ ನೋಡಿದೆ. ಎಲ್ಲಾ ಬಿಟ್ಟು ಇಲ್ಲಿ ಏಕೆ ಕುಳಿತಿದ್ದೀರಿ?" ಎಂದು ಕೇಳಿದ.

"ನನ್ನ ಹುಡುಕಿಕೊಂಡು ಎಲ್ಲೆಲ್ಲೂ ಗಡಗಡ ಓಡಾಡಿ, ಮೇಲುಸಿರು ಬಿಡುತ್ತಾ ಬಂದ ನೀನು, ಏನನ್ನೋ ಕೇಳುವುದಕ್ಕೆ ಬಂದಿದ್ದೀ! ಅದನ್ನು ಹೇಳದೆ, ನಾನ್ಯಾಕೆ ಇಲ್ಲಿ ಕೂತಿದ್ದೀನಿ ಅಂತ ಕೇಳುತ್ತೀಯಲ್ಲಾ? ಅದನ್ನ ಕೇಳುಕ್ಕೆ ಓಡಿಯೋಡಿ ಬಂದ್ಯಾ? ಅಥವಾ ನೀನು ಕೇಳಿದ್ದನ್ನು ನಾನು ಒಪ್ಪುಲ್ಲ ಎಂದು ಏನಾದರೂ ಶಂಕೆಯಿದ್ದು ಹಾಗೆ ಕೇಳ್ತಿದೀಯಾ?" ಎಂದ ಪೂಜಾರಪ್ಪ.

"ದಿಟ ಪೂಜಾರಪ್ಪನೋರ" ಅಂತ ಜಗ್ಗೋಜಿ ತಲೆ ತಗ್ಗಿಸಿದ. "ಒಂದು ವಾರ ಜಾತ್ರೆ ನಡೀತದೆ. ವಿದುರಾಶ್ವತ್ಥಕ್ಕೆ ಒಂದು ದಿನ ಹೋಗಿ ಬರೋಣ ಅಂತ ಆಸೆಯಾಗ್ತಿದೆ. ಯಾರೂ ಜಾತ್ರೆಗೆ ಹೋಗಬಾರದು ಅಂತ ನೀವಂದಿರಂತೆ. ಅದಕ್ಕೇ ಅನುಮಾನ ಪಟ್ಟುಕೊಂಡೇ ಕೇಳುಕ್ಕೆ ಬಂದಿದ್ದೇನೆ" ಎಂದು ಹೇಳಿದ.

"ಯಾವುದಾದರೂ ಕರಾರುವಾಕ್ಕಾದ ಕೆಲಸ ಇದ್ದರೆ ನಮ್ಮ ಕುಲದವರು ಜಾತ್ರೆಗೆ, ಪರಿಸೆಗೆ ಹೋಗಬೇಕು. ಮೋಜು ಮಾಡುವುದಕ್ಕೆ ಹೋಗುವುದು ನಮ್ಮ ವಾಡಿಕೆಯಲ್ಲ!" ಎಂದ ಪೂಜಾರಪ್ಪ.

"ಮೋಜಿಗಲ್ಲ ಪೂಜಾರಪ್ಪನೋರೇ! ಗೋವಿಂದ ಭಕ್ತರ ಕಾಲು ತೊಳೆದು, ಕಣ್ಣಿಗೊತ್ತಿಕೊಂಡು ಬರಬೇಕು ಎಂದು ಅನ್ನಿಸ್ತಿದೆ" ಎಂದ ಜಗ್ಗೋಜಿ.

"ಹ್ಞಾ! ಹಾಗೆಯೇ? ಯಾಕೆ ಜಗ್ಗು ಹೀಗೆ ನಿನಗನ್ನಿಸೋದು? ಮೊನ್ನೆ ಲಕ್ಕೋಜಿ ಹುಷಾರ್ ಬಂಡೆ ಮೇಲೆ ಜಾರಿಬಿದ್ದಾಗಿನಿಂದ ಈ ರೀತಿ ನಿನಗನ್ನಿಸ್ತಾ ಇದೆಯೇನೊ ಅನ್ನಿಸುತ್ತೆ ನನಗೆ. ಲಕ್ಕೋಜಿಗೆ ಸಾಕಷ್ಟು ಅನುಭವ ಇಲ್ಲ. ಪಾಪಾಸ್ಕಳ್ಳಿ ರಸಾನ ಅಂಗಾಲಿಗೆ ಹಚ್ಚಿಕೊಳ್ಳದೆ? ಓಡ ಹತ್ತಿದರೆ ಬಂಡೆ ಮೇಲೆ ಜಾರದೇ ಇರುಕ್ಕಾಗುತ್ತೇ! ಮರೆತುಬಿಟ್ಟೆ ಅಂತ ಆಮೇಲೆ ಹೇಳಿದ.

ಆದರೂ ದೊಡ್ಡೋರ ಕಾಲುಟ್ಟಿ ಹದನಾಗ್ತೀನಿ ಅಂತ ಹೇಳಿದಿ, ಹೋಗಿ ಬಾ. ಆದರೆ, ಒಬ್ಬನೇ ಹೋಗಬೇಕು. ಯಾರಿಗೂ ಹೇಳಕೂಡದು. ಒಂದೇ ದಿನದಲ್ಲಿ ಹಿಂತಿರುಗಿ ಬರಬೇಕು, ತಿಳೀತೇ? ಅಲ್ಲಿ ಇನ್ನು ಯಾವ ಹವ್ಯಾಸಕ್ಕೂ ಹೋಗಬಾರದು.

ಆಸೆ ಹುಟ್ಟಿಸುವ ಅವಕಾಶ ಸಿಕ್ಕಿದರೂ ತೆಪ್ಪನೆ ಹಿಂದಿರುಗಬೇಕು" ಎಂದು ಹೇಳಿ ಪೂಜಾರಪ್ಪನವರು ಅನುಮತಿ ಕೊಟ್ಟರು.

* * * *

ಫೌಜುದಾರರ ಬಿಡಾರವು ಸಿದ್ಧವಾದಾಗ, ಎಂಟೂ ಕೊತ್ವಾಲರು, ತಳವಾರರುಗಳೂ ಬಂದು ಸೇರಿದ್ದರು. ಮೊದಲ ದಿನದ ಬೆಳಗಿನ ಸಭೆಯಲ್ಲಿ ಫೌಜುದಾರರು "ಕಳೆದ ಎರಡೂ ತಿಂಗಳುಗಳಿಂದ ನೀವೆಲ್ಲಾ ಸುದ್ದಿ, ಸತ್ಯಾಂಶಗಳನ್ನು ಸಂಗ್ರಹಿಸಿರಬೇಕು. ಭೇಣಿ ಭಾವಡಿಯ ಭಕ್ತಿಗಳು ಇಲ್ಲಿಗೆ ಇನ್ನೊಂದು ವಾರದಲ್ಲಿ ಬಂದರೂ ಬರಬಹುದು. ಆದ್ದರಿಂದ ನಾವೆಲ್ಲಾ ಕುಳಿತು ಆದಷ್ಟು ಬೇಗ ತೀರ್ಮಾನಗಳನ್ನು ಮಾಡಬೇಕು. ಸುದ್ದಿ ತಿಳಿದವರು ವರದಿ ಒಪ್ಪಿಸಲಿ" ಎಂದರು.

ಕೊತ್ವಾಲರು, ತಳವಾರರು, ತಮಗೆ ತಿಳಿದ ವಿಷಯಗಳನ್ನು ತಿಳಿಸಿದರು. ಹೂತಿಟ್ಟ ನಿಧಿಯು ಅಕಸ್ಮಾತ್ತಾಗಿ... 

ನಿಧಿಯು ಅಕಲಾಯವಾಗಿ ಯಾರೊಬ್ಬರ ಕೈ ಸೇರಿದೆಯೋ, ಅಂತಹವರಿಂದ ಕಳ್ಳರು ನಿಧಿಯನ್ನು ಗಿಟ್ಟಿಸಿದ್ದರೆಂದು ತಿಳಿಯಬಂತು. ಗ್ರಾಮಗಳಲ್ಲಿ, ಊರುಗಳಲ್ಲಿ ಕಾಣಬರುವ ಸಾಮಾನ್ಯ ವ್ಯಕ್ತಿಗಳಂತೆ ವೇಷ ಧರಿಸಿ, ಕೆಲವು ಕಾಲ ಎಲ್ಲೆಲ್ಲಿಯೋ ಓಡಾಡಿ, ಸುದ್ದಿ ಸಂಗ್ರಹಿಸಿ, ನಂತರ ಕಳ್ಳತನವನ್ನು ಮಾಡುತ್ತಿದ್ದರೆಂಬುದೂ ಗೊತ್ತಾಯಿತು. ಜಾತ್ರೆ ಪರಸೆಗಳ ಕಾಲದಲ್ಲಿ ಇವರುಗಳ ಹಾವಳಿಗೆ ಅವಕಾಶ ದೊರೆಯುತ್ತೆಂದೂ ತಿಳಿದುಬಂತು.

"ಈ ಜಾತ್ರೆಗೂ ಏನಾರೂ ಆ ಕಳ್ಳರ ಗುಂಪಿನೋರು ಬಂದಿರಬಹುದು. ಆದಕ್ಕೇ ಇಲ್ಲಿಗೆ ಬಂದಿರುವವರ ಮೇಲೆ ಕಣ್ಣಿರಿಸುವುದು ಒಳ್ಳೆಯದು" ಎಂದು ಸೊರಬದ ಪ್ಯಾದೆಯಾಗಿದ್ದು. ಈಗ ಮುಳಬಾಗಿಲ ತಳವಾರರಾಗಿದ್ದವರು, ಸಲಹೆಯಿತ್ತರು.

ಬೆಟ್ಟದಪುರದ ತಳವಾರರು ನಕ್ಕರು. ತಕ್ಷಣ ಎಚ್ಚರಗೊಂಡು "ತಪ್ಪಾಯ್ತು ಫೌಜುದಾರರೇ! ನಗಬಾರದಾಗಿತ್ತು. ಆದರೆ ಜಾತ್ರೆಗೆ ಬಂದಿರುವ ಹಾವಾಡಿಗರನ್ನ, ಕೋತಿ ಆಡಿಸೋರನ್ನ, ಬೈರಾಗಿಗಳನ್ನ, ದಾಸಯ್ಯಗಳನ್ನ, ಲಾಳ ಕಟ್ಟಿಸುವವರನ್ನ, ಹಳ್ಳಿಯ ಮುಕ್ಕರನ್ನ, ನಾವು ಕಣ್ಣಿಟ್ಟು ನೋಡಬೇಕಾದರೆ, ನಮ್ಮ ಭಾವಡಿಯಲ್ಲಿ ಮೂರು ನಾಲ್ಕು ಸಾವಿರ ಜನರನ್ನು ಸೇರಿಸಿಕೊಂಡು, ತರಪೇತು ಮಾಡಬೇಕಾಗುತ್ತೆ. ಇದು ಅಸಾಧ್ಯ ಎನ್ನಿಸಿತು" ಎಂದರು.

ಮುಳಬಾಗಿಲ ತಳವಾರರ ಮುಖ ಚಿಕ್ಕದಾಯಿತು. ಬೆಟ್ಟದಪುರಕ್ಕೆ ಹೋಗಿದ್ದ ಕೊತ್ವಾಲರು ನಕ್ಕು, "ತಪ್ಪೊಪ್ಪಿಕೊಂಡು ನುಡಿದ ತಳವಾರರು ಸತ್ಯವನ್ನೇ ಹೇಳಿದ್ದಾರೆ. ಅವರು ಚಳ್ಳೆಹಣ್ಣು ತಿಂದಾಗ ನಾನು ಬೆಟ್ಟದಪುರದಲ್ಲಿದ್ದೆ-ವಿಶ್ರಾಂತಿಗಾಗಿ-ಅವರಿಗಾದ ಮರ್ಯಾದೆ ಭಂಗವೇ ಆ ರೀತಿ ಅವರನ್ನು ನುಡಿಸಿದ್ದು. ಆದರೆ ಸೊರಬದ ತಳವಾರರು ಸೂಚಿಸಿದ್ದು ಎಲ್ಲರ ಮೇಲೂ ಕಣ್ಣಿರಬೇಕೆಂದಲ್ಲ. ಅನುಮಾನ ಬಂದವರ ಮೇಲೆ ಕಣ್ಣಿರಿಸದರಾಯ್ತು ಎಂದು. ಅಂತಹವರನ್ನು ಈ ಜಾತ್ರೆಯಲ್ಲಿ ಯಾರಾದರೂ ಕಂಡಿದ್ದರೆ ಹೇಳಲಿ" ಎಂದು ವಿವರಣೆಯಿತ್ತರು.



"ಗೋವಿಂದಾ, ಗೋವಿಂದಾ ಅಂತ ಜಪಮಾಡ್ತಾ, ಕಣ್ಣು ತೆರೆದೇ ಬಕಪಕ್ಷಿಯಂತೆ ನಿದ್ದೆ ಮಾಡುವವನೊಬ್ಬ ಛತ್ರದ ಕೈಸಾಲೆಯಲ್ಲಿ ಇದ್ದಾನೆ. ಅವನ ಮೇಲೆ ನಿಗಾ ಇಡಬೇಕು ಅನ್ನಿಸುತ್ತೆ" ಎಂದರು ಹಿರಿಯೂರು ತಳವಾರರು.

ಆಗ ಪಿರಿಯಾಪಟ್ಟಣದ ತಳವಾರರು ನಕ್ಕರು. ಎಲ್ಲರೂ ಅವರನ್ನೇ ದುರುದುರು ನೋಡಿದರು. ದುಗುಡದಿಂದ ಆತನಾಗ ಹೇಳಿದ: "ನಮ್ಮ ಊರಿನಲ್ಲೇ ನ್ಯಾಯಾಲಯದಲ್ಲಿ ವಿಚಾರಣೆ ನಡೆದಾಗ, ನಾವೆಲ್ಲಾ ಜಗ್ಗೋಜಿಯು ಸಿಕ್ಕಿದ್ದಾನೆಂದು ಹಿಗ್ಗುತ್ತಿದ್ದಾಗ, ನಾವೆಂತಹ ಮಂಕರು ಎಂಬುದನ್ನು ಕಳ್ಳರ ಗುಂಪಿನವರು ಬಹಿರಂಗ ಪಡಿಸಿದರು. ಈಗಲೂ ಹಾಗೆಯೇ ಆಗುತ್ತೇನೋ ಎಂದು ನನಗನ್ನಿಸುತ್ತಿದೆ. ಯಾಕೆ ಅಂದರೆ 'ಗೋವಿಂದ ಭಕ್ತ' ನಮ್ಮೂರಿನ ಕಡೆಯವನು, ಭಾರಿ ಶ್ರೀಮಂತ. ಅವನ ಹೆಂಡತಿಯು, ಕೂಗು ಬಂದಕಡೆ ಓಡಿದಾಗ, ಆತ ಬಾಳನ್ನೆಲ್ಲಾ ಬಡವರ ಸೇವೆಗೆ ಮೀಸಲಾಗಿರಿಸಿದ. ಮೂವತ್ತು ವರ್ಷಗಳು ದುಡಿದ ಮೇಲೆ, ಲಕ್ವ ಒಡಿದು ಅವನು ಹೆಳವನಾದ. ಆಗ ವಿದುರಾಶ್ವತ್ಥಕ್ಕೆ 'ನಾನು ಮಾಡಿದ ಸೇವೆಗೆ ಇದೇನೇವರ ನೀನು ಕೊಡುವುದು,' ಎಂದು ನೀತಿ ಹೇಳುವ ವಿದುರನನ್ನು ಕೇಳಲು ಅಶ್ವತ್ಥಕಟ್ಟೆಯು ಎದುರಿಗೆ ಯಾವಾಗಲೂ ಕಾಣಿಸುವಂತೆ ಛತ್ರದ ಕೈಸಾಲೆಯ ಮೂಲೆಯಲ್ಲಿ ಬಿದ್ದುಕೊಂಡ. ಆ ತನಕ ತನ್ನ ಸೇವೆಗೆ ಬಂದಿದ್ದ ಊರಿನವರನ್ನು ನೀವು ಹಿಂದಕ್ಕೆ ನಮ್ಮೂರಿಗೆ ಹೋಗಿ. ಇನ್ನು ಮೇಲೆ ದೇವರೇ ನನ್ನ ಸೇವೆ ಮಾಡುತ್ತಾನೆ ಎಂದು ಅವರನ್ನೆಲ್ಲಾ ಕಳಿಸಿಬಿಟ್ಟ. ಆ ದಿನದಿಂದ ಅವನ ಸೇವೆಯನ್ನು ಎಲ್ಲೆಲ್ಲಿಂದಲೋ ಎಂದೂ ಕಾಣದವರು ಬಂದು ಭಕ್ತಿ ಆದರಗಳಿಂದ ಮಾಡುತ್ತಿದ್ದಾರೆ. ಅಂತಹ ದೂರದೃಷ್ಟಿಯುಳ್ಳ, ತನ್ನತನವನ್ನೇ ಕಳೆದುಕೊಂಡ, ಆ ಮಹಾತ್ಮನ ಮೇಲೆ ಕಣ್ಣಿರಿಸಬೇಕು ಎಂದು ಸಲಹೆ ಬಂದಾಗ, ನನಗೆ ನಗು ಬಂತು. ನಮ್ಮೂರಿನಲ್ಲಿ ನನ್ನ ಪಾಡೂ ನಗೆ ಪಾಡಾಗುತ್ತದೆ."

"ಢಣ ಢಣ ಢಣ", ಶಬ್ದವಾಯಿತು.

ಬಿಡಾರದ ಹೊರಸುತ್ತಿನ ಪಹರೆಯವನು ತಮಟೆಯನ್ನು ಬಾರಿಸಿದ. ಫೌಜುದಾರರು ಹೊರಕ್ಕೆ ನಡೆದರು. ಕೊತ್ವಾಲರೂ, ತಳವಾರರೂ ಹಿಂಬಾಲಿಸಿದರು. ಪಹರೆಯವನು, "ಅಶ್ವತ್ಥಕಟ್ಟೆಯ ಬಳಿ ಏನೋ ಆಗಿದೆ, ದೊಂಬಿ ಎದ್ದಿದೆ. ಯಾವನೋ ಮುದುಕನು, ಪ್ರದಕ್ಷಿಣೆ ಹಾಕುತ್ತಿದ್ದ ಹೆಣ್ಣುಮಗಳೊಬ್ಬಳನ್ನು ಮಾತಾಡಿಸಲು ಹೋದನಂತೆ. ಆಕೆಯು ಚೀರಿದಳಂತೆ. ಜನರೆಲ್ಲಾ ಅವನ ಮೇಲೆ ಬಿದ್ದರಂತೆ. ಅವನು ತಪ್ಪಿಸಿಕೊಂಡನಂತೆ. ಎಲ್ಲರೂ ಅವನನ್ನು ತಲಾಷ್ ಮಾಡ್ತಾ ಇದ್ದಾರೆ. ದೊಂಬಿಯೇನಾದರೂ ಬಿಡಾರದ ಕಡೆಗೆ ಬಂದರೆ ಏನಾದೀತೋ ಎಂದು ತುರ್ತು ತಮಟೆಯನ್ನು ಬಾರಿಸಿದೆ" ಎಂದು ಗಾಬರಿಯಿಂದ ಹೇಳಿದನು.

ಆಗೊಬ್ಬನು ಓಡೋಡಿ ಬಂದನು. ಇವರನ್ನೆಲ್ಲಾ ನೋಡಿ, ಒಂದು ಕ್ಷಣ ನಿಂತು ಕುತ್ತಿಗೆಯ ಮೇಲೆಲ್ಲಾ ಕೈಯಾಡಿಸಿ ಕೊಡವಿದನು. ತಿರುಗಿ ಓಡೋಡಿ ತೋಪಿನ ಬಳಿಗೆ ಓಡಿದನು. ಜನರ ಗುಂಪೊಂದು ಇತ್ತ ಕಡೆಗೆ ಡೌಡು ಬರುತ್ತಿತ್ತು.

ಮುಳಬಾಗಿಲ ತಳವಾರನು ಮುಂದೆ ನಿಂತಿದ್ದ. ಓಡಿ ಹೋದವನ ಮೈಯ್ಯಿಂದ

ಠಸ್ ಎಂದು ಏನೋ ಒಂದು ವಸ್ತುವು, ಸುಟ್ಟು ಹೆಪ್ಪುಗಟ್ಟಿದ್ದ ನೆಲದ ಮೇಲೆ ಬಿದ್ದಿತ್ತು. ಏನದು ಎಂದು ನೋಡಲು ಮುಳಬಾಗಿಲ ತಳವಾರರು ಮುಂದೋಡಿದರು. ಎತ್ತಿ ನೋಡಿದರು - ಭೈರವಿ ತಾಯಿತಿ!!-

ಫೌಜುದಾರನ ಕಡೆ ನೋಡಿ, ಜಗ್ಗೋಜಿ! ಎಂದು ಕೂಗಿ ಹೇಳಿ ಮುಳಬಾಗಿಲ ತಳವಾರರು ಓಡಿಹೋದವನ ಹಿಂದೆ ತಾವೂ ಧೌಡೋಡಿದರು. ಮುಂದೆ ಓಡಿದವನು, ಬಳಸಿಕೊಂಡು ಅಶ್ವತ್ಥಕಟ್ಟೆಯನ್ನು ಹಾದು ತೋಪಿನ ಬಳಿಗೆ ಓಡಿದ. ಹಿಂದೆಯೇ ಓಡಿದರು ಮುಳಬಾಗಿಲ ತಳವಾರರು, ಅವರ ಹಿಂದೆಯೇ ಫೌಜುದಾರರು ಮತ್ತು ಮೂವರು ಕೊತ್ವಾಲರೂ ಓಡಿದರು. ತೋಪಿನ ಬಳಿಗೆ ಓಡಿದವನು, ಮೊದಲು ಸಿಕ್ಕಿದ ಕುದುರೆಯ ಬಳಿ ನಿಂತು ಕಟ್ಟುಹಗ್ಗವನ್ನು ಕತ್ತರಿಸಿ, ಅದನ್ನೇರಿ, ಧೌಡು ಓಡಿಸಿಕೊಂಡು ಹೋದ. ಮುಳಬಾಗಿಲ ತಳವಾರರೂ ಹಿಂದೆ ಬಂದ ನಾಲ್ವರೂ ಅಲ್ಲಿ ಕಟ್ಟಿದ್ದ ಕುದುರೆಗಳನ್ನು ಬಿಡಿಸಿಕೊಂಡು ಅವನನ್ನು ಹಿಂಬಾಲಿಸಹೋದಾಗ ದಾರಿಯಲ್ಲಿ ಏಳುತ್ತಿದ್ದ ಧೂಳಿನ ಜಾಡೇ ಅವರಿಗೆ ಹಾದಿಯನ್ನು ಸೂಚಿಸುತ್ತಿತ್ತು.

ಯಾವುದೋ ಹಳ್ಳಿಗೆ ಹೋಗುವ ಕಾಲು ದಾರಿಯಲ್ಲಿ ಮೊದಲ ಕುದುರೆಯವನು ಧೂಳೆಬ್ಬಿಸಿಕೊಂಡು ಧೌಡುತ್ತಿದ್ದ. ಹಿಂಬಾಲಿಸುತ್ತಿದ್ದವರಿಗೆ, ಅರ್ಧ ಹರಿದಾರಿ ದೂರದಲ್ಲಿ ಹಾದಿಯ ಎಡಗಡೆಯಲ್ಲಿ ದೊಡ್ಡ ಬಂಡೆಯೊಂದು ಕಾಣಿಸಿತು. ಅದನ್ನು ದಾಟಿ ಹೋಗುತ್ತಿದ್ದಾಗ ಪ್ರೇತದ ಕೂಗೊಂದು ಕರ್ಕಶವಾಗಿ ಕೇಳಿ ಬಂತು. ನಾಲ್ವರೂ ಗಾಬರಿಯಿಂದ ಹಿಂದೆ ನೋಡಿದರು. ದೊಡ್ಡ ಬಂಡೆ, ಹಿಂದೆ ಬಿದ್ದಿದ್ದ ಎರಡು ಬಂಡೆಗಳು!

ಮುಂದಕ್ಕೆ ಧೌಡೋಡಿದಾಗ, ಧೂಳಿನ ಜಾಡು ಎಡೆಗಡೆಗೆ ತಿರುಗಿತು. ಹಿಪ್ಪೆತೋಪಿನ ಪಕ್ಕದಲ್ಲೇ ಹಾದಿಯು ಕಾಣಿಸಿತು. ಕುದುರೆಗಳನ್ನು ಹತೋಟಿಗೆ ತಂದು, ನಾಲ್ವರೂ ಎಡಕ್ಕೆ ತಿರುಗಿ, ಹಿಪ್ಪೆತೋಪಿನ ಪಕ್ಕದಲ್ಲೇ ಮೆಲ್ಲಗೆ ಓಡಿದರು. ಮುಂದೆ ಓಡುತ್ತಿದ್ದ ಕುದುರೆಯು ಠೋಕರ್ ತಿಂದುಬಿದ್ದಿತು. ಹಿಂಬಾಲಿಸುತ್ತಿದ್ದ ನಾಲ್ವರೂ ಧೌಡೋಡಿ ಅಲ್ಲಿಗೆ ಹೋದಾಗ ಕುದುರೆಯು ಮೈ ಝಾಡಿಸಿಕೊಳ್ಳುತ್ತ ಎದ್ದು ನಿಂತಿತ್ತು.

ಮುಂದೆ ಪಾಪಾಸುಕಳ್ಳಿಯ ದೊಡ್ಡ ಪೊದೆ. ಅದರ ಮುಂದೆ ಪಾಚಿಗಳಿಂದ ಕೂಡಿದ ಹಸಿರು ಕೊಳ! ಗುಳುಗುಳು, ನೀರ್ಗುಳ್ಳೆಗಳು ಕೊಳದ ಮಧ್ಯದಿಂದ ಏಳುತ್ತಿದ್ದುವು.

ಮುಳಬಾಗಿಲ ತಳವಾರರು ನಿಂತು ನೋಡಿದರು. ಫೌಜುದಾರರೂ ಮಿಕ್ಕ ಮೂವರೂ ನೋಡಿದರು.

"ಕಡೆಗೂ ಜಗ್ಗೋಜಿ ನಮ್ಮ ಕೈಗೆ ಸಿಗಲಿಲ್ಲ. ಇನ್ನು ಮೇಲೆ ಅವರ ಬೆದರಿಕೆ ನಮಗಿಲ್ಲವಾದರೂ, ಅವರ ಹೆಣವನ್ನಾದರೂ ಕಾಣಲೇಬೇಕು. ಬಿಡಾರಕ್ಕೆ ಹೋಗಿ, ಬಾವೀಲಿಳಿಯೋರನ್ನ ಕರೆದುಕೊಂಡು ಬರೋಣ" ಎಂದು ಎಲ್ಲರೂ ವಿದುರಾಶ್ವತ್ಥಕ್ಕೆ ಈಗ ಸವಾರನಿಲ್ಲದ ಕುದುರೆಯನ್ನೂ ಓಡಿಸಿಕೊಂಡು ಹಿಂತಿರುಗಿದರು.

ಬಾವಿಯಲ್ಲಿಳಿಯೋರನ್ನು ತಲಾಷ್ ಮಾಡಿ ಕರೆಸೋ ಹೊತ್ತಿಗೆ, ಎಲ್ಲರೂ



ಊಟದ ಶಾಸ್ತ್ರವನ್ನು ಮುಗಿಸಿದ್ದರು. ಕೊಳದ ಬಳಿಗೆ ಹೊರಟಾಗ, ಪಡುವಲ ನೆರಳು ಆಳರ್ಧದಷ್ಟು ಬೀಳುತ್ತಿತ್ತು.

ಕೊಳದ ಬಳಿಗೆ ಹೋಗಿ ಶೋಧಿಸಿದಾಗ ಎರಡು ಮೂರು ವಸ್ತ್ರಗಳು ಸಿಕ್ಕಿದುವು. ಶವ ಯಾವುದೂ ಸಿಗಲಿಲ್ಲ. "ತಳದಲ್ಲಿ ಬಂಡೆ ಕೊರಕಲುಗಳಿವೆ, ಎಲ್ಲಾದರೂ ಸಿಕ್ಕಿ ಹಾಕಿಕೊಂಡಿದ್ದರೆ ಮೂರು ನಾಲ್ಕು ದಿನಗಳಲ್ಲಿ ಅದೇ ತೇಲಿ ಬರುತ್ತದೆ" ಎಂದು ಬಾವಿಗೆ ಇಳಿಯೋರು ಹೇಳಿದರು.

ಸಿಕ್ಕಿದ ಬಟ್ಟೆಗಳನ್ನೇ ತೆಗೆದುಕೊಂಡು, ಎಲ್ಲರೂ ಹಿಂತಿರುಗಿದರು.

ನಾಲ್ಕನೇ ದಿನವೇ ಭೇಣಿ ಛಾವಡಿಯ ಭಕ್ಷಿಗಳು ಬಂದರು. ಫೌಜುದಾರರು ವಿವರಗಳನ್ನೆಲ್ಲಾ ಕೊಟ್ಟರು. ಜಗ್ಗೋಜಿಯು ಕೊಳದಲ್ಲಿ ಬಿದ್ದು ಸತ್ತುಹೋದ. ಅವನೇ ಇಂತಹ ಕಳ್ಳತನಗಳಿಗೆಲ್ಲಾ ಮುಖ್ಯಸ್ಥ; ಎಂದೆಲ್ಲಾ ಹೇಳಿದರು. ಕಾರಣಗಳನ್ನೂ ಅರಿಕೆ ಮಾಡಿಕೊಂಡರು.

ಭಕ್ಷಿಗಳು ಫೌಜುದಾರರ, ಕೊತ್ವಾಲರ, ಮುಳಬಾಗಿಲ ತಳವಾರರ, ಜಾಣತನದ ಕೆಲಸವನ್ನು ಮೆಚ್ಚಿ ಹೊಗಳಿದರು. ಆದರೂ, ದನಿಯನ್ನು ಕೆಳಗೆ ಮಾಡಿ, ಹಾಗೂ ಕೇಳಿಸುವಂತೆ,

"ಪೂಜೆಗೆ ಬಂದಿದ್ದ ಅರಿಯದ ಹೆಣ್ಣು ಮಗಳೊಬ್ಬಳ ಬಳಿ ನಡು ಹಗಲಲ್ಲಿಏಕಾದರೂ ಆಗಲಿ ಮಾತನಾಡುವವ ಇಂತಹ ಕಳ್ಳನಿರಲಾರ, ಅಂತಹವನಿಗೆ ದೈವೀಶಕ್ತಿಯಾದರೂ ಹೇಗೆ ಬಂದಿದ್ದೀತು. ಅವನು ಜಗ್ಗೋಜಿಯಾದರೂ ಆಗಿರಬಹುದೇ?" ಎಂದು ತಮಗೆ ತೋರಿ ಬಂದ ಅನುಮಾನವನ್ನೂ ಹೇಳಿಯೇಬಿಟ್ಟರು.

"ಏನೇ ಆಗಲಿ! ಭಕ್ಷಿಯವರೇ, ಈ ಗುಂಪಿನವರು ಇನ್ನು ಮುಂದೆ ತಮ್ಮ ಕಳ್ಳತನವನ್ನು ಮಾಡಲಾರರು. ಅಷ್ಟು ಹೆದರಿಕೆಯನ್ನು ಹುಟ್ಟಿಸಿದ್ದೇವೆ" ಎಂದು ಫೌಜುದಾರರು ಹೇಳಿದರು.

"ನನಗೂ ಹಾಗನ್ನಿಸುತ್ತೆ" ಎಂದು ಭಕ್ಷಿಯವರು ಸಮಾಧಾನದ ಮಾತುಗಳನ್ನು ಹೇಳಿದರು.

* * * *

ಕೊಂಡನಕಪಲ್ಲಿಯ ಆಲದತೋಪಿನ ಭೈರವಿ ಗುಡಿಯಲ್ಲಿ ಪೂಜೆಮಾಡುತ್ತಾ ಧ್ಯಾನಾಸಕ್ತನಾದ ಮುದುಕನೊಬ್ಬನೆದುರಿಗೆ, ಯುವಕನೊಬ್ಬನು ಬಂದು ಅಡ್ಡಬಿದ್ದು, ಕೈಜೋಡಿಸಿ ಕುಳಿತಿದ್ದಾನೆ. ಎವೆಯಿಕ್ಕದೆ ಪೂಜೆ ಮಾಡುತ್ತಿದ್ದವನನ್ನೇ ನೋಡುತ್ತಿದ್ದಾನೆ. ಕಣ್ಣು ಕೋರೈಸುವ ಹೊಳಪು ಅವನಿಗೆ ಕಂಡಿತು. ಆ ಕಡೆಗೆ ದೃಷ್ಟಿ ಹೊರಳಿಸಿದಾಗ ಯುವಕನಿಗೆ ಕಂಡು ಬಂದುದು, ಏನು? ಭೈರವೀ ವಿಗ್ರಹದ ಹಿಂದೆ ಹೆಡೆಯೆತ್ತಿ ನಿಂತಿದ್ದ ಕಾಳಿಂಗ ಸರ್ಪ! ಸರ್ಪದ ಹೆಡೆಯಲ್ಲಿದ್ದ ನಾಗಮಣಿಯ ಬೆಳಕಿನಲ್ಲಿ ಭೈರವೀ ವಿಗ್ರಹವು ಚೆಂದ ಕಾಣಿಸುತ್ತಿದೆ!

ಧ್ಯಾನದಿಂದ ಎಚ್ಚೆತ್ತ ಪೂಜೆ ಮಾಡುತ್ತಿದ್ದವನೂ ಅತ್ತ ಕಡೆಗೇ ಕಣ್ಣೋಟವನ್ನು ನೆಟ್ಟಿದ್ದಾನೆ.

ಸರಸರ ಶಬ್ದವಾಯಿತು. ಕಾಳಿಂಗವು ಸರಿದುಹೋಯಿತು.

ಭೈರವಿ ಗುಡಿಯಂಕಣವು ಕತ್ತಲೆಯಿಂದ ಕೂಡಿತು.

ಪೂಜಾರಿಯು ಇತ್ತಕಡೆಗೆ ದೃಷ್ಟಿ ಹಾಯಿಸಿದ. ಯುವಕನನ್ನು ಕಂಡ.

ಯುವಕನು ಕೆನ್ನೆಗಳನ್ನು ಬಡಿದುಕೊಂಡು ಉದ್ವೇಗದಿಂದ "ಪೂಜಾರಪ್ಪನೋರೇ! ಬಲು ತಪ್ಪು ಮಾಡಿದೆ. ಒಂದೇ ದಿನದಲ್ಲಿ ಹಿಂದಕ್ಕೆ ಬರುತ್ತೇನೆ ಎಂದು ಹೇಳಿ ನಿಮ್ಮ ಹರಕೆ ಹೊತ್ತು ಹೋದೆ. ಗೋವಿಂದ ಭಕ್ತರ ಕಾಲ ಸೇವೆ ಮಾಡಿದೆ. ಎಲ್ಲೆಲ್ಲಿಂದಲೂ ಕೊತ್ವಾಲರೂ, ತಳವಾರರೂ, ಎಲ್ಲರೂ ಫೌಜುದಾರರ ಬಿಡಾರಕ್ಕೆ ಬಂದಿದ್ದಾರೆಂದು ಅಲ್ಲಿ ತಿಳಿಯಿತು. ನನ್ನ ಪರಿಚಿತರೇ ಅವರೆಲ್ಲಾ! ನೋಡೋಣ ಏನೇನು ಮಾಡ್ತಾರೆ ಅಂತ ಇನ್ನೊಂದು ದಿನ ಗೋವಿಂದ ಭಕ್ತರ ಕಾಲಸೇವೆ ಮಾಡುತ್ತ ನಿಂತೆ.

ಎರಡನೆ ದಿನ ನಿಮ್ಮ ಹಾಗೇ ಇದ್ದವರನ್ನು ಛತ್ರದ ಎದುರಿಗೆ ಕಂಡಾಗ ಅಶ್ವತ್ಥಕಟ್ಟೆಯ ಮೇಲೆ ಹೆಣ್ಮಗಳನ್ನು ಮಾತನಾಡಿಸಿದಾಗ, ಎಲಾ! ಪೂಜಾರಪ್ಪನೋರು! ಇವರ್ಯಾಕೆ ಇತ್ತ ಬಂದರು ಎಂದು ಶಂಕೆ ಹುಟ್ಟಿತು. ಹೇಳಿದ ಹೊತ್ತಿಗೆ ಬಾರದಿದ್ದಕ್ಕೇನಾದರೂ ಹುಡುಕಿಕೊಂಡು ಬಂದರೋ ಎಂಬ ಯೋಚನೆ ಕೊರೆಯತೊಡಗಿತು. ಅದಕ್ಕೇ ಆ ಕ್ಷಣವೇ ಹೊರಟು ಮನೆಗೆ ಬಂದೆ. ನೀವಿದ್ದಿಲ್ಲ! ತುಂಬಾ ಭಯವಾಯ್ತು. ತಾಯಗುಡಿಯ ಬಳಿಗೆ ಬಂದು ನೋಡಿದೆ. ಇಲ್ಲೇ ಇದ್ದಿರಿ. ಪೂಜೆಮಾಡಿ ಧ್ಯಾನದಲ್ಲಿದ್ದಿರಿ, ಮುಗಿಯಲಿ ಅಂತಕಾದೆ" ಎಂದು ಹೇಳಿದ.

"ಇದೆಲ್ಲಾ ಭೈರವಿಯ ಮಾಯೆ! ಜಗ್ಗೋಜಿ!! ನೀನ್ಯಾಕೆ ಇದಕ್ಕೋಸ್ಕರ ಕೊರಗಬೇಕು!

ವಿದುರಾಶ್ವತ್ಥದ ಜಾತ್ರೆಗೆ ಯಾರೂ ಹೋಗಕೂಡದು ಎಂದು ಹೇಳಿದ್ದ ನಾನು ತಿಂಗಳುಬೆಳಕಿನಲ್ಲಿ ನೀನು ಬಂದು ಗೋವಿಂದ ಭಕ್ತರ ಕಾಲುಸೇವೆ ಮಾಡುತ್ತೇನೆಂದು ಕೇಳಿದಾಗ, ಹ್ಞೂ ಎಂದೆ ನೀನತ್ತ ಹೊರಟೆ.

ಇತ್ತ ನಾ ಬೆಳದಿಂಗಳಿನಲ್ಲಿ, ಭೈರವಿ ಗುಡಿಗೆ ಬಂದಾಗ, ಗುಡಿಯೊಳಕ್ಕೆ ಹೋಗಲು ಆಗಲಿಲ್ಲ-ಕಾಳಿಂಗ ಸರ್ಪವು ಬುಸುಗುಟ್ಟುತ್ತಾ ಬಾಗಿಲಲ್ಲೇ ಕಾವಲು ಕಾಯುತ್ತಿತ್ತು. ಅಪಶಕುನಗಳೇ ಆದುವು. ಯಾರೋ ಅರಿಯದವರು ಸ್ವಾರ್ಥಕ್ಕಾಗಿ ಮಾಟ ಮಾಡುತ್ತಿದ್ದಾರೆ ಎನಿಸಿತು.

ನಾನೇನೋ ತಪ್ಪುಮಾಡಿದೆ. ಮಕ್ಕಳಿಗೆ ಅನ್ಯಾಯ ಮಾಡಿದೆ ಎಂಬ ಅನುಮಾನವು ಬಂತು. ನಿನ್ನ ನೆನಪಾಯ್ತು! ಕೊತ್ವಾಲರೆಲ್ಲಾ ಸೇರಿದ ಕಡೆಗೆ ನಿನ್ನ ಕಳಿಸಿದ್ದು ತಪ್ಪಾಯ್ತು ಎನಿಸಿತು.

ವಿದುರಾಶ್ವತ್ಥಕ್ಕೆ ಓಡಿದೆ. ಛತ್ರದ ಕೈಸಾಲೆಯಲ್ಲಿ ನೀನು ಗೋವಿಂದ ಭಕ್ತರ ಕಾಲ ತೊಳೆಯುತ್ತಿದ್ದುದನ್ನು ಕಂಡೆ. ಮನಸ್ಸು ಹಗೂರಾಯಿತು. ಅಶ್ವತ್ಥದ ಪ್ರದಕ್ಷಿಣೆ ಹಾಕಿ



ಹೋಗೋಣವೆಂದು ಕಟ್ಟೆಯ ಮೇಲೇರಿದೆ. ಮುಂದೆ ಒಂದು ಹೆಣ್ಮಗಳು ನಡೀತಿದ್ದಳು. ಅವಳ ಬಲಗಾಲ ಹತ್ತಿರ ಇದ್ದ ನಾಗರಕಲ್ಲಿನ ಬಳಿ ಹಲ್ಲಿಯೊಂದಿತ್ತು. ಅದರ ಮೇಲೆ ಕಾಲಿಟ್ಟುಬಿಡ್ತಾಳೇನೋ ಅಂತ ಹಲ್ಲಿಹಲ್ಲಿ ಎಂದೆ. ಆ ಹೆಣ್ಮಗಳು ಅಯ್ಯೋ ಅಂತ ಚೀರಿದಳು, ಬೀಳೋ ಹಾಗಾದಳು, ಹಿಡಕೊಂಡೆ. ದೊಂಬಿ ಜನ ಹೆಣ್ಮಗಳನ್ನು ಮುಟ್ತಾನೆ ಹೊಡೀಲರ್ಾ- ಹಿಡೀಲರ್ಾ ಎಂದು ಕೂಗಲಾರಂಭಿಸಿತು - ಓಡಿದೆ, ಬಯಲು ಕಡೆಗೆ ಓಡಿದೆ. ಅಲ್ಲಿ ಫೌಜುದಾರರ ಬಿಡಾರವು ಹಾಕಲ್ಪಟ್ಟಿತ್ತು. ಭೈರವಿ ತಾಯಿತಿಯನ್ನು ಮುಟ್ಟಲು ಕೈ ಹಾಕಿದೆ. ಬುದ್ಧಿ ಕಾಲಿಗೆ ಹರಿಯಿತು. ಓಡಿದೆ. ಹುಣಸೇತೋಪಿನ ಬಳಿ ಕುದುರೆಗಳ ಸಾಲು ನಿಂತಿತ್ತು. ಮೊದಲು ಸಿಕ್ಕ ಕುದುರೆ ಕಟ್ಟುಗಳನ್ನು ಹರಿದು ಧೌಡೋಡಿದೆ. ಕುದುರೆಯೇ ದಾರಿ ತೋರಿಸಿತು. ಹಿಂದೆಯೇ ನಾಲ್ವರು ಬಂದ್ರು. ಕೊಂಡೆನಕಪಲ್ಲಿಯ ಕಡೆಗೇ ಕುದುರೆಯು ಓಡಿತು. ಹುಷಾರು ಬಂಡೆಯ ಬಳಿ ಪ್ರೇತದಕೂಗು ಕೇಳಿಸಿದಾಗ ನಮ್ಮವರಿದ್ದಾರೆ ಎಂಬ ಧೈರ್ಯವು ಬಂತು. ಹಿಪ್ಪೆ ತೋಪಿನಂಚಿಗೆ ಬಂದಾಗ, ಕುದುರೆಯ ಮೇಲಿಂದ, ಛಂಗಿ ಸಿಕ್ಕ ಕೊಂಬೆಯನ್ನು ಹಿಡಿದು ಮರವನ್ನೇರಿ ಎಲೆಗಳ ಹಿಂದೆ ಮರೆಯಾದೆ. ಕುದುರೆಯು ಮುಂದಕ್ಕೆ ಹೋಗಿ ಪಾಪಾಸು ಕಳ್ಳಿಯನ್ನು ನೋಡಿ ಝುಟ್ಟಂತ ನಿಂತಿತು. ರೋಕರ್ ಹೊಡೆಯಿತು. ಹಿಂದೆ ಬಂದ ನಾಲ್ವರೂ ಕೊಳವನ್ನು ನೋಡುತ್ತ ನಿಂತಿದ್ದನ್ನು ಕಂಡೆ. ಅವರು ಬಿಡಾರಕ್ಕೆ ಹೋದಾಗ, ಬಟ್ಟೆಗಳನ್ನು ಬಿಚ್ಚಿ, ಸಿಕ್ಕಿದ ಕಲ್ಲನ್ನು ಕಟ್ಟಿಕೊಳಮೊಳಕ್ಕೆ ಎಸೆದು ಭೈರವಿ ಗುಡಿಗೆ ನಡೆದು ಬಂದೆ. ಆ ವೇಳೆಗೆ, ತುಸು ಯೋಚಿಸಿದ ಮೇಲೆ 'ಗೋವಿಂದ ಭಕ್ತರ ಕಾಲ ಹಿಡಿದ ನಿನ್ನ ಯೋಚನೆಯು' ಬಿಟ್ಟು ಹೋಗಿತ್ತು. ನಿನ್ನ ತಪ್ಪೇನಿದೆ ಇದರಲ್ಲಿ. ಯುವಕನಿಗೆ ಸಹಜವಾದುದನ್ನೇ ಮಾಡಿದೆ. ಆದರೆ ನನ್ನ ತಪ್ಪು ಬಹಳವಿತ್ತು. ನನ್ನ ಜಗ್ಗೋಜಿಯ ಬೆಂಬಲಕ್ಕೆಂದು ಓಡಿದೆ. ಗೋವಿಂದ ಭಕ್ತನ ಜಗ್ಗೋಜಿ ಎಂಬ ಪಾಠವನ್ನು ಈಗ ಅರಿತೆ.

ನಿನಗಿದೆಲ್ಲಾ ಈಗ ಅರ್ಥವಾಗುವುದಿಲ್ಲ. ಆದರೂ ನಾನಾಡಿದ ಮಾತುಗಳು ಮರೆಯಲಾಗುವುದಿಲ್ಲ. ನನ್ನ ವಯಸ್ಸು ಬರುವುದಕ್ಕೆ ಮೊದಲೇ, ನಿನಗೆ ಇದರ ಪೂರ್ಣವಾದ ಅರ್ಥವು ಬಂದೇ ಬರುತ್ತದೆ.

ಅದೇ ಭೈರವಿಯ ನಿಯಮ!" ಎಂದು ಪೂಜಾರಪ್ಪನು ಹೇಳಿದನು.

ಜಗ್ಗೋಜಿಯು ಒಂದೊಂದು ಮಾತನ್ನೂ ಕಿವಿಗಳೆರಡರಲ್ಲೂ ಕೇಳಿದನು. ಅರ್ಥವಾಗದೆ ಕಿವಿಗಳ ಮಧ್ಯೆ ಇದ್ದ ತಲೆಯನ್ನು ಪೂಜಾರಪ್ಪ ಕಾಲಬಳಿ ಹಾಕುತ್ತ ಅಡ್ಡಬಿದ್ದನು.

# ಕೊನೆಯ ಮಾತು

ಈ ಕತೆಗಳೆಲ್ಲವನ್ನೂ ಹೇಳುವುದಕ್ಕೆ ಮೂರು ದಿನಗಳಾದುವು. ಇನ್ನೂ ಕತೆಗಳನ್ನು ಚಿಕ್ಕಣ್ಣಯ್ಯ ಹೇಳಬೇಕು. ಆದರೆ ಶಾಮಣ್ಣ ಹಿಂತಿರುಗಿದ್ದ. ಭೈರವಿ ಗುಡಿಯ ಹಕ್ಕಿನ ಪೂಜಾರಿಯೂ ಹಿಂತಿರುಗಿದ್ದ. ಎಲ್ಲರೂ ಹೋಗಿ ಪೂಜೆ ಹಾಕಿದೆವು. ಹಿಟ್ಟಿನ ಕುರಿಯಾದರೂ, ಪೂಜಾರಿಯು ಮಂತ್ರ ಹೇಳಿ ಅದರ ಕತ್ತನ್ನು ಲಟಕ್ಕನಿಸಿದಾಗ ನನಗೇನೋ ಒಂದು ತರಹಾ ಆಯಿತು. ಮೂರು ದಿನದ ಪೂಜೆಯನ್ನು ಮುಗಿಸಿದೆವು.

"ನೀವು ಬಂದಾಗ ಮೊದಲ ಮೂರು ದಿನ ಊರುಬಿಟ್ಟು ಹೋಗಬೇಕಾಯಿತು. ನಿಮಗೆ ಬಹಳ ಬೇಜಾರಾಯ್ತೇನೋ" ಎಂದ ಶಾಮಣ್ಣ, ನಾವೆಲ್ಲಾ ನಮ್ಮೂರಿಗೆ ಹಿಂತಿರುಗುವ ಏರ್ಪಾಡಿನಲ್ಲಿದ್ದಾಗ.

"ಛೇ! ಛೇ! ಬೇಜಾರು ಯಾಕಾದೀತು. ಚಿಕ್ಕಣ್ಣಯ್ಯ ಕೊಂಡೆನಕಪಲ್ಲಿಯ ವಿಷಯವನ್ನೆಲ್ಲಾ ಹೇಳುತ್ತಿದ್ದರು. ಅದೇನು ಲಕ್ಷಣವಾಗಿ ಕತೆ ಹೇಳ್ತಾರೆ ಅಂತ ಶಾಮಣ್ಣ? ಇನ್ನೆರಡು ದಿನ ನೀನು ಬರದೇ ಇದ್ದರೆ ಇನ್ನೂ ನಾಲ್ಕು ಕತೆಗಳನ್ನು ಹೇಳುತ್ತಿದ್ದರು. ಇನ್ನೊಂದು ಸರ್ತಿ ಬಂದಾಗ, ನಾನು ಬದುಕಿದ್ದರೆ, ಮಿಕ್ಕ ಕತೆಗಳನ್ನ ಹೇಳ್ತೀನಿ ಎಂದು ಹೇಳಿದರು" ಎಂದೆ.

"ಚಿಕ್ಕಣ್ಣಯ್ಯ ಅಷ್ಟು ಬೇಗ ಸಾಯುಲ್ಲ. ಶಿವು, ಬದುಕಬೇಕು ಅಂತ ಅವರಿಗೆ ಆಸೆ ಏನೂ ಇಲ್ಲ. ಅದಕ್ಕೇ ಸಾಯೋದು ಇಲ್ಲ. ಇನ್ನೊಂದು ಸರ್ತಿ ಬಾ" ಎಂದ ಶಾಮಣ್ಣ.

"ಮೈಯೆಲ್ಲಾ ಅಷ್ಟು ಗಟ್ಟಿ ಗಡಿತವಾಗಿದೆ, ಚಿಕ್ಕಣ್ಣಯ್ಯನಿಗೆ. ಕಣ್ಣಿಗೆ ಮಾತ್ರ ಕುರುಡು ಯಾಕೆ ಬಂತು? ಶಾಮಣ್ಣ" ಎಂದೆ.

"ಅವರನ್ನ ಕೇಳಲಿಲ್ಲ ತಾನೆ? ನೀನು! ಕೇಳಿದ್ದರೆ ತುಂಬಾ ನೊಂದುಕೊಂಡಿರೋರು! ಒಂದು ಸಾರಿ ಅರವತ್ತರ ಪ್ರಾಯದ ಹುಮ್ಮಸ್ಸಿನಲ್ಲಿ ಚಿಕ್ಕಣ್ಣಯ್ಯ ಒಂದು ದುರ್ಗಾಷ್ಟಮಿಯ ಸಂಜೆ ಭೈರವಿ ಗುಡಿಗೆ ಒಬ್ಬರೇ ಹೋದರು. ಯಾರಿಗೂ ಹೇಳಲಿಲ್ಲ. ಯಾರನ್ನೂ ಕೇಳಲಿಲ್ಲ, ಗುಡಿ ಬಾಗಿಲು ನೂಕಿದರಂತೆ. ಭೈರವಿಯ ಮೇಲೆ ಕಾಳಿಂಗ ನಾಗರವು ಹೆಡೆಯೆತ್ತಿತ್ತಂತೆ.ಆದರ ಹೆಡೆಯಲ್ಲಿದ್ದ ನಾಗಮಣಿಯ ಕಾಂತಿಯಿಂದ ಭೈರವಿ ವಿಗ್ರಹವು ಚೆನ್ನಾಗಿ ಕ್ರೂರವಾಗಿ ಕಾಣಿಸಿತಂತೆ. ನಾಗರಹಾವನ್ನು ಕಂಡೊಡನೇ ಚಿಕ್ಕಣ್ಣಯ್ಯ ಹಳ್ಳಿಯ ಕಡೆಗೆ ಓಡೋಡಿ ಬಂದರು. ಕಣ್ಣೆಲ್ಲಾ ಉರಿಯುತ್ತೆ, ಮೈಯೆಲ್ಲಾ ಉರಿಯುತ್ತೆ ಎಂದರು. ಮಹಾನವಮಿಯ ದಿನ, 'ಶಾಮಣ್ಣ ಎಲ್ಲಿದಿಯೋ, ಕಾಣಿಸೋದೇ ಇಲ್ಲವಲ್ಲೋ' ಎಂದರು. ಎದುರಿಗೇ ನಿಂತಿದ್ದೆ. 'ಇಲ್ಲೇ ಇದೀನಲ್ಲಾ', ಎಂದೆ. "ಹಾದೇನೋ! ಸರಿ ಬಿಡು, ನೋಡಬಾರದ್ದನ್ನು ನೋಡಹೋದೆ, ಆಗಬಾರದ್ದು ಆಯಿತು. ಇನ್ನು ಮೇಲೆ

ನೀನೇ ನನ್ನ ಕಣ್ಣು, ಶಾಮಣ್ಣ' ಎಂದರು ಚಿಕ್ಕಣ್ಣಯ್ಯ. ಮುಖ ಸ್ವಲ್ಪ ದುಃಖದಿಂದ ಕೂಡಿದಂತಿತ್ತು. ಆದರೆ ಕಣ್ಣೀರು ಹಾಕಲಿಲ್ಲ, ದನಿ ನಡುಗಲಿಲ್ಲ.

ಅದಕ್ಕೇ ಶಿವು, ನಾನು ಈ ಹಳ್ಳಿಯಲ್ಲೇ ಉಳಿದುಕೊಂಡೆ. ಬೆಂಗಳೂರಿಗೆ ಮುಂದಿನ ಓದಿಗೆ ಹೋಗಬೇಕಾಗಿತ್ತು. ಆದರೆ ಚಿಕ್ಕಣ್ಣಯ್ಯನ ಕಣ್ಣಾಗಿದ್ದೆ. ಇಲ್ಲಿದ್ದು ಇವರನ್ನು ನೋಡಿಕೊಂಡರೆ ಅದೂ ಒಂದು ಬಾಳು ಎನ್ನಿಸಿತು. ಇಲ್ಲೇ ಇದ್ದುಬಿಟ್ಟೆ. ದಾಯಾದಿಗಳೆಲ್ಲರೂ ಹೊರಗೆ ಹೋಗಿ ಬಾಳ್ತಾ ಇದಾರೆ. ನಾನೀ ಕೊಂಪೆಯಲ್ಲಿ ಕಪ್ಪೆಯಾಗಿ ಕೂತಿದ್ದೇನೆ. ಹಾಗೆ ಕೂತಿದ್ದೇನೆ ಅಂತ ದುಃಖ ಕೂಡ ಇಲ್ಲ ನೋಡು, ಶಿವು! ಅಷ್ಟು ಸಣ್ಣದಾಗಿದೆ ನನ್ನ ಮನಸ್ಸು" ಎಂದ ಶಾಮಣ್ಣ, ಕಿರುನಗೆ ನಗುತ್ತಾ.

* * * *

ಕೊಂಡೆನಕಪಲ್ಲಿಯಿಂದ ಹಿಂತಿರುಗಿದ ಮೇಲೆ ಅನ್ನಿಸಿತು. ಇನ್ನೊಂದು ಸರ್ತಿ ಬೇಗ ಹೋಗಿ, ಎಲ್ಲ ಕತೆಗಳನ್ನು ಕೇಳಿಕೊಂಡು ಬಂದು ವರದಿ ಬರೆದಿಡೋಣ ಎಂದು. ಆಮೇಲೆ ಅನ್ನಿಸಿತು, ಆಗ ಪ್ರಮೇಯ ಒದಗಿದಂತೆ, ಒದಗಿದರೇನೇ, ನಾವೆಲ್ಲಾ ಹೋಗೋದು ಮೇಲೆ ಬಿದ್ದು ಹೋಗೋದಲ್ಲ ನನ್ನ ಜಾಯಮಾನ ಎಂದು. ಅಂತಹ ಪ್ರಮೇಯ ತಿರುಗಿ ಬರಲೇಬೇಡಪ್ಪ ಎಂದೂ ಅನ್ನಿಸಿತು.

ಅದಕ್ಕೇ ಕೇಳಿದ್ದಷ್ಟನ್ನು ವರದಿ ಬರೆದಿಟ್ಟುಬಿಡೋಣ. ಎಲ್ಲವೂ ತಿಳಿಯೋದಕ್ಕೆ ಆದರೆ, ಕಾಲ ಮೀರಬಹುದು ಎಂದು ಮನಸ್ಸು ಹೇಳಿತು, ಅದಕ್ಕೇ ಬರೆದಿಟ್ಟೆ. ಚಿಕ್ಕಣ್ಣಯ್ಯ ಹೇಳುವಾಗ ತೋರಿದ ಕೌಶಲ್ಯ ಸೊಬಗು ಇವೆಲ್ಲವೂ ಅಚ್ಚಿನಲ್ಲಿ ಬಂದಾಗ ಕಳೆದುಹೋಗಿ, ತಬ್ಬಲಿಯ ಕಳೆ ಬಂದಿರುತ್ತದೆ. ಆದರೂ ತಬ್ಬಲಿಗಳೂ ಕೂಡ ಒಮ್ಮೊಮ್ಮೆ ಮನಸ್ಸಿಗೆ ತಂಪೆರೆಯುತ್ತಾರೆ, ಕರುಳು ಸೆಳೆಯುತ್ತಾರೆ, ಅಲ್ಲವೇ ?

ಶಾಮಣ್ಣನಿಗೆ ಸಿಕ್ಕಿದ ಹಾಗೆ ಸುಲಭವಾಗಿ ನನಗೆ ಬಾಳಿನ ಗುರಿ ಸಿಗಲಿಲ್ಲ- ಅದಕ್ಕೇ ಬರೆಯಬೇಕಾಯ್ತು!! ಹೀಗಾದರೂ ಸಿಗುತ್ತೇನೋ ಎಂಬ ಆಸೆ. - ಶಿವು.



ರಾಶಿಯುವರ ಮೊದಲ ಒಲವು ನಗೆಸಾಹಿತ್ಯವಾಗಿದ್ದರೂ, ಅವರಿಗೆ ಕಳ್ಳರ ಹಾಗೂ ದೆವ್ವ ಪಿಶಾಚಿಗಳ ಕುರಿತು ಕಥೆ ಹೆಣೆಯುವುದರಲ್ಲಿ ಬಹಳ ಆಸಕ್ತಿ. 'ಜಗ್ಗೊಜಿ' ಅವರ ಲೇಖನಿಯಿಂದ ಮೂಡಿಬಂದ ಅತ್ಯುತ್ತಮ ಕಳ್ಳನ ಪಾತ್ರ ಅನಿಸುತ್ತದೆ. ಆತ, ಇಂಗ್ಲೆಂಡಿನ ಜಾನಪದದಲ್ಲಿ ಹಾಡಿಹೊಗಳುವ ರಾಬಿನ್‌ಹುಡ್ ನಂತೆ ಉಳ್ಳವರಿಂದ ಹಣ ದೋಚಿ ಬಡಬಗ್ಗರಿಗೆ ಅದನ್ನು ದಾನಮಾಡುವ ಹವ್ಯಾಸವನ್ನು ರೂಢಿಸಿಕೊಂಡಿದ್ದನಂತೆ.

ರಾಶಿಯವರ ಅಸಾಧಾರಣ ಕಲ್ಪನಾ ಲಹರಿಯಲ್ಲಿ ಜಗ್ಗೊಜಿಯ ಸಾಹಸಗಳು ನಿಜಕ್ಕೂ ಅತ್ಯಂತ ಆಸಕ್ತಿ ಮೂಡಿಸುವ ಕಥನಗಳ[illegible] ಮೂಡಿಬಂದಿದೆ. ೧೯ನೇ ಶತಮಾನ [illegible]ಭಾಗದಲ್ಲಿ ನಮ್ಮ ನಾಡಿನ ಜನ ಜೀ[illegible]ದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ರಾಶಿಯುವರು ಇಲ್ಲಿ ವರ್ಣಿಸಿದ್ದಾರೆ.



ISBN 81-89818-45-7
9 788189 818456 07

ಬೆಲೆ ರೂ. 95/-



ವಸಂತ ಪ್ರಕಾಶನ
ನಂ.360, 10 'ಬಿ' ಮೈನ್, 3ನೇ ಬ್ಲಾಕ್ ಜಯನಗರ, ಬೆಂಗಳೂರು-560 011.
ದೂರವಾಣಿ: 22443996, 22287876